

# ಹೊಸತು




ನಮ್ಮದಿಯ ನಾಳೆ ನಮ್ಮದು

ನವೆಂಬರ್ ೨೦೦೦
ಬೆಲೆ : ರೂ. ೧೦

* ಕೋಲಾರದ ಚಿನ್ನದ ಗಣಿ
* ಜಾಗತೀಕರಣ ಮತ್ತು ಭಾರತ
* ಸ್ಥಿತ್ಯಂತರದಲ್ಲಿ ಇಂದಿನ ಜಗತ್ತು
* ಕಪ್ಪು ಜನಾಂಗದ ಕತ್ತಲು ಭವಿಷ್ಯ
* ಕನ್ನಡ ಕಾವ್ಯಮೀಮಾಂಸೆಯ ನೆಲೆ
* ಮಾನವ ಜೀನೋಮ್ ಯೋಜನೆ
* ಖ-ಭೌತ ವಿಜ್ಞಾನ ಸಂಸ್ಥೆಯ ಹಗರಣ

**SOFTWARE TRAINING FROM SOFTWARE DEVELOPERS**

*To add Value for your Career*

Click On



# Advanced JAVA

# SDT LIVE PROJECT

With its commitment to **Quality Education, Shri MM Softek** presents **Advanced Java & SDT (LIVE PROJECT). Specially designed courses by Industry Professionals,** with in-depth coverage of syllabus, practical exposure special emphasis on all stages of development life cycle - **you'll soon emerge as a confident, competent, fire-in the belly Software Professional**

10 years IN iT

SHRI MM SOFTEK AMBIENCE

## ADVANCED JAVA

**with RMI, JDBC, SERVLETS, JAVABEANS, CGI, PERL.**

## SOFTWARE DEVELOPMENT TRAINING (LIVE PROJECT)

**with Special Emphasis on All Stages Of Development Life Cycle, Hands on Experience on a LIVE PROJECT, Interactions with Industry Experts.**

Emerge as a winner with **SDT (LIVE PROJECT)** using Advanced Java.



# SHRI MM SOFTEK LTD

## Training Division

**H.O : Ph.: 080 - 6992001, 6678978.**

**BANGALORE CENTRES** : ● #4, Anand Tower, Mallikarjuna Temple Street, **DVG Rd. Cross,** Basavanagudi. **Ph : 6603710, 6992003,** ● #23/1, Hare Krishna Road, Opp. Shivananda Petrol Bunk, **Kumara Park. Ph: 2263112, 2258803.** ● #16/A, Ist Floor, 50 Feet Road, 26th Cross, Avalahalli, **Girinagar : Ph: 6720635. MYSORE :** #212, Akshaya Mansion, Narayan Shastri Road, K.R.Mohalla. **Ph: 430132**
**MANGALORE :** Pailand Buildings, 2nd Floor, Eastern Wing, P.M.Rao Road, Hampankatta. **Ph: 444279.**
**PUTTUR :** Ist Floor, Vimlesh Complex, Darbe. **Ph: 24440.**

* Courses at Selected Centres Only.

www.mitragroup.com

# ಹೊಸತು

ಒಳಗೇನಿದೆ.....



*ಚಿತ್ರಗಳು : ರವಿಕುಮಾರ್ ಅಜ್ಜೀಪುರ, ಹರಿಣಿ, ಸತೀಶ್ ಯಲ್ಲಾಪುರ,*
*ವಸಂತ ಹೊಸಬೆಟ್ಟು, ಜಿ. ಎಂ. ಬೊಮ್ನಳ್ಳಿ, ಎಂ. ಪಿ. ಬಿದ್ರಿ*
*ಮುಖಪುಟ - ಮಗು ಅಭಿಜ್ಞ, ವರ್ಣಚಿತ್ರ : ಕೆ. ಪಿ. ಸ್ವಾಮಿ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ ಕಚೇರಿ ಸಹಕಾರ : ಜಿ. ವಿ. ತೇಜೋವತಿ*

**ರಾ**ಜಕುಮಾರರೊಡನೆ ಅಪಹರಿಸಲ್ಪಟ್ಟಿದ್ದ ಇಬ್ಬರು ಕಾಡಿನಿಂದ ಹಿಂದಿರುಗಿದ್ದಾರೆ. ಒಬ್ಬರು ಸ್ವ-ಇಚ್ಛೆಯಿಂದ, ಇನ್ನೊಬ್ಬರು ಹಂತಕನ ತೀರ್ಮಾನದಂತೆ. ಸ್ವ-ಇಚ್ಛೆಯಿಂದ ಹೇಗೋ ತಪ್ಪಿಸಿಕೊಂಡು ಬಂದ ನಾಗಪ್ಪ ಏನೋ ಅಪರಾಧ ಮಾಡಿದ್ದಾರೆಂಬಂತೆ ಕೆಲವು ವಲಯಗಳಲ್ಲಿ ಮಾತುಗಳನ್ನಾಡಿದ್ದಾರೆ. ಆತನ ಹೇಳಿಕೆಗಳು ವಿರೋಧಗಳಿಂದ ಕೂಡಿವೆಯೆಂದು ಒಬ್ಬ ಮಹಾಶಯರು ನ್ಯಾಯಾಲಯಕ್ಕೆ ಕೂಡ ಹೋಗಿದ್ದಾರೆ. ''ನಿಮ್ಮ ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳಲು ನಾನು ಬಾಧ್ಯನಲ್ಲ'' ಎಂದು ನಾಗಪ್ಪ ಹೇಳಿದ್ದರೆ ಎಲ್ಲಾ ತೆಪ್ಪಗಿರಬೇಕಾಗಿತ್ತು. ಆತನೇನೂ ನ್ಯಾಯಾಲಯದ ಕಟಕಟೆಯಲ್ಲಿ ನಿಂತು ಸಾಕ್ಷಿದಾರ ಅಥವಾ ಆಪಾದಿತನಾಗಿ ಪ್ರಮಾಣವಚನ ಸ್ವೀಕರಿಸಿ ಮಾತನಾಡುತ್ತಿಲ್ಲ. ತನ್ನ ಜೀವವನ್ನು ರಕ್ಷಿಸಿಕೊಳ್ಳಲು ಆತನಿಗೆ ಹಕ್ಕಿದೆ. ಆ ಹಕ್ಕು ಚಲಾಯಿಸುವುದರಿಂದ ಬೇರೆ ಯಾರಿಗೂ ಹಾನಿಯಾಗುವುದಿಲ್ಲ. ಇತರರಿಗೆ ಆತನಂತೆ ತಪ್ಪಿಸಿಕೊಂಡು ಬರುವ ಅವಕಾಶ ದೊರೆಯಲಿಲ್ಲವೆಂದಷ್ಟೇ ಮರುಗಬೇಕು. ವೀರಪ್ಪನಿಂದ ಬಿಡಿಸಿಕೊಂಡು ಬಂದ ನಾಗಪ್ಪ ಈಗ ಯಾರಾರದೋ ಬಂಧನಗಳಿಗೆ ಸಿಲುಕಿ ತನ್ನ ಪ್ರಾಣ ಉಳಿಸಿಕೊಂಡಿದ್ದನ್ನು ಸಮರ್ಥಿಸಿಕೊಳ್ಳಬೇಕಾದ ಪ್ರಸಂಗ ಬಂದಿರುವುದು ಇತರರ ಹತಾಶೆಯನ್ನು ತೋರಿಸುತ್ತದೆ.

ರಾಜಕುಮಾರ್ ಅವರನ್ನು ಬಿಡಿಸಿಕೊಳ್ಳಲು ಉರುಳುಸೇವೆ, ಸುದರ್ಶನ ಯಜ್ಞ, ಪೂಜೆ, ಆರತಿ, ಎಲ್ಲಾ ಮಾಡುತ್ತಿದ್ದ ಜನ ತಣ್ಣಗಾಗಿ ರಾಜಣ್ಣನನ್ನು ಮರೆತುಬಿಟ್ಟರೇನೋ ಎಂಬ ಆತಂಕದಿಂದ ಕರ್ನಾಟಕ ಬಂದ್‌ಗೆ ಕರೆ ನೀಡಲಾಯಿತೆಂಬುದು ಕುಹಕದ ಮಾತಲ್ಲ. ಅಥವಾ ಬಂಗಾರಪ್ಪ ತಾನಿನ್ನೂ ಸಕ್ರಿಯ ರಾಜಕಾರಣಿ ಎಂಬುದನ್ನು ಸಾಬೀತುಗೊಳಿಸಲು ಆ ಕ್ರಮ ತೆಗೆದುಕೊಳ್ಳಲಾಯಿತೆ? ಯಾರ ಕಣ್ಣು ತೆರೆಸಲು ಬಂದ್ ಬೇಕಾಗಿತ್ತು ಅಥವಾ ಶಕ್ತಿ ಪ್ರದರ್ಶನ ಮಾಡಬೇಕಾಗಿತ್ತು? ಕೃಷ್ಣ-ಕರುಣಾನಿಧಿ ಸರ್ಕಾರಗಳು ಮಾಡಬೇಕಾದ್ದಕ್ಕಿಂತ ಹೆಚ್ಚೇ ಮಾಡಿವೆ. ರಾಜಕೀಯ ಕುಯುಕ್ತಿಗಳೆಲ್ಲಾ ನಮ್ಮ ಕಣ್ಣಿಗೆ ರಾಚದಿದ್ದರೂ ಸರ್ಕಾರಗಳು ನಿರಾಸಕ್ತಿ ತಾಳಿಲ್ಲವೆಂಬುದಕ್ಕೆ ಹೆಚ್ಚಿನ ಪುರಾವೆ ಬೇಕಿಲ್ಲ. ಇನ್ನು ನ್ಯಾಯಾಲಯದ ಗಮನ ಸೆಳೆಯಲು ಅದನ್ನು ಮಾಡಿದ್ದಾದರೆ ಹಾಗೆಂದು ಯಾರೂ ಹೇಳಿಲ್ಲ. ಇತರೆ ಸಮಯಗಳಲ್ಲಿ ಬಂದ್‌ಗಳನ್ನು ಅಯಶಸ್ವಿಗೊಳಿಸಲು ಏನೆಲ್ಲಾ ಕ್ರಮಗಳನ್ನು ಕೈಗೊಳ್ಳುವ ಸರ್ಕಾರ ಈ ಬಾರಿ ಮೂಕ ಪ್ರೇಕ್ಷಕನಾಗಿತ್ತು. ನೇರವಾಗಿಯಲ್ಲದಿದ್ದರೂ ಕರ್ನಾಟಕ ಸರ್ಕಾರ ಬಂದ್‌ಗೆ ಬೆಂಬಲ ನೀಡಿತು.

ಹಾಗಿದ್ದರೆ ಸಾಧಿಸಿದ್ದೇನು? ಕನ್ನಡಿಗರ-ತಮಿಳರ ನಡುವೆ ಸಾಮರಸ್ಯವಿದೆ, ಆದರೆ ಅದನ್ನು ಕಲಕುವ ಶಕ್ತಿ ನಮಗಿದೆಯೆಂದು ಎತ್ತಿಹೇಳಲು ಬಂದ್ ಆಚರಿಸಲಾಯಿತೆ? ಕೆಲವರ ಪ್ರಕಾರ ಈ ಸಾಮರಸ್ಯ ಕೆಡಬಹುದೆಂಬುದಕ್ಕೆ ಪುರಾವೆ ಇಲ್ಲದಿರುವುದು ಒಂದು ದೊಡ್ಡ ಕೊರತೆ! ಹಾಗೆ ಪುರಾವೆ ನೀಡಲು ದುರಂತ ಘಟನೆಗಳನ್ನು ಆಯೋಜಿಸಿ ತೋರಿಸಬೇಕೆ? ಹಿಂದೆ ಜರುಗಿದ ಘಟನೆಗಳು ಖಚಿತ ಪುರಾವೆ ನೀಡಿರುವುದನ್ನು ಮರೆಯಬೇಕಾಗಿಲ್ಲ. ಈಗ ಮತ್ತೆ ತಲೆಗಳನ್ನು ಉರುಳಿಸಿ ಪುರಾವೆ ಒದಗಿಸುವ ಕೆಲಸ ಬೇಡ.

ಒಂದಂಶವಂತೂ ಅತ್ಯಂತ ಕರಾಳವಾಗಿದೆ: ಕರುಣಾನಿಧಿ ತಮ್ಮ ಚುನಾವಣಾ ಹೊಂದಾಣಿಕೆಗಳನ್ನು ಮಾಡಿಕೊಳ್ಳಲು ರಾಜಕುಮಾರ್ ಅಪಹರಣದ ಸಂದರ್ಭವನ್ನು ಬಳಸಿಕೊಳ್ಳುತ್ತಿರುವ ರೀತಿ ಖಂಡನೀಯ. ತಾನು ಬಿಜೆಪಿ ಸಮ್ಮಿಶ್ರ ಸರ್ಕಾರ ಸೇರಿದ್ದು ಸಾಕಷ್ಟು ಘೋರಕ್ರಮ ಅಲ್ಲವೆಂದು ಬಗೆದಿರುವ ಈ ಡಿ. ಎಂ. ಕೆ. ನಾಯಕ ತಾಳಿರುವ ಅಪಾಯಕಾರಿ ನಿಲುವು ನಾಳೆ ಎಂತೆಂತಹ ವಿಪತ್ತುಗಳಿಗೆ ಕಾರಣವಾಗಬಹುದೆಂಬ ಲೆಕ್ಕಾಚಾರ ಮಾಡಲು ಬಹುಶಃ ಅವರಿಗೆ ಸಮಯವಿಲ್ಲ. ನೆಡುಮಾರನ್, ಸುಕುಮಾರನ್‌ಗಳಂತಹ 'ಮಾರನ್'ಗಳನ್ನು ಕಾಡಿಗೆ ಕಳಿಸಿ ವೀರಪ್ಪನ ಜೊತೆಯಲ್ಲಿ ಮುಂದಿನ ಕಸರತ್ತುಗಳಿಗೆ ಭೂಮಿಕೆ ರಚಿಸಿಕೊಟ್ಟಿದ್ದು ಕರುಣಾನಿಧಿಯವರ ಅತ್ಯಂತ ದುಷ್ಟ ತೀರ್ಮಾನ. ಈ ಮಾರನ್‌ಗಳು ಅಪಸಿದ್ಧಾಂತಗಳನ್ನು ಮಾರಾಟ ಮಾಡುವ ಬಣಗಳನ್ನು ರಚಿಸುತ್ತಾರೆ. ವೀರಪ್ಪನ್ ಸಂಪರ್ಕ-ಸಂವಾದಗಳಿಂದ ಅವರ ಮತ್ತು ಅವನ ನಡುವೆ ಹಣ, ಆಯುಧ, ತಂತ್ರವಿಧಿ ಮುಂತಾದುವೆಲ್ಲಾ ಚರ್ಚೆಗೆ ಬಂದು ಆಮೇಲೆ ಸಂಘಟನೆಯಾಗಿ ಭೂತಾಕಾರ ತಾಳಿದಾಗ ಕರುಣಾನಿಧಿ ಏನು ಮಾಡಿಯಾರು! ತಮಿಳು ಜನಾಂಗೀಯ ಪ್ರಶ್ನೆಯನ್ನು ಬಗೆಹರಿಸುವುದಕ್ಕೂ ತಮಿಳು ಈಳಂ ವಾದ ಪ್ರತಿಪಾದಿಸುವುದಕ್ಕೂ ವ್ಯತ್ಯಾಸವಿದೆ. ಈಳಂ ಸಿದ್ಧಾಂತಕ್ಕೆ ಗೌರವ ತರುವಂತಹ ಕರುಣಾನಿಧಿ ಕ್ರಮ ತೀರಾ ಅಪಾಯಕಾರಿಯಾದ್ದು, ಬೇಜವಾಬ್ದಾರಿತನದ್ದು. ರಾಜಕುಮಾರ್ ಬಿಡುಗಡೆಗಿಂತಲೂ ತಮಿಳುನಾಡಿನ ಮುಂದಿನ ಚುನಾವಣೆ ಕರುಣಾನಿಧಿಗೆ ಪ್ರಮುಖವಾಗಿ ತೋರಿದೆ, ಭೀಕರ ಸಖ್ಯಗಳನ್ನು ಬೆಳೆಸಲು ಪ್ರೇರಕವಾಗುತ್ತಿದೆ.

ನಮ್ಮ ಮುಖ್ಯಮಂತ್ರಿಗಳು ಇದನ್ನೆಲ್ಲಾ ಮೌನಪ್ರೇಕ್ಷಕರಾಗಿ ಸಹಿಸುತ್ತಿದ್ದಾರೆ. ಮಾರನ್‌ಗಳ ಆಯ್ಕೆ ಬಗ್ಗೆ ಕೃಷ್ಣ ತುಟಿಪಿಟಕ್ಕೆನ್ನದಿರುವುದು ಅವರ ಗಾಂಭೀರ್ಯದ ಸೂಚನೆಯಲ್ಲ, ಭಯದ

*(ಪುಟ ೧೦ ನೋಡಿ)*

ತಿಂಗಳ ಪತ್ರಿಕೆ
ಹೊಸತು
ನೆನ್ನೆಯಿಂದ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೨ ಸಂಚಿಕೆ - ೪ ನವೆಂಬರ್ ೨೦೦೦

ಪ್ರಧಾನ ಸಂಪಾದಕ

ಜಿ. ರಾಮಕೃಷ್ಣ

ಸಂಪಾದಕ ಮಂಡಲಿ

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

ವ್ಯವಸ್ಥಾಪಕರು

ಎಸ್. ಸುರೇಂದ್ರ
ಎ. ಆರ್. ಉಡುಪ

ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೪೨೬

ಹೊಸತು ಕಚೇರಿಯ ವಿಳಾಸ

ನವಕರ್ನಾಟಕ ಪ್ರಕಾಶನ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

# ಮಲ್ಲೇಶ್ವರಿ ಎಂಬ ಮಹಾ ಐಶ್ವರ್ಯ

**ನೂ**ರು ಕೋಟಿ ಜನಸಂಖ್ಯೆ ಇರುವ ನಮ್ಮ ದೇಶವು ಈಚಿನ ಸಿಡ್ನಿ ಒಲಿಂಪಿಕ್ಸ್ ಕ್ರೀಡೆಗಳಲ್ಲಿ ಕಡೆಗೂ ಒಂದು ಕಂಚಿನ ಪದಕ ಗಳಿಸಿಕೊಂಡಿತೆಂದು ಸಮಾಧಾನ, ನಿಟ್ಟುಸಿರು, ಮುಂತಾಗಿ ಪ್ರತಿಕ್ರಿಯೆಗಳು ಬಂದಿವೆ. ಧ್ಯಾನ್‌ಚಂದ್ ಪರಂಪರೆಯ ನಮ್ಮ ಹಾಕಿ ಪಟುಗಳು ಐದನೆಯ ಸ್ಥಾನವನ್ನು ಸಹ ಪಡೆಯದಾದರು. ಈ ಕ್ರೀಡೆಗಳು ಎಷ್ಟರಮಟ್ಟಿಗೆ ಕ್ರೀಡೆಗಳಾಗಿ ಉಳಿದಿವೆಯೆಂಬ ಜಿಜ್ಞಾಸೆ ಅಪ್ರಸ್ತುತವಲ್ಲ. ವ್ಯಾಪಾರೀಕರಣವು ಅದರ ಆದ್ಯ ಲಕ್ಷಣವಾಗಿದೆ. ವೈಜ್ಞಾನಿಕ ಪ್ರಕ್ರಿಯೆಗಳನ್ನಾಧರಿಸಿ ಕ್ರೀಡಾಪಟುಗಳು ಉಡುಪು ವಿನ್ಯಾಸ ಮಾಡಿಸಿಕೊಳ್ಳುತ್ತಾರೆ, ಗುಳಿಗೆಗಳನ್ನು ನುಂಗುತ್ತಾರೆ. ದೊಡ್ಡ ಕಣಜವೆಂಬ ಹಾರು ಹುಳುವಿನ ಆಸ್ವಾದನೆಯಿಂದ ದೇಹದಾರ್ಢ್ಯ ವರ್ಧಿಸುತ್ತದೆಂದು ಈಗ ಆ ಹುಳುಗಳ ಸಂತತಿಯ ಮೂಲಕ್ಕೆ ಲಗ್ಗೆ ಇಡಲಾಗುತ್ತಿದೆ. ಆಸ್ಟ್ರೇಲಿಯಾದ ಬುಡಕಟ್ಟಿಗೆ ಸೇರಿದ ಒಬ್ಬ ಹುಡುಗಿ ಈ ಯಾವ ಸಿದ್ಧತೆಗಳನ್ನೂ ಮಾಡಿಕೊಳ್ಳದೆ ತನ್ನ ಶ್ರೇಷ್ಠತೆಯನ್ನು ಮೆರೆದಳೆಂಬುದು ನಮ್ಮ ಮಾಧ್ಯಮಗಳಿಗೆ ಹಾಗೂ ಕ್ರೀಡಾ ತಂತ್ರಜ್ಞಾನಿಗಳಿಗೆ ಗೌಣವಾಗಿಬಿಡುತ್ತದೆ. ಅಮೆರಿಕಾದಂತಹ ದೇಶದ ಕ್ರೀಡಾಪಟುವೊಬ್ಬರು ಪದಕವನ್ನು ಗಳಿಸಿಕೊಂಡಾಗ ಆಯಾ ದೇಶದ ಧ್ವಜ ಹಿಡಿದು ಕ್ರೀಡಾಂಗಣದಲ್ಲಿ ಸುತ್ತಿಬರುವ ಪರಿಪಾಠವಿದೆ. ಅಷ್ಟಾಗಿ ಪ್ರಚಾರಕ್ಕೆ ಬರದಿರುವ ಅಂಶವೇನೆಂದರೆ ಈ ಬಂಡವಾಳಿಗ ರಾಷ್ಟ್ರಗಳ ಕ್ರೀಡಾಪಟುಗಳಿಗೆ ಧ್ವಜ ಹಿಡಿದು ಒಂದು ಸುತ್ತು ಬರಲು ಇಂತಿಷ್ಟು ಹಣವೆಂದು ಮೊದಲೇ ಕೆಲವು ಬೃಹತ್ ಕಂಪೆನಿಗಳು ಗುತ್ತಿಗೆ ಪಡೆದುಕೊಂಡಿರುತ್ತವೆ !

ನಮ್ಮ ದೇಶದ ನಿರುತ್ಸಾಹಕ ಪ್ರದರ್ಶನಕ್ಕೆ ಕಾರಣಗಳನ್ನು ಹುಡುಕುವ ಕೆಲಸ ಕ್ರೀಡೆಗಳು ಮುಗಿದ ತರುವಾಯದಲ್ಲಿ ಆರಂಭವಾಗುತ್ತದೆ ಮತ್ತು ಬೇಗ ಅದನ್ನು ಮರೆಯಲಾಗುತ್ತದೆ. ನಮ್ಮ ಕ್ರಿಕೆಟ್ ಆಟಗಾರರ ವಂಚನೆಯ ಪ್ರಕರಣ ಇದಕ್ಕೊಂದು ಮಾದರಿಯಾಗಿದೆ ಎನ್ನಬಹುದು. ಮುಂಬೈ ಕ್ರಿಕೆಟ್ ಕ್ರೀಡಾಂಗಣದ ತಮ್ಮ ಲಾಕರ್‌ನಲ್ಲಿ ಗವಾಸ್ಕರ್ ಒಟ್ಟು ಎಂಟು ಲಕ್ಷ ರೂಪಾಯಿನ ವಿದೇಶಿ ಹಣವನ್ನು ಚಿಲ್ಲರೆಯ ರೂಪದಲ್ಲಿ ತುಂಬಿಕೊಂಡಿದ್ದರೆಂದು ವರದಿಯಾಗಿತ್ತು; ಆಮೇಲೇನಾಯಿತು ಎಂಬುದು ತಿಳಿದಿಲ್ಲ. ದೊಡ್ಡ ಮನುಷ್ಯರ ಸಣ್ಣತನವನ್ನು ಮುಚ್ಚಿಹಾಕುವ ಸಂಪ್ರದಾಯ ಇದು.

ನಮ್ಮ ದೇಶದ ಹೆಸರು ಸಿಡ್ನಿ ಪದಕ ಪಟ್ಟಿಯಲ್ಲಿ ಸೇರಲು ಏಕೈಕ ಕಾರಣಳಾದ ಮಲ್ಲೇಶ್ವರಿಯವರ ವಿಷಯವನ್ನು ನೋಡಿದರೆ ಹತ್ತಾರು ಪ್ರಶ್ನೆಗಳಿಗೆ ಉತ್ತರ ದೊರೆಯುತ್ತದೆ. ಪದಕ ಪಡೆಯಲು ಆಕೆ ಅರ್ಹಳಾಗಲು ಶ್ರಮಿಸುತ್ತಿದ್ದಾಗ, ತರಬೇತಿ ಪಡೆಯುತ್ತಿದ್ದಾಗ, ಹೇಳಿಕೊಳ್ಳಬಹುದಾದ ಯಾವ ಧನಸಹಾಯ, ಜನಸಹಾಯ ಆಕೆಗೆ ದೊರೆಯಲಿಲ್ಲ. ಈಗ ಲಕ್ಷಗಳ ಮಹಾಪೂರ ಆಕೆಯನ್ನು ಕೊಚ್ಚಿಕೊಂಡು ಹೋಗುವಷ್ಟು ಹರಿಯುತ್ತಿದೆ. ಆ ಲಕ್ಷಗಳನ್ನು ತರಬೇತಿ ಪಡೆಯುವವರ ಸೌಲಭ್ಯಗಳಿಗಾಗಿ ಮೊದಲೇ ಹರಿಸಿದ್ದರೆ ಪರಿಸ್ಥಿತಿ ಇಷ್ಟು ನಿರಾಶಾದಾಯಕವಾಗಿರುತ್ತಿರಲಿಲ್ಲ. ಹಣಕ್ಕಾಗಿ ಆಟಗಳನ್ನು ಸೋಲುವ ಉಪದ್ರವ ಒಂದು ಕಡೆ, ಆಟವಾಡುವ ಸಾಮರ್ಥ್ಯ ಗಳಿಸಿಕೊಳ್ಳಲು ಬೇಕಾದ ವಾತಾವರಣ ಮತ್ತು ಆರ್ಥಿಕ ಚೈತನ್ಯದ ಅಭಾವ ಇನ್ನೊಂದು ಕಡೆ. ಇದು ನಮ್ಮ ಕ್ರೀಡಾಲೋಕವನ್ನು ಕಿತ್ತುತಿನ್ನುತ್ತಿರುವ ದೃಶ್ಯ. ಯಾರಿಗೆ ತಾನೆ ಕಾಣುವುದಿಲ್ಲ ?

ಸಿಡ್ನಿಗೆ ತೆರಳಿದ್ದ ನಮ್ಮ ಅನೇಕ ಪಟುಗಳು ನಮ್ಮ ದೇಶದ ಪ್ರಮುಖ ಕ್ರೀಡಾಸ್ಪರ್ಧೆಗಳಲ್ಲಿ ಸಾಧಿಸಿದ್ದ ಗುರಿಗಿಂತಲೂ ಕಡಿಮೆ ಮಟ್ಟದಲ್ಲಿ ಪ್ರದರ್ಶನ ನೀಡಿದರು. ಬೇಕೆಂದೇ ಹಾಗೆ ಮಾಡಿದ್ದಲ್ಲವೆಂಬುದು ಸ್ಪಷ್ಟವಿದೆ. ರಾಷ್ಟ್ರೀಯ ಅಭಿಮಾನ ಅವರಿಗಿರಲಿಲ್ಲವೆಂಬ ಮಾತು ಅರ್ಥರಹಿತವಾದ್ದು. ಸ್ಪರ್ಧೆಯ ವೇಳೆಯಲ್ಲಿರಬೇಕಾದ ಸಮಚಿತ್ತ, ಮಾನಸಿಕ ಭರವಸೆ ಇಲ್ಲದಿರುವುದು ಒಂದು ಕಾರಣವಿರಬೇಕು. ಕೀಳರಿಮೆಯ ಭಾವನೆ ಬರಲು ನಮ್ಮ ವಾತಾವರಣ ಅವರನ್ನು ಪ್ರಚೋದಿಸುತ್ತದೆ. ಎಂಭತ್ತು ಕ್ರೀಡಾಪಡುಗಳು ಹೋಗದಿದ್ದರೆ ನೂರೆಂಭತ್ತು ಅಧಿಕಾರಿಗಳು, ತರಪೇತುದಾರರು, ವೈದ್ಯಕೀಯ ತಂಡ, ಎಲ್ಲಾ ಸಿಡ್ನಿಯನ್ನು ಮುತ್ತಲಾಗುವುದಿಲ್ಲವಲ್ಲ. ಕ್ರೀಡಾಪಟುಗಳ ಮುಸುಕಿನಲ್ಲಿ ಮಾತ್ರವೇ ಈ ಅಧಿಕಾರಿಗಳು ವಿಜೃಂಭಿಸಲು ಸಾಧ್ಯ. ಆದ್ದರಿಂದ ಸ್ಪರ್ಧಾಳುವಿನ ಮಾಪನ ಮಾಡದೆಯೇ ಸ್ಪರ್ಧೆಯ ಕಣಕ್ಕೆ ತಳ್ಳುವ ಪ್ರಸಂಗ ಎದುರಾಗುತ್ತದೆ. ಸ್ಪರ್ಧೆಯಿಂದ ನವಚೈತನ್ಯ ಮೂಡುವ ಬದಲು ಕೀಳರಿಮೆಯು ಇನ್ನೂ ಗಾಢವಾಗುತ್ತದೆ. ಸ್ಪರ್ಧಾಳುಗಳು ಬೆಳೆಯುವ ಬದಲು ಕುಬ್ಜರಾಗುತ್ತಾರೆ.

ಕೆಲವು ವಿದೇಶಗಳಲ್ಲಿ ಲಭ್ಯವಿರುವ ಸೌಲಭ್ಯ ನಮ್ಮ ಕ್ರೀಡಾಳುಗಳಿಗೆ ದೂರದ ಮರೀಚಿಕೆ. ಬೇರೆ ದೇಶಗಳ ಸಂಪತ್ತು ಲೂಟಿಮಾಡಿ ಕೊಬ್ಬಿರುವ ದೇಶಗಳು ಸಹಜವಾಗಿಯೇ ಲೂಟಿಯಾಗುವ ದೇಶಗಳ ದುರ್ಭರ ಸನ್ನಿವೇಶವನ್ನು ಎದುರಿಸಬೇಕಾಗಿಲ್ಲ. ಸಮಯ, ಹಣ, ತಾಂತ್ರಿಕತೆ, ಸರಂಜಾಮು, ಪೌಷ್ಟಿಕತೆ, ಎಲ್ಲವೂ ನಮಗಿಂತ ಅವರಿಗೆ ಹೇರಳ ಪ್ರಮಾಣದಲ್ಲಿ ದೊರೆಯುತ್ತದೆ. ನಾವು ನಮ್ಮ ಮುಂದಿರಿಸಿಕೊಳ್ಳಬೇಕಾದ ಮೂಲ ಮಹತ್ವದ ಆಕಾಂಕ್ಷೆಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕು. ವಿಶ್ವ ಸ್ಪರ್ಧೆಯಲ್ಲಿ ಯಾರೋ ಒಬ್ಬರೋ ಇಬ್ಬರೋ ಪದಕಗಳನ್ನು ಪಡೆಯುವ ಸೌಭಾಗ್ಯಕ್ಕಿಂತಲೂ ನಮ್ಮ ದೇಶದಲ್ಲೇ ಈಗ ಆಟಪಾಟಗಳಲ್ಲಿ ಭಾಗವಹಿಸುತ್ತಿರುವುದಕ್ಕಿಂತ ಇಪ್ಪತ್ತು ಪಟ್ಟು ಹೆಚ್ಚಾಗಿ ಭಾಗವಹಿಸಲು ನಮಗೆ ಅವಕಾಶ ಮಾಡಿಕೊಂಡರೆ ಅದು ಶ್ರೇಷ್ಠವೆನಿಸುತ್ತದೆ, ಉತ್ತಮ ಸೌಭಾಗ್ಯವೆನಿಸುತ್ತದೆ.

ನಮ್ಮ ಹಿನ್ನಡೆಗೆ ಕಾರಣ ಹುಡುಕುವವರು ಈ ವಿಷಯದತ್ತ ಗಮನಹರಿಸುವುದರ ಬದಲು ಯಾರೋ ಪ್ರತಿಭಾಶಾಲಿಯನ್ನು ಗುರುತಿಸಿ ನಾಲ್ಕು ವರ್ಷ ರೇಸಿನ ಕುದುರೆಯಂತೆ ತರಬೇತಿ ಪಡೆದರೆ ಎಲ್ಲಾ ಸರಿಹೋಗುತ್ತದೆಂಬ ಬಾಲಿಶ ತೀರ್ಮಾನ ಪ್ರಕಟಿಸುತ್ತಾರೆ. ಒಲಿಂಪಿಕ್ಸ್ ಕ್ರೀಡೆಗಳಲ್ಲಿ ಪದಕಗಳನ್ನು ಹೇಗೆ ಪಡೆಯಬಹುದೆಂಬುದನ್ನು ವೇದದಲ್ಲೇ ಹೇಳಲಾಗಿದೆಯೆಂದು ಈವರೆಗೆ ಮುರಳಿ ಮನೋಹರ ಜೋಶಿ ಉದ್ಗರಿಸಿಲ್ಲವೇಕೋ ತಿಳಿಯುತ್ತಿಲ್ಲ. ಅಮೆರಿಕಾದಲ್ಲಿ ತಿಥಿ ಮಾಡಿಸಲು ಕರ್ಮಕಾಂಡ ಪ್ರವೀಣರನ್ನು ಉತ್ಪಾದಿಸಲು ಹಣ ಜೋಶಿಯವರ ಖಾತೆಯಲ್ಲಿ ಇಟ್ಟಾಡುತ್ತಿದೆ; ಆದರೆ ಕ್ರೀಡಾಪಟುಗಳಿಗೆ ಪ್ರಾಥಮಿಕ ಸೌಲಭ್ಯ ಕಲ್ಪಿಸಲು ನಮಗೆ ಹಣದ ಕೊರತೆಯಿದೆ. ಹೀಗಿದೆ ನಮ್ಮ ಆದ್ಯತೆಗಳ ಆಯ್ಕೆ. ರಾಷ್ಟ್ರೀಯ ಅಭಿಮಾನವು ಶೂನ್ಯದಲ್ಲಿ ಉಕ್ಕುವುದಿಲ್ಲವೆಂಬುದನ್ನು ನಾವು ಮೊದಲು ಅರಿತುಕೊಳ್ಳಬೇಕು. ಜೋಶಿ ಚಿಂತನೆಯಿಂದ ಖಂಡಿತ ಅಭಿಮಾನ ಹೆಚ್ಚಲಾರದು; ಇರುವುದೂ ಕುಗ್ಗಬಹುದು. ಅಷ್ಟೆ. ನಮ್ಮ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕೆಲವು ಕ್ರೀಡಾಪಟುಗಳು ಖುದೀರಾಂ ಬೋಸರಷ್ಟೇ ಪ್ರಖ್ಯಾತರಾದರು. ಏಕೆಂದರೆ, ಬ್ರಿಟಿಷ್ ತಂಡಗಳನ್ನು ಕ್ರೀಡಾಸ್ಪರ್ಧೆಗಳಲ್ಲಿ ಸೋಲಿಸುತ್ತಾ ಜನರ ಭಾವನೆಗಳು ಪುಟಿದೇಳುವಂತೆ ಮಾಡುವುದರಲ್ಲಿ ಅವರ

ಕೊಡುಗೆ ಅಪಾರವಾಗಿತ್ತು. ತೆಂಡುಲ್ಕರ್, ಅಜರುದ್ದೀನ್ ಇರಲಿ, ಪಿ. ಕೆ. ಬ್ಯಾನರ್ಜಿ ಮತ್ತು ಧ್ಯಾನ್‌ಚಂದ್ ಗಳಿಸಿದ ಹಣಕ್ಕೆ ಸಮನಾಗಿ ಕೂಡ ಅವರು ಸಂಪತ್ತು ಶೇಖರಿಸಿಕೊಳ್ಳಲಿಲ್ಲ. ಆದರೆ ಅವರಿಗೆ ಸಂತೃಪ್ತಿ ಇತ್ತು. ಒಂದು ಹೋರಾಟಕ್ಕೆ ಪೂರಕವಾಗಿದ್ದೇವೆಂಬ ಶ್ರೇಯಸ್ಸು ಅವರಿಗೆ ಸಾಕಾಗಿತ್ತು. ನಮ್ಮ ಇಂದಿನ ಯಾವ ಕ್ರೀಡಾಪಟು ಇಂತಹ ಭಾವನೆಗೆ ಪ್ರೇರಕವಾಗಬಲ್ಲರು ಅಥವಾ ಆ ಮಟ್ಟದ ತೃಪ್ತಿ ಅನುಭವಿಸಬಲ್ಲರು? ಕ್ಯೂಬಾದ ಬಾಕ್ಸಿಂಗ್ ಪಟುವೊಬ್ಬ ಅಂತಹ ಸ್ಥಾನ ಆಕ್ರಮಿಸಿದ್ದಾನೆ. ಆತ ಅಂತರರಾಷ್ಟ್ರೀಯ ಕಸುಬುದಾರನಾಗಿ ಸ್ಪರ್ಧಿಸಲು ಒಪ್ಪಿದರೆ ಕೋಟಿಗಟ್ಟಲೆ ಹಣ ದೋಚಬಹುದು; ಆದರೆ ಆತನಿಗೆ ಕ್ಯೂಬಾದ ಜನರ ಗೌರವಾಭಿಮಾನಗಳು ಆ ಕೋಟಿಗಳಿಗಿಂತ ಹೆಚ್ಚು ಆಪ್ಯಾಯಮಾನವಾಗಿವೆ. ಮಲ್ಲೇಶ್ವರಿಯಂತಹವರ ವ್ಯಕ್ತಿತ್ವದಲ್ಲಿ ಈ ಭಾವನೆ ಮೂಡಲು ನಾವೇನು ಮಾಡಿದ್ದೇವೆ? ಲಕ್ಷಗಟ್ಟಲೆ ಹಣ ಹರಿಸಿದರೆ ಸಿದ್ಧಿಸುವ ಫಲವಲ್ಲ ಅದು; ಪದಕ ಪಡೆಯುವ ಮುನ್ನ ಸೂಕ್ತ ವಾತಾವರಣ, ವ್ಯವಸ್ಥೆ ನಿರ್ಮಿಸಿದರೆ ಸಾಕು.

ನಮ್ಮ ವ್ಯವಸ್ಥೆಯನ್ನು ಪರಿಶೀಲಿಸಿದರೆ ನಮ್ಮ ನ್ಯೂನತೆ ತಾನಾಗೇ ತಿಳಿಯುತ್ತದೆ. ದೇಶದ ಅರ್ಧಭಾಗದ ಜನರಿಗೆ ಜೀವಂತವಾಗಿ ಉಳಿಯುವ ಕ್ರೀಡಾಸ್ಪರ್ಧೆಯಲ್ಲಿ ವಿಜಯಿಗಳಾದರೆ ಸಾಕೆನಿಸುವ ದುರಂತ ಕಾಡುತ್ತಿದೆ. ಯಾಂತ್ರಿಕವಾಗಿ ನಾವವರನ್ನು ಬಡತನದ ರೇಖೆಯ ಕೆಳಗಿರುವವರೆಂದು ನಮೂದಿಸುತ್ತೇವೆ. ಇನ್ನರ್ಧದ ಅರ್ಧಭಾಗ ಮಹಿಳೆಯರಿದ್ದಾರೆ. ಅವರಲ್ಲಿ ಬಹುಭಾಗಕ್ಕೆ ಕ್ರೀಡಾಲೋಕವೆಂಬುದೊಂದಿದೆ ಎಂಬ ಪರಿಕಲ್ಪನೆಯೂ ಸಾಧ್ಯವಿಲ್ಲ. ಇನ್ನುಳಿದ ಯುವಕ-ಯುವತಿಯರಿಗೆ ಶಾಲಾ-ಕಾಲೇಜುಗಳಲ್ಲಿ ಎಂತಹ ಕ್ರೀಡಾವಕಾಶಗಳಿವೆ? ವೇಳೆ ಎಲ್ಲಿದೆ? ಸೌಲಭ್ಯಗಳು ಎಂತಹವು? ನೂರು ಕೋಟಿಯಲ್ಲಿ ಅರ್ಧ ಕೋಟಿಗೂ ಅಲ್ಲಿ ಪ್ರವೇಶವಿಲ್ಲ. ಇವರ ನಡುವಿನಿಂದ ಅಂತರರಾಷ್ಟ್ರೀಯ ಮಟ್ಟದ ಸ್ಪರ್ಧಿಗಳು ಮೂಡಿಬರಬೇಕೆಂದು ನಿರೀಕ್ಷಿಸುವುದೇ ತಪ್ಪು. ಈ ಮಧ್ಯೆ ನುಂಗಣ್ಣಗಳ ಹಾವಳಿ, ಪಾಳೆಗಾರರ ಪಾರುಪತ್ಯ ಬೇರೆ. ಒಂದು ಅತಿಸಾಮಾನ್ಯ ಕಾಲೇಜು ಅಥವಾ ವಿಶ್ವವಿದ್ಯಾನಿಲಯದಲ್ಲಿ ಕೂಡ ಕ್ರೀಡೆಗಳಿಗಾಗಿ ತೆಗೆದಿಟ್ಟ ಹಣವನ್ನು ನುಂಗಿಹಾಕುವ ಸ್ಪರ್ಧೆ ನಡೆಯುತ್ತಿರುತ್ತದೆ. ಕ್ರೀಡೆಗಳಲ್ಲಿ ಭಾಗವಹಿಸಿದ ಒಂದೇ ಒಂದು ದಾಖಲೆಯೂ ಇಲ್ಲದ ಮುತ್ಸದ್ದಿಗಳು ನಮ್ಮ ಕ್ರೀಡಾಲೋಕದ ಮುಂದಾಳುಗಳು. ಕ್ರೀಡಾಸ್ಪರ್ಧಿಗಳನ್ನು ಈ ಜನ ತಮ್ಮ ಸೇವಕರೆಂಬಂತೆ ನಡೆಸಿಕೊಂಡಿರುವ ನೂರಾರು ನಿದರ್ಶನಗಳಿವೆ. ಸಿಡ್ನಿಗೋ ಲಾಸೆಂಜಲಿಸ್‌ಗೋ ಒಲಿಂಪಿಕ್ಸ್‌ಗೆ ಹೋಗುವುದುಂದೇ ಅವರ ನಿಜಾಶಯ. ಇಡಿಯಾಗಿ ಇವರು ನಿರ್ಮಿಸುವ ವಾತಾವರಣ ಕಲುಷಿತವಾದ್ದು, ನಿಕೃಷ್ಟವಾದ್ದು, ಕ್ರೀಡಾಸ್ಪರ್ಧಿಯ ಮನೋಭೂಮಿಕೆಗೆ ಮಾರಕವಾದ್ದು. ಆದ್ದರಿಂದ ಮೊದಲು ನಾವು ಬಹುಭಾಗದ ಜನರಿಗೆ ಕ್ರೀಡಾವಕಾಶ ಕಲ್ಪಿಸಿದರೆ ಸಾಕು; ಅವರು ತಮ್ಮ ಕೌಶಲ್ಯ ಪ್ರದರ್ಶಿಸಲು ಅಂತರರಾಷ್ಟ್ರೀಯ ಮಟ್ಟಕ್ಕೆ ಇಂದೇ ಪ್ರವೇಶಿಸುವ ಅವಶ್ಯಕತೆ ಇಲ್ಲ. ಪದಕ ಬರದಿದ್ದರೂ ಪದ (ಅಥವಾ ಹೆಮ್ಮೆಯ ಸ್ಥಾನ) ಉಳಿಯುತ್ತದೆ.

ಯುಕ್ರೇನ್‌ನಲ್ಲಿ ಕಿಯೇವ್ ಡೈನಮೋ ಎಂಬ ಒಂದು ಫುಟ್‌ಬಾಲ್ ತಂಡವಿದೆ. ಎರಡನೆ ಮಹಾಯುದ್ಧದ ಕಾಲದಲ್ಲಿ ಕಿಯೇವ್ ಹಿಟ್ಲರನ ನಾಜಿ ಸೈನ್ಯದ ಅಧೀನದಲ್ಲಿ ಸಿಲುಕಿತ್ತು. ಯುಕ್ರೇನಿ ಜನರನ್ನು ಹಂಗಿಸಲು ಈ ಸೈನ್ಯ ಎಂಥೆಂಥದೋ ದಾರಿಗಳನ್ನು ಹುಡುಕಿಕೊಳ್ಳುತ್ತಿತ್ತು. ಹಾಗೆ ಮಾಡುವುದರಿಂದ ಭೂಗತ ಪಡೆಗಳ ಹೊಡೆತವನ್ನು ಕಡಿಮೆಗೊಳಿಸಿ ಯುಕ್ರೇನಿನ ಮೇಲಿನ ಆಧಿಪತ್ಯ ಭದ್ರಗೊಳಿಸಿಕೊಳ್ಳಬಹುದೆಂಬ ಹುನ್ನಾರವಿತ್ತು. ನಾಜಿ ಸೈನ್ಯದ ದಂಡನಾಯಕನೊಬ್ಬ ಒಂದು ಯೋಜನೆ ಹೂಡಿದ: ಸೈನ್ಯದ ಕ್ರೀಡಾಳುಗಳು ಕಿಯೇವ್ ಡೈನಮೋ ವಿರುದ್ಧ ಒಂದು ಪಂದ್ಯವಾಡಿ ಸೋಲಿಸುವುದು, ಲಕ್ಷಗಟ್ಟಲೆ ಯುಕ್ರೇನಿಗಳ ಕೆಚ್ಚನ್ನು ಧ್ವಂಸ ಮಾಡುವುದು. ಪಂದ್ಯಕ್ಕೆ ಮೊದಲೇ ಷರತ್ತು ಹಾಕಿದ್ದ : ಕಿಯೇವ್ ಡೈನಾಮೋ ತಂಡ ಸೋಲಬೇಕೆಂದು. ಸೋಲದಿದ್ದರೆ ಇಡೀ ತಂಡಕ್ಕೆ ಮರಣ ಶಿಕ್ಷೆ ವಿಧಿಸುವುದಾಗಿ ಬೆದರಿಸಿದ್ದ. ಯುದ್ಧದಲ್ಲಿ ಸೋತಿದ್ದ ಯುಕ್ರೇನಿನ ಜನ ಕ್ರೀಡೆಯಲ್ಲಿ ನಾಜಿಗಳನ್ನು ಸೋಲಿಸಿ ತಮ್ಮ ಪತಾಕೆಯನ್ನು ಕಿಯೇವ್ ಡೈನಮೋ ಎತ್ತಿಹಿಡಿಯುತ್ತದೆಂಬ ಅಭಿಮಾನದಿಂದ ಲಕ್ಷಗಟ್ಟಲೆ ಜನ ಕ್ರೀಡಾಂಗಣವನ್ನು ತುಂಬಿದರು. ಕ್ರೀಡಾಳುಗಳಿಗೆ ಸೈನ್ಯದ ಷರತ್ತನ್ನು ತಿಳಿಸಲಾಗಿತ್ತು. ಮೊದಲರ್ಧದಲ್ಲಿ ನಾಜಿಗಳ ಮೇಲುಗೈನಿಂದ ಕಿಯೇವ್ ಜನ ಹತಾಶರಾದರು; ನಮ್ಮ ತಂಡಕ್ಕೆ ಏನು ಗರ ಬಡಿದಿದೆಯೆಂದು ಶಪಿಸಿದರು. ಉತ್ತರಾರ್ಧದ ಕೆಲವು ನಿಮಿಷಗಳ ನಂತರ ಕಿಯೇವ್ ಕ್ರೀಡಾಳುಗಳು ಅತಿಹುಮ್ಮಸ್ಸಿನಿಂದ ಆಡಿ ನಾಜಿಗಳನ್ನು ಚೆಂಡಾಡಿದರು. ಯುಕ್ರೇನಿನ ಕೀರ್ತಿ ಮತ್ತು ಹಾರೈಕೆ ತಮ್ಮ ಪ್ರಾಣಗಳಿಗಿಂತ ಮಹತ್ವದ್ದೆಂದು ಆಟಗಾರರು ನಿರ್ಧರಿಸಿಕೊಂಡು ಬಂದಿದ್ದರು. ನಾಜಿ ದಂಡನಾಯಕನ ನಿರೀಕ್ಷೆ ಹುಸಿಯಾಯಿತು. ಅವನ ತಂಡ ಮಣ್ಣುಮುಕ್ಕಿ ಉಕ್ರೈನಿನ ಜನರ ಭಾವನೆ ಮುಗಿಲೆತ್ತರಕ್ಕೇರಿತು. ಕಿಯೇವ್ ತಂಡ ಹುಚ್ಚೆದ್ದು ಹನ್ನೆರಡು ಗೋಲುಗಳನ್ನು ಬಾರಿಸಿ ನಾಜಿ ಸೈನ್ಯದ ಮುಖವನ್ನು ಗೀರಿಹಾಕಿತು. ಜನ ನೆಮ್ಮದಿಯಿಂದ ತೆರಳಿದರು, ನಾಳೆ ಯುದ್ಧದಲ್ಲೂ ಮಣ್ಣುಮುಕ್ಕಿಸುತ್ತೇವೆಂದು ಸ್ಫೂರ್ತಿಯಿಂದ ಕಂಗೊಳಿಸಿದರು. ಕಿಯೇವ್ ಡೈನಮೋ ತಂಡದ ಐದು ಆಟಗಾರರನ್ನು ನಾಜಿ ದಂಡನಾಯಕ ಗುಂಡೇಟಿನಿಂದ ಸಾಯಿಸಿದ. ಕಿಯೇವ್ ನಗರದ ಡೈನಮೋ ಕ್ರೀಡಾಂಗಣದೆದುರು ಇಂದಿಗೂ ಆ ಐವರ ಮೂರ್ತಿಗಳು ವೈಭವದಿಂದ ನಿಂತಿವೆ, ಯುಕ್ರೇನಿಯರ ಅಶ್ರುತರ್ಪಣ, ಗೌರವಗಳನ್ನು ಸ್ವೀಕರಿಸುತ್ತಿವೆ.

ನಮ್ಮ ಕ್ರೀಡಾಸ್ಪರ್ಧಿಗಳು ಮರಣವನ್ನಪ್ಪಿ ಕೀರ್ತಿ ಗಳಿಸುವುದು ಬೇಡ. ಆದರೆ ಜನರ ಗೌರವಕ್ಕೆ ಪಾತ್ರವಾಗುವಂತಹ ಸುಸಂಧಿ ಅವರಿಗೆ ಬೇಕು, ಅಭಿಮಾನಕ್ಕೆ ಪ್ರೇರಕರಾಗುವ ವ್ಯಕ್ತಿತ್ವ ಅವರಿಗೆ ಬೇಕು. ಭಾರತದ ಶ್ರೇಷ್ಠ ಪರಂಪರೆಯ ಆಟಗಳಿಗೆ ನಾವು ಮಹತ್ವ ನೀಡಬೇಕು, ಎಂಬಿತ್ಯಾದಿ ಹುರುಳಿಲ್ಲದ, ಮೈಪರಚಿಕೊಳ್ಳುವ ಮಾತುಗಳನ್ನು ಸಾಕುಮಾಡೋಣ; ಸಮುದಾಯಕ್ಕೆ ಕ್ರೀಡೆಗಳಲ್ಲಿ ಭಾಗವಹಿಸುವ ಅವಕಾಶ ಕಲ್ಪಿಸಿಕೊಳ್ಳೋಣ. ಇನ್ನೆಂಟು ವರ್ಷಗಳ ನಂತರವಾದರೂ ಮಲ್ಲೇಶ್ವರಿಗಳು ಮಹದೈಶ್ವರ್ಯ ತಂದುಕೊಡುತ್ತಾರೆಂಬ ಭರವಸೆ ಆಗ ನಿಚ್ಚಳವಾಗಿ ಕಾರ್ಯಗತವಾಗುತ್ತದೆ. ಸದ್ಯಕ್ಕೆ ಒಬ್ಬ ಮಲ್ಲೇಶ್ವರಿಗೆ ಅಭಿನಂದನೆ ಸಲ್ಲಿಸೋಣ, ಆಕೆಯ ಪರಾಕ್ರಮವನ್ನು ಲಕ್ಷಗಳಲ್ಲಿ ಅಳೆಯುವ ಅನಿಷ್ಟ ಪದ್ಧತಿಯನ್ನು ಕೈಬಿಡೋಣ. ಪದಕ ಪಡೆಯದೆ ಹಿಂದಕ್ಕೆ ಬಂದವರೆಲ್ಲಾ ನಿರ್ಲಜ್ಜರೆಂದು ಮೂದಲಿಸದಿರೋಣ ಮತ್ತು ಕೆಲಸಕ್ಕೆ ಬಾರದ ಪರತಂತ್ರ ಜೀವಿ ಅಧಿಕಾರಿಕ್ರಿಮಿಗಳನ್ನು ಕ್ರೀಡಾಲೋಕದಿಂದ ಹೊರದೂಡೋಣ. ಸ್ವಚ್ಛವಾದ ಕ್ರೀಡಾಕ್ಷೇತ್ರವು ಸಂಭ್ರಮಕ್ಕೆ ಮೊದಲ ಹೆಜ್ಜೆಯಾಗುತ್ತದೆ. ಸಂತೆಗೆ ಮೂರು ಮೊಳ ನೇಯುವುದಾಗಲಿ, ಸಂತೆಯಲ್ಲೇ ಕೂತು ನೇಯುವುದನ್ನು ಆರಂಭಿಸುವುದಾಗಲಿ ಶ್ಲಾಘನೀಯ ಕ್ರಮವಾಗುವುದಿಲ್ಲ. ಎಂಟು ವರ್ಷಕ್ಕೆ ನನ್ನ ಮಗ ದಂಟು ಎಂಬ ರೀತಿಯ ತೃಪ್ತಿ ಸ್ವಾಗತಾರ್ಹವೂ ಅಲ್ಲ.




ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಪಾರ್ಥಸಾರಥಿ
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಚಿ. ಶ್ರೀನಿವಾಸರಾಜು
ಸಿದ್ಧನಗೌಡ ಪಾಟೀಲ
ಎಂ. ಎ. ಸೇತುರಾವ್
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೭೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೭೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೨೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

ಅಕ್ಟೋಬರ್ ೨೦೦೦ದ 'ಹೊಸತು' ಸಂಚಿಕೆಯ ಮುಖಪುಟದಲ್ಲಿನ ಗಾಂಧೀಜಿಯವರ ನಗುಮೊಗವನ್ನು ನೋಡಿದಷ್ಟೂ ಸಾಲದೆನ್ನಿಸುತ್ತದೆ. ಜಾಮಿನಿ ರಾಯ್‌ರವರ ಈ ವರ್ಣಚಿತ್ರ ಬಹಳ ಸುಂದರವಾಗಿದೆ. ಅಂಚೆ ಇಲಾಖೆಯವರು ಇಂತಹ ಸುಂದರ ಕೃತಿಯನ್ನು ತಮ್ಮ ಅಂಚೆ ಚೀಟಿಗೆ ಬಳಸಿಕೊಂಡಿರುತ್ತಿದ್ದರೆ ಒಳ್ಳೆಯದಿತ್ತು ಎಂದೆನಿಸಿತು.

'ವೈದಿಕ ಜನರ ವಿನೋದ ವಿಹಾರಗಳು' ಮಾಹಿತಿಪೂರ್ಣ ಲೇಖನ. ಹಿಂದಿನ ಆ ಕ್ರಮಗಳಲ್ಲಿನ ಜೀವನ ರೀತಿಯ ಕುರಿತೂ ಲೇಖನ ಬರಲಿ.

*ಕಾಸರಗೋಡು* **ಮಾಲತಿ ಕಮಲಾಕ್ಷ**

### ಕಥೆಗಾರರಾಗಿ 'ಅಡಿಗ'ರು

ಅಕ್ಟೋಬರ್ ಸಂಚಿಕೆಯ 'ಹೊಸತು' ಸುಂದರವಾದ ಮುಖಪುಟವನ್ನು ಹೊಂದಿತ್ತು. ಡಿ. ಆರ್. ಬಾಲುರವರ 'ನಾಗೇಶಿಯ ನವ್ಯ ಕಥೆ' ತುಂಬಾ ಸ್ವಾರಸ್ಯಕರವಾಗಿ ಮೂಡಿಬಂದಿದೆ. 'ಅಡಿಗ'ರ 'ತಿಮ್ಮನ ಗಾಡಿ' ಕಥೆಯೂ ಸಹ ಚೆನ್ನಾಗಿತ್ತು. 'ಅಡಿಗ'ರನ್ನು ಕೇವಲ ಒಬ್ಬ ಕವಿ ಎಂಬ ದೃಷ್ಟಿಯಿಂದ ಕಂಡಿದ್ದ ನಾನು, ಅವರೂ ಒಬ್ಬ ಶ್ರೇಷ್ಠ ಕಥೆಗಾರರಾಗಿದ್ದರು ಎಂಬುದನ್ನು ತಿಳಿದುಕೊಂಡೆ.

*ಸಾಸ್ವೆಹಳ್ಳಿ* **ಪ್ರ. ಆ. ದೈವಜ್ಞಾಚಾರ್ಯ**




ಸೆಪ್ಟೆಂಬರ್ ತಿಂಗಳ ಸಂಚಿಕೆಯಲ್ಲಿನ 'ಕಾವ್ಯಧಾರೆ' ಯಲ್ಲಿನ 'ಸತ್ತದಕ ಅತ್ತಾಂಗ' ಕವಿತೆ ಮನಮುಟ್ಟುವಂತಿದ್ದು ಕಣ್ಣಲ್ಲಿ ನೀರು ತರಿಸಿತು. ವಾಸ್ತವಿಕ ಕಟು ಸತ್ಯದ ವಿಷಯಾಧಾರಿತವಾಗಿದ್ದು, ಭಾಷೆ ಮತ್ತೂ ಮತ್ತೂ ಓದುವಂತಿದೆ.

*ದಾವಣಗೆರೆ* **ಎಸ್. ಕವಿತಾ**

## ಪ್ರತಿಕ್ರಿಯೆ

''ಮಧುಮೇಹ ಹಾಗೂ ಜೆನ್‌ಸಂಗ್'' ಕುರಿತು ''ಹೊಸತು'' ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಬಗ್ಗೆ ಒಂದು ತಿಳುವಳಿಕೆ ಅಗತ್ಯವೆನಿಸುತ್ತದೆ. ಇಂದು ಭಾರತದಲ್ಲಿ ಅನಗತ್ಯ ಔಷಧಿಗಳ ಹಾವಳಿ ಹೆಚ್ಚಾಗಿದ್ದು ಅಗತ್ಯ ಔಷಧಿಗಳ ಬಳಕೆಗೆ ಮಾತ್ರವೇ ಪ್ರೋತ್ಸಾಹ ನೀಡಬೇಕು. ಇಂದು ದೊರಕುತ್ತಿರುವ ಹಲವಾರು ಅನಗತ್ಯ ಔಷಧಿಗಳಲ್ಲಿ ಜೆನ್‌ಸಂಗ್ ಒಂದು. ಅದರ ಉಪಯೋಗದ ಬಗ್ಗೆ ಔಷಧಿ ಕಂಪನಿಗಳ ಅನೇಕ ಜಾಹಿರಾತುಗಳಿವೆಯಾದರೂ ಅದು ಅನುಪಯುಕ್ತ ಹಾಗೂ ಅಪಾಯಕಾರಿ ಎಂದು ಗೊತ್ತಾಗಿದೆ. ಅದು ಔಷಧಿಯೇ ಅಲ್ಲ. ಅಮೆರಿಕ, ಪಾಕಿಸ್ತಾನ ಹಾಗೂ ಇನ್ನೂ ಅನೇಕ ದೇಶಗಳಲ್ಲಿ ಇದನ್ನು ಔಷಧಿಯಂತೆ ಬಳಸುವುದನ್ನು ನಿಷೇಧಿಸಲಾಗಿದೆ. ನಮ್ಮ ದೇಶದಲ್ಲಿ ಈ ಪದಾರ್ಥ ದೊರಕುತ್ತಿದೆ, ಔಷಧಿ ಕಂಪನಿಗಳು ಅದನ್ನು ಔಷಧಿ ಎಂದು ಕರೆದಿವೆ ಹಾಗೂ ಸರಕಾರ ಅದನ್ನು ಉಪಯೋಗಿಸದಂತೆ ನಿಷೇಧಾಜ್ಞೆ ತಂದಿಲ್ಲ. ಹಾಗೆಂದ ಮಾತ್ರಕ್ಕೆ ಆ ಔಷಧಿ ಉಪಯುಕ್ತವಾದುದು ಹಾಗೂ ಸಮಂಜಸ ಎಂಬ ತೀರ್ಮಾನಕ್ಕೆ ಬರಬೇಕಾಗಿಲ್ಲ. ವಿಶ್ವ ಆರೋಗ್ಯ ಸಂಸ್ಥೆಯ ಅಗತ್ಯ ಔಷಧಿ ಪಟ್ಟಿಯಲ್ಲಿ ಜೆನ್‌ಸಂಗ್ ಇಲ್ಲವೆಂಬುದನ್ನು ಗಮನಿಸಬೇಕು. ಇನ್ನು ಸಕ್ಕರೆ ಕಾಯಿಲೆಗೆ ಈ ಔಷಧಿಯನ್ನು ಉಪಯೋಗಿಸುವ ಮಾತು : ಜಗತ್ತಿನಾದ್ಯಂತ ಔಷಧಿ ಉಪಯೋಗಗಳ ಸಾವಿರಾರು ಸಂಶೋಧನೆಗಳು ಜಾರಿಯಲ್ಲಿವೆ. ಸಾಮಾನ್ಯವಾಗಿ ಸಂಶೋಧನೆಗಳಿಂದ ಸಿದ್ಧಪಡುವುದು ಕೆಲವೇ ಔಷಧಿಗಳು ಮಾತ್ರ. ಆದ್ದರಿಂದ ಸಂಶೋಧನೆ ಸಂಪೂರ್ಣಗೊಳ್ಳದೆ ಆ ಔಷಧಿಗಳ ಬಗ್ಗೆ ಹೇಳುವುದು ಸಮಂಜಸವಲ್ಲ.

*– ಡಾ. ಪ್ರಕಾಶ್ ಸಿ. ರಾವ್, ಬೆಂಗಳೂರು*

ಅಕ್ಟೋಬರ್‌ನ 'ಹೊಸತು'ವಿನಲ್ಲಿ ಮಿತ್ರರಾದ ಬರಗೂರು ರಾಮಚಂದ್ರಪ್ಪ ಅವರ 'ಗಾಂಧೀಜಿ ಸಾಮೂಹಿಕ ಕ್ರಿಯಾಶೀಲತೆಯ ಶಕ್ತಿ' ಲೇಖನ ಅತ್ಯಂತ ಮನೋಜ್ಞವೂ ವಿಚಾರಯೋಗ್ಯವೂ ಆದ ಸಾರ್ಥಕ ಲೇಖನ. ಅವರ ಸ್ವಚ್ಛ, ಸ್ಪಷ್ಟ ಹಾಗೂ ವೈಚಾರಿಕ ಶ್ರೇಷ್ಠತೆ ಎದ್ದು ಕಾಣುತ್ತದೆ. ಗಾಂಧೀಜಿಯ ವ್ಯಕ್ತಿತ್ವದ ಹಲವು ಮುಖಗಳನ್ನು ಪ್ರಖರವಾಗಿ ವಿಶ್ಲೇಷಿಸಿ ಒಂದು ಅಂಗೀಕಾರ ಯೋಗ್ಯ ನಿಲುವನ್ನು ಅನಾವರಣ ಮಾಡಿದ್ದಾರೆ. ಗಾಂಧೀ ಹೇಗೆ ''ಜನಮಾನಸದ ಸ್ಥಿರ ವಿನ್ಯಾಸಗಳ ಒಳಗಿಂದಲೇ ಹೊರ ಬಂದು ವಿಭಿನ್ನವಾಗಿ'' ನಿಲ್ಲುತ್ತಾರೆ, ಹೇಗೆ ಅವರ ವಿಶಿಷ್ಟ ಚಲನಶೀಲ ಗುಣ 'ನಿಮ್ಮೊಳಗಿದ್ದು ನಿಮ್ಮಂತಾಗದ' ನೆಲೆಯಲ್ಲಿ ನಿಲ್ಲಿಸುತ್ತದೆ ಎಂಬ ವಿಶಿಷ್ಟ ದೃಷ್ಟಿಯಿಂದ ಮಹಾತ್ಮನ ವ್ಯಕ್ತಿತ್ವವನ್ನು ಶ್ರೀ ಬರಗೂರರು ವಿವರಿಸಿದ್ದಾರೆ. ನಿರ್ದಿಷ್ಟ ಚಾರಿತ್ರಿಕ ಸಂದರ್ಭದಲ್ಲಿ ಸ್ವಾತಂತ್ರ್ಯ ಸಾಧನೆ, ಅಸ್ಪೃಶ್ಯತಾ ವಿರೋಧ ಚಳುವಳಿ ಮತ್ತು ಸಮತಾವಾದ ಬೇರೆ ಬೇರೆ ವ್ಯಕ್ತಿಗಳನ್ನು ಸೃಷ್ಟಿಮಾಡಿ ನಿಲ್ಲಿಸಿತು ಎಂಬ ವಿಷಯ ತಿಳಿಸಿದ್ದಾರೆ. ಆತ್ಮಸಾಕ್ಷಿಗೆ ಸದಾ ಬದ್ಧವಾಗಿ, ವಿನಯಶೀಲರಾಗಿ, ಕೇವಲ ಮನುಷ್ಯ ಎಂದು ಮಾತ್ರವೇ ತಮ್ಮನ್ನು ಕಾಣಬೇಕೆಂಬ ಗಾಂಧೀಜಿಯ ಆಗ್ರಹವೇ ಅವರನ್ನು ಸರ್ವರ ಮನ್ನಣೆಗೆ ಪಾತ್ರವಾಗಿಸಿತು. ರಾಜಕೀಯ ಆಂದೋಲನದಲ್ಲಿ ಪೂರ್ಣವಾಗಿ ತೊಡಗಿಸಿಕೊಂಡಾಗಲೂ ಅವರ ಸಂತಗುಣವನ್ನೇ ಪ್ರಧಾನ ಅಂಶವಾಗಿ ಪ್ರತಿಪಾದಿಸಿದ ಧೀಮಂತ ತತ್ವ ನಿಷ್ಠ ಗಾಂಧೀಜಿ ಎಂಬುದೇ ಗಾಂಧೀಯುಗದ ಮುಖ್ಯ ಸಂದೇಶ. ಯಾವುದೇ ಬಹಿರಾಡಂಬರವನ್ನು ಒಪ್ಪದ ಸರಳ ಶೈಲಿಯ ಸಂನ್ಯಾಸಿಯಂತೆಯೇ ಜನಮಾನಸದಲ್ಲಿ ಬಾಪೂ ಶಾಶ್ವತ ಮುದ್ರೆಯೊತ್ತಿದ್ದರು. ಈ ಅಂಶವನ್ನು ಬರಗೂರರು ಚೆನ್ನಾಗಿ ವಿಶ್ಲೇಷಿಸಿದ್ದಾರೆ.

ಗಾಂಧೀಜಿ ಅಂಬೇಡ್ಕರರ ಉಡುಪಿನ ಚರಿತ್ರೆಯ ವ್ಯಾಖ್ಯಾನ ತುಂಬ ಸಂದರ್ಭೋಚಿತವೆನಿಸುತ್ತದೆ. ''ಕೆಳಗಿಳಿದವರು ಖಂಡಿತ ಕೆಳಗಿಳಿದು ಸಣ್ಣವರಾಗಲಿಲ್ಲ, ಮೇಲೇರಿದವರು ಖಂಡಿತ ಹುಸಿ ಪ್ರತಿಷ್ಠೆಯ ಮೇಲರಿಮೆ ಪಡೆಯಲಿಲ್ಲ, ಇಬ್ಬರೂ ನಮ್ಮ ಸಾಮಾಜಿಕ ಚಲನಶೀಲತೆಯ ವೈರುಧ್ಯದಲ್ಲಿ ಹುಟ್ಟಿ ಬೆಳೆದ ಚಲನಶೀಲ ಮಾದರಿಗಳಾದರು'' ಎಂಬ ಮಾತುಗಳು ಒಂದು ಚಾರಿತ್ರಿಕ ಘಟನೆಯ ಪೂರ್ಣಚಿತ್ರವನ್ನೊದಗಿಸಿಕೊಡುತ್ತದೆ.

ಗಾಂಧೀಜಿ 'ಧರ್ಮ ಮತ್ತು ನೈತಿಕತೆಗಳನ್ನು ಸಂವಾದಿಯಾಗಿ ಸ್ವೀಕರಿಸಿದರು' ಎಂಬ ಮಾತು ನಿಜ. ಆದರೆ ವರ್ಣಾಶ್ರಮ ವ್ಯವಸ್ಥೆ ಬಗ್ಗೆ ಗಾಂಧೀಜಿಯ ನಿಲುವು ಅವರನ್ನು 'ಹಿಂದೂ ಸನಾತನಿ' ಎಂಬ ಸಂಶಯಕ್ಕೆಡೆಮಾಡುತ್ತಿದೆ ಎನ್ನುತ್ತಾರೆ ಬರಗೂರರು. ಈ ಬಗ್ಗೆ ಗಾಂಧೀಜಿಯ ನಿಕಟಾನುವರ್ತಿಗಳೂ ತೀಕ್ಷ್ಣವಾದ ವಿಚಾರನಿಷ್ಠರೂ ಆಗಿದ್ದ ಮಶ್ರುವಾಲ ಮತ್ತು ವಿನೋಬಾ ಅವರ ಕೆಲವು ಮಾತುಗಳನ್ನು ಶ್ರೀ ಬರಗೂರರ ಗಮನಕ್ಕೆ ತರಬಯಸುತ್ತೇನೆ. 'ವರ್ಣ ವ್ಯವಸ್ಥೆಯ ಹಳೆಯ ಕಲ್ಪನೆಯನ್ನು ತೆಗೆದುಕೊಂಡು ಗಾಂಧೀಜಿ ಹೊಸ ಅರ್ಥ ಕೊಟ್ಟಿದ್ದಾರೆ. ಆ ಕಲ್ಪನೆಯ ಮೂಲ ಸೂತ್ರಗಳ ಬಗ್ಗೆ ಚಿಂತಿಸಿ ಅದರ ಉದ್ದೇಶಗಳನ್ನೂ ಅಂದಿನ ಸಮಾಜವ್ಯವಸ್ಥೆಗೆ ಅದು ಹೇಗೆ ಅಂಗೀಕೃತವೆನಿಸಿ ಅನುಷ್ಠಾನಕ್ಕೆ ಬಂದಿತು ಎಂಬ ಬಗ್ಗೆಯೂ ಆಳವಾಗಿ ವಿಚಾರ ಮಾಡಿದ್ದಾರೆ. ಒಂದು ಸಮಾಜದ ಗೌರವಕ್ಕೆ ಪಾತ್ರವಾದ ಪುರಾತನ ಪ್ರಕ್ರಿಯೆ, ಶಬ್ದ ಮತ್ತು ಕಲ್ಪನೆಗಳನ್ನೂ ತಿರಸ್ಕರಿಸದೆ ಮೂಲ ಶಬ್ದ ಮತ್ತು ಕಲ್ಪನೆಗಳನ್ನೇ ಹಿಗ್ಗಿಸಿ ಹೊಸ ಅರ್ಥ ತುಂಬಿ ಅದಕ್ಕೆ ವಿಕಸಿತ ರೂಪಕೊಟ್ಟು ಹೊಸ ಪ್ರಯೋಗಗಳಿಂದ ವಿಕಾಸಗೊಳಿಸುವುದು ಅಹಿಂಸಾ ಪಥದ ಒಂದು ವಿಶಿಷ್ಟ ಗುಣ. ವಿಚಾರ ಪರಿವರ್ತನೆ ಮೂಲಕ ಹೃದಯ ಪರಿವರ್ತನೆ ಸಾಧ್ಯವಾಗಿ ಹೊಸ ಕ್ರಾಂತಿಕಾರಕ ಪರಿವರ್ತನೆಗಳು ಸಂಭವಿಸುವುದು ಚಾರಿತ್ರಿಕ ಘಟನೆಗಳಲ್ಲಿ ಕಾಣುತ್ತದೆ. ಕೇವಲ ಬಲಾತ್ಕಾರದ ಶಾಸನಗಳಿಂದ ಪರಿವರ್ತನೆ ಆಗದು. ಭಾರತೀಯ ಪರಂಪರೆಯಲ್ಲಿ ಬಂದಿರುವ ಸಮನ್ವಯದ ಸರ್ವವಿಚಾರವೂ ಈ ಶಾಂತಿಯುತ ಪ್ರಕ್ರಿಯೆಗಳ ಮೂಲಕವೇ ಆಗಿದೆ. ಹಳೆಯ ಶಬ್ದಕ್ಕೆ ಹೊಸ ಅರ್ಥ ಬಂದಿದೆ ಎನ್ನುವುದೂ ನಿಶ್ಶಬ್ದವಾಗಿ ಅನುಸರಣೆಗೆ ಬಂದುಬಿಡುತ್ತದೆ. ಶಬ್ದವನ್ನು ಎಳೆದಾಡದೆ ಅದರಿಂದ ಶಬ್ದಾರ್ಥವನ್ನು ಸ್ವಲ್ಪ ಮಾತ್ರ ದೋಹನ ಮಾಡಿದರೆ ಅದು ಅಹಿಂಸೆಯ ಪದ್ಧತಿ ಎನಿಸುತ್ತದೆ. ಈ ವರ್ಣವ್ಯವಸ್ಥೆಗೂ ಜಾತಿಗಳ ಗೊಂದಲಮಯ ಬೆಳವಣಿಗೆಗೂ ನೇರವಾಗಿ ಸಂಬಂಧ ಕಲ್ಪಿಸುವುದು ಅಷ್ಟು ಸಮಂಜಸವಲ್ಲ. ವರ್ಣವ್ಯವಸ್ಥೆಯ ಶಬ್ದಗಳು ಯಾರಿಗೆ ಇಷ್ಟವಿಲ್ಲವೋ ಅವನ್ನು ಬಿಟ್ಟು ಆ ವ್ಯವಸ್ಥೆಯ ಮೂಲ ಉದ್ದೇಶಗಳನ್ನು ಚಿಂತನೆ ಮಾಡುವುದಾದರೆ ಅವುಗಳ ತಿರುಳು ೧. ಪರಿಶ್ರಮಕ್ಕೆ ಸಮಾನ ಗೌರವ ಮತ್ತು ಸಮಾನ ಸಂಭಾವನೆ, ೨. ಸ್ಪರ್ಧೆಯ ನಿರಸನ ಮತ್ತು ೩. ಆನುವಂಶಿಕ ಸಂಸ್ಕಾರಗಳ ಲಾಭವನ್ನು ಪಡೆಯುವ ಶಿಕ್ಷಣ ಯೋಜನೆ. ಇದಿಷ್ಟೇ ನಮಗೆ ಅಭಿಪ್ರೇತ ಮತ್ತು ಅಗತ್ಯವಾದ ವಿಚಾರ, (ಲೋಕನೀತಿ, ಪು. ೧೮೮).

ಗಾಂಧೀಜಿಯವರ ಆಲೋಚನೆಗಳಲ್ಲಿ ಕೆಲವೊಂದು ವಿರೋಧಾಭಾಸಗಳು ಕಾಣುವುದು ಸಹಜ. ಮಾನವ ವ್ಯಕ್ತಿತ್ವದ ಸಂಕೀರ್ಣತೆಯಲ್ಲಿ ಎಷ್ಟೋ ದೃಷ್ಟಿಕೋನಗಳು ಅನೇಕ ವ್ಯಂಗ್ಯಾರ್ಥಗಳಿಗೆ ಎಡೆಗೊಡುತ್ತವೆ. ಅನೇಕವು ಅಸಂಗತವೂ ಆಗಿರಬಹುದು. ಅನೇಕ ವೇಳೆ ಮಹಾತ್ಮರ ಮಾನವ ದೌರ್ಬಲ್ಯಗಳೂ ನಮಗೆ ಮರೆಯಾಗಿಬಿಡಬಹುದು. ಆದರೆ ಪೂರ್ಣ ದೃಷ್ಟಿಗೆ ಗಾಂಧೀಜಿಯ ಪ್ರಾಮಾಣಿಕ ವೈಚಾರಿಕತೆ ಪ್ರಶ್ನಾತೀತ. ಬರಗೂರರು ಉಪಸಂಹಾರ ಮಾಡಿರುವಂತೆ ''ಸಾಮ್ರಾಜ್ಯಶಾಹೀ ವಿರೋಧಿ ಚಳುವಳಿಯನ್ನು ಕಟ್ಟಿ ಬೆಳೆಸಿದ ಕ್ರಮಕ್ರಿಯೆ ಗಾಂಧೀಜಿಯ ಅನನ್ಯ ಕೊಡುಗೆ.'' ಬರಗೂರರ ವಿಚಾರಪೂರ್ಣ ಲೇಖನಕ್ಕಾಗಿ ಅಭಿನಂದನೆಗಳು.

*– ಕೆ. ಎಸ್. ನಾರಾಯಣ ಸ್ವಾಮಿ , ಬೆಂಗಳೂರು*

# ಬಂಗಾರು ಹೊಸ ಹಾದಿ

ಕ್ರೈಸ್ತರು, ಮುಸ್ಲಿಮರು ನಮ್ಮ ದೇಹದ ಮಾಂಸವಿದ್ದಂತೆ, ಅವರನ್ನು ಬಿಟ್ಟು ರಾಜಕೀಯ ಮಾಡೋದು ಅಸಾಧ್ಯ ಮತ್ತು ಅಪಹಾಸ್ಯ ಎಂದು ಹೇಳಿದವರು ಬೇರಾರೂ ಅಲ್ಲ, ಬಿ.ಜೆ. ಪಿ. ಯ ನೂತನ ಅಧ್ಯಕ್ಷ ಬಂಗಾರು ಲಕ್ಷಣ್. ಆದರೆ ವಾಸ್ತವವಾಗಿ ಈ ಮರೀಚಿಕೆಯಂಥ ಹೇಳಿಕೆ ಅಲ್ಪಸಂಖ್ಯಾತ ಮುಸ್ಲಿಮರಲ್ಲಿ ಹುಟ್ಟಿಸುವುದು ಭ್ರಮೆಯೋ ಅಥವಾ ಭರವಸೆಯೋ? ಇದು ಎಲ್ಲರಲ್ಲೂ ಹಲವು ಸಂಶಯಗಳಿಗೆ ದಾರಿ ಮಾಡಿದಂತಾಗಿದೆ.

ಹಿಂದೂ ರಾಷ್ಟ್ರ, ಹಿಂದುತ್ವ ಪರಿಕಲ್ಪನೆಯ ಕನಸಿಟ್ಟಿದ್ದ ಪಕ್ಷವೀಗ ಹಠಾತ್ತನೆ ತನ್ನ ಹಳಿಯನ್ನು ಬದಲಿಸಿರುವ ಹಿಂದಿನ ಉದ್ದೇಶವಾದರೂ ಏನಿರಬಹುದು? ದಲಿತ ನಾಯಕ ಬಂಗಾರು ಲಕ್ಷ್ಮಣ್‌ರು ಹಾಕಿರುವ ಒಗಟಿಗೆ ಉತ್ತರ ಸರಳ. ರಾತ್ರಿ ಕಂಡ ಬಾವಿಯಲ್ಲಿ ಹಗಲು ಬೀಳಲು ಮನವಿಮಾಡಿಕೊಂಡ ದೈನೇಸಿ ಸ್ಥಿತಿ ಕಂಡು ಮರುಕ ಪಡಬೇಕು ಅಷ್ಟೆ! ಒಂದಂತೂ ಸತ್ಯ. ಅಲ್ಪಸಂಖ್ಯಾತರ ಬೆಂಬಲದ ಹೊರತು ಬಿ. ಜೆ. ಪಿ. ಯ ಪೂರ್ಣ ಬಹುಮತದ ಕನಸಿನ ಸರ್ಕಾರ ಸಾಕಾರಗೊಳ್ಳುವುದು ಆಗದ ಮಾತು. ಒಟ್ಟಾರೆ ಭಾರತೀಯ ಸಂಕೀರ್ಣ ಸಮಾಜದ ಒಳಪದರನ್ನು ನಿಜವಾಗಿ ಈಗಲಾದರೂ ಭಾ.ಜ.ಪ. ಅರ್ಥಮಾಡಿಕೊಂಡಿರಬಹುದೆಂಬ ಭಂಡ ನಂಬಿಕೆ ಕೆಲವರದು. ಅದು ಎಷ್ಟರಮಟ್ಟಿಗೆ ನಿಜ ಎಂಬ ಸಂಶಯದ ಪ್ರಶ್ನೆ ಅದರ ಬೆನ್ನ ಹಿಂದೆ ಏಳುವುದು ಸಹಜ.

ವಾಜಪೇಯಿ ಪಾದತಲದಡಿ ಶಿರವನ್ನಿಟ್ಟು ಅವರ ಆದೇಶ ಪಾಲಿಸುತ್ತೇನೆ ಎಂಬ ಬಹಿರಂಗ ಹೇಳಿಕೆ ನೀಡಿದವರು ಬಂಗಾರು ಲಕ್ಷ್ಮಣ್. ಹಾಗೆಯೇ ಮುಸ್ಲಿಮರ ಜೊತೆ ಬಾಂಧವ್ಯ ರೂಪಿಸಲು ತಂತ್ರ ಹೇಳಿಕೊಟ್ಟವರು ವಾಜಪೇಯಿ ಎನ್ನುವ ಮಾತಿನಲ್ಲಿ ಶತಪ್ರತಿಶತ ನಿಜಾಂಶವಿದೆ. ಬಿ.ಜೆ.ಪಿ. ಯ ಕೆಲವೇ ಕೆಲವು ನಾಯಕರ ಆಯ್ಕೆ ಲಕ್ಷ್ಮಣ್ ಪರವಾದ್ದು. ಅವರು ನಡೆಸುತ್ತಿರುವ ತಾಲೀಮಿಗೆ ಅಡ್ವಾನಿ, ಜೋಶಿ, ವಾಜಪೇಯಿ ಮಾರ್ಗದರ್ಶನ. ಈ ನಾಯಕರ ಗರಡಿಗಳಡಿ ಪಳಗಲು ತಯಾರಾಗಿರುವ ಬಂಗಾರು ಮುಂದೆ ಯಾವ ಯಾವ ನಿರ್ಧಾರ ತೆಗೆದುಕೊಳ್ಳುತ್ತಾರೋ ಕಾದು ನೋಡಬೇಕು.

ನೂತನ ಅಧ್ಯಕ್ಷರ ನವೀನ ರೀತಿಯ ಚಟುವಟಿಕೆ, ಅಸಂಬದ್ಧ ಹೇಳಿಕೆ, ಕೆಲವರನ್ನು ಪಕ್ಷದ ಪುನರ್ಘಟಿತ ಪದಾಧಿಕಾರಿಗಳ ಪಟ್ಟಿಯಿಂದ ಕೈಬಿಟ್ಟ ರೀತಿ, ಇವೆಲ್ಲಾ ಸಂಘ ಪರಿವಾರವನ್ನು ಕೆರಳಿಸಿದ್ದರೆ ಆಶ್ಚರ್ಯವಿಲ್ಲ. ಗುಜರಾತಿನಲ್ಲಿ ವಿಶ್ವ ಹಿಂದೂ ಪರಿಷತ್ತಿನ ಮಹಾನಾಯಕರೊಬ್ಬರು ಕೇಂದ್ರ ಸರ್ಕಾರ, ಗುಜರಾತ್ ಸರ್ಕಾರ ಹಾಗೂ ಭಾ.ಜ.ಪ.ದ ವಿರುದ್ಧ ಹುಚ್ಚೆದ್ದು ಹೀಯಾಳಿಕೆಯ ಪ್ರವಾಹ ಹರಿಸಿದ್ದಾರೆ. ಬಂಗಾರು ಲಕ್ಷ್ಮಣ್ ಪದೇ ಪದೇ ನೀಡುತ್ತಿರುವ ಸಿದ್ಧಾಂತ ವಿರೋಧಿ ಹೇಳಿಕೆಗಳನ್ನು ಕೂಡಲೇ ನಿಲ್ಲಿಸುವಂತೆಯೂ ಸಂಘಪರಿವಾರ ಕೇಳಿಕೊಂಡಿದೆ.

ಸಂಘಪರಿವಾರದ ತಂತ್ರ, ಬಿ.ಜೆ.ಪಿ. ಒಪ್ಪಲೇ ಬೇಕೆಂದು ಎಲ್ಲಿಯೂ ಹೇಳಿಲ್ಲ. ಆದರೆ ಸಂಘಪರಿವಾರದ ಒಂದು ಅಂಗ ಬಿ.ಜೆ.ಪಿ. ಅದನ್ನೆಷ್ಟು ನಿರಾಕರಿಸಿದರೂ ವಸ್ತುಸ್ಥಿತಿ ಬದಲಾಗದು. ಪರಿವಾರದ ಆದೇಶ ಪಾಲಿಸ ಬೇಕಿಲ್ಲ ವೆಂಬುದು ವಾಜಪೇಯಿಯವರಿಗೆ ಔಪಚಾರಿಕ ಸತ್ಯ. ವ್ಯಾವಹಾರಿಕವಾಗಿ ಹಾಗೆ ಮಾಡಲಾಗುವುದಿಲ್ಲ. ಅಷ್ಟೆ ಇಲ್ಲಿಯವರೆಗೂ ಪಕ್ಷ ಪ್ರತಿಪಾದಿಸುತ್ತಾ ಬಂದಿದ್ದ ರಾಮಮಂದಿರ ನಿರ್ಮಾಣ, ೩೭೦ನೇ ವಿಧಿ ರದ್ದು, ಸಮಾನ ನಾಗರಿಕ ಸಂಹಿತೆಯಂಥ ವಿವಾದಾತ್ಮಕ ವಿಷಯಗಳನ್ನು ಮುಂದಿನ ಐದು ವರ್ಷಗಳ ಮಟ್ಟಿಗೆ ಕೈ ಬಿಟ್ಟ ನಾಗಪುರ ಅಧಿವೇಶನದ ನಿರ್ಧಾರವಂತೂ ಪರಿವಾರಕ್ಕೆ ವಿಲಿವಿಲಿ ಒದ್ದಾಡುವಂತೆ ಮಾಡಿದೆ. ಈಗಾಗಲೇ ಪಕ್ಷದಲ್ಲಿ ಕಂಡುಬಂದಿರುವ ಅಶಿಸ್ತು, ಭಿನ್ನಮತ ತಾರಕಕ್ಕೇರಿದೆ. ಗಡಿಯಾರದ ಶಿಸ್ತನ್ನು ರೂಢಿಸಿಕೊಂಡಿರುವ ಪಕ್ಷದಲ್ಲಿ ಒಂದಿಷ್ಟು ಅಶಿಸ್ತು ಕಂಡುಬಂದರೆ ತಕ್ಷಣ ಅಂಥವರ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳುವ ಮಾತನ್ನು ಸಹ ನೂತನ ಅಧ್ಯಕ್ಷರು ಘಂಟಾಘೋಷವಾಗಿ ಸಾರಿದ್ದಾರೆ.

ಸದ್ಯ ಭಾ.ಜ.ಪ. ಹೊರಟಿರುವ ವೇಗ ಅದರ ಸಂಘ ಪರಿವಾರಕ್ಕೆ ಮುಳುವಾಗಿದೆ. ವಿದೇಶಿ ತತ್ವವನ್ನು ಭಾ.ಜ.ಪ. ಅಪ್ಪಿಕೊಂಡಿದೆ. ವಿದೇಶಿ ಕಂಪೆನಿಗಳಿಗೆ ಸುವರ್ಣಾವಕಾಶ ಕಲ್ಪಿಸಿಕೊಟ್ಟಿರುವ ವಾಜಪೇಯಿ ಸರ್ಕಾರದ ನೀತಿಯ ವಿರುದ್ಧ ಬಜರಂಗದಳ, ವಿ.ಹಿಂ.ಪ. ಮತ್ತು ಸ್ವದೇಶಿ ಜಾಗರಣ ಮಂಚ್ ಈಗಾಗಲೇ ತೀವ್ರ ಪ್ರತಿಭಟನೆ ವ್ಯಕ್ತಪಡಿಸಿವೆ. ನೂತನ ಅಧ್ಯಕ್ಷರು ತೆಗೆದುಕೊಂಡಿರುವ ನಿರ್ಣಯಗಳು, ಅವರು ಇಡುತ್ತಿರುವ ಹೆಜ್ಜೆಗಳು ಅವರವಲ್ಲ. ಆದರೆ ಆ ಹೆಜ್ಜೆಗೆ ಪ್ರೇರಣಾ ರೂಪಿಗಳೇ ಬೇರೆ. ಇದು ತಿಳಿದ ಸತ್ಯ.

ನಾಗಪುರ ಅಧಿವೇಶನ ಪಕ್ಷದ ಕಾರ್ಯಕರ್ತರಿಗೆ ಹಾಕಿದ 'ಲಕ್ಷ್ಮಣರೇಖೆ' ಎಷ್ಟು ಸಮಂಜಸ! ಅದೇ ಲಕ್ಷ್ಮಣ್‌ಗೆ ವಾಜಪೇಯಿ, ಅಡ್ವಾನಿ, ಜೋಶಿ ಮತ್ತು ಸಂಘಪರಿವಾರ ರೇಖೆ ಹಾಕಿದೆ ಎಂಬ ಅಂಶ ಇದೀಗ ಹೊರಬರಲಿದೆ.

ನೂತನ ಅಧ್ಯಕ್ಷರು ಪ್ರಾಚೀನ ಪರಂಪರೆಗೆ ಪೂರಕವಾಗದ ರೀತಿಯಲ್ಲಿ ಕೆಲಸ ಮಾಡಬಹುದು. ಆದರೆ ಹಿಂದಿನ ಭಾರತೀಯ ಜನಸಂಘದ ಸಂತಾನವಾದ ಬಿ.ಜೆ.ಪಿ. ಹೊತ್ತಿದ್ದ ರುದ್ರ ಕನಸುಗಳನ್ನು ಬದಿಗೊತ್ತಿ ನವ ಜಾತ್ಯತೀತ ಒಲವಿಗೆ ಶರಣಾಗುವಂತಿದ್ದರೆ ಅದರ ದಾರಿ ದುರ್ಗಮ್ಯ ವಾಗಿದೆ. ಬಂಗಾರು ಮುಂದೆ ಬರಲಿರುವ ದಿನಗಳಲ್ಲಿ ಹಲವಾರು ಜಟಿಲ ಸಮಸ್ಯೆಗಳನ್ನು ಅವರ ಪಕ್ಷದೊಳ ಗಿಂದಲೇ ಎದುರಿಸಬೇಕಾಗಿ ಬಂದರೆ ಅಚ್ಚರಿಯಲ್ಲ.

ಲಕ್ಷ್ಮಣ್
ಬೆಂಗಳೂರು

ತಿಂಗಳ ಪತ್ರಿಕೆ **ಹೊಸತು**

**ಚಂದಾ ನವೀಕರಿಸುವವರಿಗೆ ಸೂಚನೆ**

*'ಹೊಸತು' ಪತ್ರಿಕೆ ಹೊತ್ತು ತರುವ ಲಕೋಟೆಯ ಮೇಲೆ ನಿಮ್ಮ ಈಗಿನ ಚಂದಾ ರಸೀದಿ ಸಂಖ್ಯೆ ಹಾಗೂ ಚಂದಾ ಅವಧಿ ಇರುವುದನ್ನು ಗಮನಿಸಿ. ಚಂದಾ ನವೀಕರಿಸುವಾಗ ನಿಮ್ಮ ವಿಳಾಸದ ಸಹಿತ ಲಕೋಟೆ ಮೇಲಿರುವ ಆ ಮಾಹಿತಿಯನ್ನು ಕತ್ತರಿಸಿ ಕಳಿಸಿಕೊಡಿ. ಇಲ್ಲವೇ ಚಂದಾ ರಸೀದಿ ಸಂಖ್ಯೆ ತಿಳಿಸಿ.*

ವ್ಯವಸ್ಥಾಪಕರು
'ಹೊಸತು', 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ 5159, ಬೆಂಗಳೂರು- 560 001

ಪ್ರಿಯರೇ,

ಇದರೊಂದಿಗೆ 'ಹೊಸತು' ಪತ್ರಿಕೆಗಾಗಿ ಮೂರು/ಎರಡು/ಒಂದು ವರ್ಷದ ಚಂದಾ ಹಣ ರೂ. 250/180/100 ಕ್ಕೆ 'ಹೊಸತು' ಹೆಸರಿನಲ್ಲಿ ಡಿ.ಡಿ./ಎಂ.ಓ. ಕಳಿಸುತ್ತಿದ್ದೇನೆ (ಡಿ.ಡಿ./ಎಂ.ಓ. ಸಂಖ್ಯೆ............... ದಿನಾಂಕ....................). ಹಣ ತಲುಪಿದ ಕೂಡಲೇ ನನ್ನ ಚಂದಾವನ್ನು ನವೀಕರಿಸಿಕೊಂಡು / ನೋಂದಾಯಿಸಿಕೊಂಡು ಅಧಿಕೃತ ರಸೀದಿ ಕಳಿಸಿಕೊಡಿ. ಕೆಳಗಿರುವ ನನ್ನ ವಿಳಾಸಕ್ಕೆ ಪತ್ರಿಕೆ ಕಳಿಸಿಕೊಡಿ.

ಹೆಸರು / ವಿಳಾಸ

.............................................

.............................................

............................................. ಸಹಿ

.............................................

*(ಹೊಸದಾಗಿ ಚಂದಾದಾರರಾಗುಯಸುವವರೂ ಈ ನಮೂನೆಯನ್ನೇ ಬಳಸಬಹುದು)* ದಿನಾಂಕ : ......................

# ಕೋಲಾರದ ಚಿನ್ನದ ಗಣಿ – ಭವಿಷ್ಯ ತೂಗುಯ್ಯಾಲೆಯಲ್ಲಿ

ನಾ. ದಿವಾಕರ್

ಕರ್ನಾಟಕದಲ್ಲಿ ಪ್ರಪ್ರಥಮ ರೈಲು ಮಾರ್ಗ ಆರಂಭವಾದದ್ದು ಇಲ್ಲಿ. ಶರಾವತಿಯ ವಿದ್ಯುತ್ ಉತ್ಪಾದನಾ ಕೇಂದ್ರದಿಂದ ಪ್ರಪ್ರಥಮವಾಗಿ ನೇರವಾದ ವಿದ್ಯುಚ್ಛಕ್ತಿ ಪಡೆದ ನಗರ ಇದು. ಪ್ರಪಂಚದಲ್ಲೇ ಅತಿ ಆಳವಾದ ಭೂತಳ ಗಣಿ ಇರುವುದು ಇಲ್ಲಿಯೇ. ಇಡೀ ದೇಶದಲ್ಲಿ ಶೇಕಡಾವಾರು ಅತಿ ಹೆಚ್ಚು ಸಂಖ್ಯೆಯ ದಲಿತ ಜನಸಂಖ್ಯೆಯನ್ನು ಹೊಂದಿರುವ ನಗರ ಇದೇ. ಕರ್ನಾಟಕದಾದ್ಯಂತ ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಪಕ್ಷವೇ ಜನಪ್ರಿಯವಾಗಿದ್ದಾಗ ಕಮ್ಯುನಿಸ್ಟರ ಭದ್ರಕೋಟೆ ಎಂದು ಹೆಸರು ಪಡೆದಿದ್ದ ನಗರ ಇದೇ. ಅತೀ ಹೆಚ್ಚು ಸಂಖ್ಯೆಯ ಭಾಷಾ ಅಲ್ಪಸಂಖ್ಯಾತರನ್ನು ಹೊಂದಿರುವ ನಗರ ಇದು. ಹಾಗೆಯೇ ಭಾರತೀಯ ಸಮಾಜದಲ್ಲಿನ ಅತ್ಯಂತ ಹೀನಾಯ, ಕ್ರೂರ, ಅಮಾನವೀಯ, ಪದ್ಧತಿಯಾದ ತಲೆಯ ಮೇಲೆ ಮಲ ಹೊರುವ ಪದ್ಧತಿ ಇಂದಿಗೂ ಜಾರಿಯಲ್ಲಿರುವ ನಗರವೂ ಇದೇ. ಕನ್ನಡ ನಾಡು ಚಿನ್ನದ ಬೀಡು ಎಂದು ಕರ್ನಾಟಕಕ್ಕೆ ಹೆಸರು ಬರಲು ಕಾರಣವಾದ ಚಿನ್ನದ ನೆಲವೂ ಇದೇ. ಇದೇ ಕೋಲಾರ ಚಿನ್ನದ ಗಣಿ. ೧೨೦ ವರ್ಷಗಳ ಕಾಲ ದೇಶದ ಆರ್ಥಿಕತೆಗೆ ೮೦೦ ಟನ್‌ಗೂ ಹೆಚ್ಚಿನ ಚಿನ್ನವನ್ನು ನೀಡಿ, ಲಕ್ಷಾಂತರ ಜನರಿಗೆ ಜೀವನ ನೀಡಿ ಇಂದು - ನಾಳಿನ ಪ್ರಶ್ನೆಯನ್ನು ಎದುರಿಸುತ್ತಿರುವ ವಿಶಿಷ್ಟವಾದ ನಗರ ಕೋಲಾರ ಚಿನ್ನದ ಗಣಿ. ಇಂತಹ ಚಿನ್ನದ ಬೀಡು ಇಂದು ಸರ್ಕಾರಕ್ಕೆ, ಜನತೆಗೆ ಕಬ್ಬಿಣದ ಕಡಲೆಯಾಗಿದೆ.

ನಮ್ಮ ಆಳುವ ವರ್ಗಗಳಿಗೆ, ಅದರಲ್ಲೂ ಈಗ ಕೇಂದ್ರದಲ್ಲಿರುವ ಭಾ. ಜ. ಪ. ದಂತಹ ಬಂಡವಾಳಶಾಹಿ ಪಕ್ಷಗಳಿಗೆ ಸಾರ್ವಜನಿಕ ಉದ್ದಿಮೆಗಳೆಂದರೆ ಒಂದು ಥರಾ ಅಲರ್ಜಿ. ನೆಹರೂರವರು ಈ ಉದ್ದಿಮೆಗಳನ್ನು ''ಆಧುನಿಕ ಭಾರತದ ದೇವಾಲಯಗಳು'' ಎಂದು ಆರಾಧಿಸುತ್ತಿದ್ದರು. ಆದರೆ ಇಂದಿನ ಸರ್ಕಾರಕ್ಕೆ ಈ ದೇವಾಲಯಗಳು ಬೇಡವಾಗಿವೆ. ಏಕೆಂದರೆ ರಾಮನ ದೇವಾಲಯ ವೋಟುಗಳನ್ನು ಒದಗಿಸಿದಂತೆ ಈ ದೇವಾಲಯಗಳು ಒದಗಿಸುವುದಿಲ್ಲವಲ್ಲ. ಕಾಂಗ್ರೆಸ್, ಜನತಾದಳ ಇತ್ಯಾದಿ ಪಕ್ಷಗಳೇನೂ ಈ ವಿಷಯದಲ್ಲಿ ಭಿನ್ನವಾಗಿಲ್ಲ. ವ್ಯತ್ಯಾಸವಿರುವುದು ತೀವ್ರತೆಯಲ್ಲಿ ಮಾತ್ರ. ಇಂದು ವಿದೇಶಿ ಬಂಡವಾಳ ಎಲ್ಲಾ ಪ್ರತಿಗಾಮಿ ರಾಜಕೀಯ ಪಕ್ಷಗಳ ಆರಾಧನಾ ಮಂತ್ರ. ಬ್ಯಾಂಕು, ವಿಮಾ ಕ್ಷೇತ್ರಗಳು, ಹೀಗೆ ಎಲ್ಲಾ ಉತ್ಪಾದಕೀಯ ಸಾರ್ವಜನಿಕ ಉದ್ದಿಮೆಗಳಲ್ಲಿನ ಹೂಡಿಕೆಗಳನ್ನು ಹಿಂದೆಗೆಯುವ ಮೂಲಕ ಅವುಗಳನ್ನೇ ಕೊಲ್ಲಲೆತ್ನಿಸುತ್ತಿರುವ ಸರ್ಕಾರಕ್ಕೆ ಯಾವುದೇ ಲಾಭ ಗಳಿಸದ ಚಿನ್ನದ ಗಣಿ ಏಕೆ ಬೇಕು?

ಬ್ರಿಟಿಷರು ಭಾರತವನ್ನು ಸ್ವತಂತ್ರ ರಾಷ್ಟ್ರವನ್ನಾಗಿ ಮಾಡಿಹೋದದ್ದು ಭಾರತೀಯರ ಮೇಲಿನ ಪ್ರೇಮದಿಂದಲ್ಲ ಅಥವಾ ಯುದ್ಧಭೀತಿಯಿಂದಲ್ಲ. ಅವರಿಗೆ ನಮ್ಮ ದೇಶದಲ್ಲಿ ದೋಚಿಕೊಂಡು ಹೋಗಲು ಏನೂ ಉಳಿದಿರಲಿಲ್ಲ. ಹಾಗೆಯೇ ನಮ್ಮ ಚಿನ್ನದ ಗಣಿಯ ಪಾಡು. ಇರುವ ಚಿನ್ನವನ್ನೆಲ್ಲಾ ಅತಿ ಕಡಿಮೆ ಬೆಲೆಗೆ ಕೊಂಡು, ಕಾರ್ಮಿಕರ ಶೋಷಣೆ ಮಾಡಿ, ಸರ್ಕಾರದ ಬೊಕ್ಕಸವನ್ನು ತುಂಬಿಸಿಕೊಂಡನಂತರ ಸರ್ಕಾರಕ್ಕೆ ಚಿನ್ನದ ಗಣಿ ಏಕೆ ಬೇಕು? ಈಗ ಅವರಿಗೆ ಇದು ಒಂದು ಸುರಂಗ ಮಾತ್ರ. ಇಲ್ಲಿನ ೨ ಲಕ್ಷ ಜನತೆ ನಿರುದ್ಯೋಗಿಗಳಾಗಿ ಸಾಮಾಜಿಕ ಅವ್ಯವಸ್ಥೆ ಉಂಟಾದರೆ ನಮ್ಮ ಆಳುವ ವರ್ಗಗಳಿಗೆ ಯಾವ ಚಿಂತೆಯೂ ಇಲ್ಲ. ಏಕೆಂದರೆ, ದೇಶದಾದ್ಯಂತ ಈ ಸನ್ನಿವೇಶ ಸರ್ವೇಸಾಮಾನ್ಯವಾಗಿದೆ. ನಮ್ಮ ದೇಶಕ್ಕೆ ಇಂದು ಬೇಕಿರುವುದು ಮಾನವ ಸಂಪನ್ಮೂಲ ಅಲ್ಲ, ಬದಲಾಗಿ ವಿದೇಶಿ ಬಂಡವಾಳ ಹೂಡಿಕೆ, ಸಂಪನ್ಮೂಲ, ತಂತ್ರಜ್ಞಾನ. ಜಾಗತೀಕರಣದ ಅಲೆಗಳಲ್ಲಿ ಸಿಲುಕಿ ಇಡೀ ವಿಶ್ವವೇ ಒಂದು ಗ್ರಾಮವಾಗಿ ಮಾರ್ಪಡುತ್ತಿರುವ ಈ ಸಂದರ್ಭದಲ್ಲಿ ಕೆ. ಜಿ. ಎಫ್. ನಂತಹ ಸಣ್ಣ ಹಟ್ಟಿಗಳು ಎಷ್ಟಿವೆಯೋ? ಅವುಗಳು ನಾಶವಾದರೆ ಆಳುವ ವರ್ಗಗಳಿಗೆ ಯಾವ ಚಿಂತೆಯೂ ಇಲ್ಲ.

*''ಚಿನ್ನದ ನಾಡಿದು ಮೈಸೂರು'' ಎಂದು ಹಾಡುತ್ತಿದ್ದ ಕಾಲವೊಂದಿತ್ತು. ಅತಿ ಪ್ರಾಚೀನ ಕಾಲದಿಂದಲೂ ಚಿನ್ನದ ನಿಕ್ಷೇಪಗಳನ್ನು ರೂಢಿಸಿಕೊಂಡಿದ್ದ ಕರ್ನಾಟಕ ಇಂದು ಸಾವಿರಾರು ಮಂದಿ ಚಿನ್ನದ ಗಣಿ ಕಾರ್ಮಿಕರ ಜೀವನವನ್ನು ಮುಚ್ಚಿಹಾಕಲಾಗುವ ಗಣಿಗಳಲ್ಲಿ ಹೂತುಬಿಡುತ್ತಿದೆ. ಚಿನ್ನದ ಅದುರು ಇಲ್ಲವೆಂಬ ಕಾರಣ ನಿಜವೋ ಅದುರನ್ನು ಹೊರತೆಗೆದು ಶುದ್ಧೀಕರಿಸುವ ಪ್ರಕ್ರಿಯೆಯಲ್ಲಿ ನುಂಗಣ್ಣಗಳ ಹಾವಳಿ ಅಧಿಕವೆಂಬುದು ನಿಜವೋ ತಿಳಿಯಬೇಕಾಗಿದೆ. ಇರುವ ಉದ್ಯಮಗಳನ್ನೆಲ್ಲಾ ಮುಚ್ಚುವುದೇ ''ಆಧುನಿಕ ಪ್ರಗತಿ''ಯಾಗುತ್ತಿರುವಾಗ ಮುಚ್ಚಲ್ಪಟ್ಟ ಉದ್ಯಮಗಳ ಕೆಲಸಗಾರನಿಗೆ ಪರ್ಯಾಯ ವ್ಯವಸ್ಥೆ ಏನಾದರೂ ಉಂಟೆ? ಯಥಾಪ್ರಕಾರ ಉತ್ಸವಗಳನ್ನು ನಡೆಸುವ ಸಂಪ್ರದಾಯವನ್ನು ಮುಂದುವರಿಸುತ್ತಿದ್ದೇವೆ: ದಸರಾ, ರಾಜ್ಯೋತ್ಸವ, ಇತ್ಯಾದಿ. ಕೆಲಸಗಾರರನ್ನು ನಿರುದ್ಯೋಗಿಗಳನ್ನಾಗಿಸಿ ಏನು ಉತ್ಸವದ ಸಂಭ್ರಮ ಪಡಬೇಕು?*

ಪ್ರಜಾಪ್ರಭುತ್ವದಲ್ಲಿ ಜನತೆಯ ವೋಟುಗಳೇ ಪ್ರಮುಖ ಪಾತ್ರ ವಹಿಸುತ್ತವೆ. ನಮ್ಮ ಜನಗಳಿಂದ ವೋಟುಗಳನ್ನು ಗಳಿಸುವ ಪಾತ್ರದಲ್ಲಿ ನಮ್ಮ ಹಲವು ರಾಜಕೀಯ ಪಕ್ಷಗಳು ಪಳಗಿವೆ. ನಿರುದ್ಯೋಗವಿರಲಿ, ಕ್ಷಾಮವಿರಲಿ, ಬರಗಾಲವಿರಲಿ, ಪ್ರವಾಹ ಬರಲಿ ಎಲ್ಲದಕ್ಕೂ ಮೇಲಿನವರೇ ಕಾರಣ ಎಂದು ನಂಬಿ ಎಲ್ಲಾ ಸಮಸ್ಯೆಗಳಿಗೂ ತಮ್ಮ ಹಣೆಬರಹ ಎಂದು ನಂಬಿ ಕೇವಲ ಆಶಾವಾದದಿಂದಲೇ ಬಾಳ್ವೆ ನಡೆಸುವ ನಮ್ಮ ಜನತೆಯನ್ನು ಮರುಳು ಮಾಡುವುದು ಕಷ್ಟವಲ್ಲ. ನಮ್ಮ ಜನತೆಯ ಈ ಅಮಾಯಕತೆಗೆ ಕೆ.ಜಿ.ಎಫ್. ಒಂದು ನಿದರ್ಶನ. ಇಲ್ಲಿನ ಜನ ಅಮಾಯಕರಷ್ಟೇ ಅಲ್ಲ ಬಹಳ ಸಹನಾಶೀಲರೂ ಹೌದು. ಕೆಲವು ವರ್ಗದ ಜನ ಕೆ.ಜಿ.ಎಫ್.ನ ಗಣಿ ಕಾರ್ಮಿಕರನ್ನು ಒರಟು ಸ್ವಭಾವದವರೆಂತಲೋ, ಗೂಂಡಾ ಪ್ರವೃತ್ತಿಯವರೆಂತಲೋ ಪರಿಗಣಿಸಬಹುದು. ಆದರೆ ಈ ಅಪವಾದಗಳು ಸತ್ಯಕ್ಕೆ ದೂರವಾದದ್ದು. ಈ ಆರೋಪವು ಪೂರ್ವಗ್ರಹಪೀಡಿತವಾದದ್ದು.

ಕೆ.ಜಿ.ಎಫ್. ನ ಜನತೆಯಷ್ಟು ಸಹನಶೀಲ ಜನ ಬೇರೆಲ್ಲೂ ಸಿಗಲಾರರು. ಇಲ್ಲದಿದ್ದರೆ ಅವರು ವಾಸಿಸುವ ಪರಿಸ್ಥಿತಿಯನ್ನು ಅವರು ಒಪ್ಪಿಕೊಂಡು ವರ್ಷಾನುಗಟ್ಟಲೆ ಬಾಳುತ್ತಿದ್ದರೇ? ಗಣಿ ಕಾರ್ಮಿಕರು ವಾಸಿಸುವ ಪ್ರದೇಶವನ್ನು ಒಮ್ಮೆ ನೋಡಿದರೆ ಎದೆ ಝಲ್ಲೆನ್ನುತ್ತದೆ. ಕೆಲವೊಮ್ಮೆ ಕಾರ್ಮಿಕರು ತಮ್ಮ ಜೀವನ ಇಂತಹ ಪರಿಸ್ಥಿತಿಯಲ್ಲಿ ಸಾಗಿಸುತ್ತಾರೆಯೇ ಎಂದೆನಿಸುತ್ತದೆ. ನಿದರ್ಶನ ರೂಪದಲ್ಲಿ ಕೆಲವು ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡರೆ, ಇಲ್ಲಿ ಗಣಿ ಕಾರ್ಮಿಕರು ವಾಸಿಸುವ ಮನೆಗಳು ಜಿಂಕ್‌ಶೀಟ್ ಅಥವಾ ಆಸ್‌ಬೆಸ್ಟಾಸ್ ಶೀಟ್‌ಗಳಿಂದ ಮಾಡಿದ್ದು, ಇವುಗಳ ವಿಸ್ತೀರ್ಣ 10x20 ಅಡಿ ಅಥವಾ ಇನ್ನೂ ಚಿಕ್ಕದು. ಆ ಊರಿನ ಬೇಸಿಗೆಯ ಬೇಗೆ ಇವುಗಳಡಿಯಲ್ಲಿ ಹೇಗಿರಬಹುದು! ಮಳೆಗಾಲದಲ್ಲಿ ಕೆಲವು ಪ್ರದೇಶಗಳಿಂದ ಪ್ರವೇಶಿಸುವುದೇ ಅಸಾಧ್ಯ. ನೀರಿನ ಬವಣೆ ಎಷ್ಟಿದೆ ಎಂದರೆ ಒಂದುಸಾರಿಗೆ 200ಕ್ಕೂ ಹೆಚ್ಚು ಬಿಂದಿಗೆಗಳು ಸಾಲಿನಲ್ಲಿರುವುದನ್ನು ನೋಡಬಹುದು. ಅಲ್ಲಿ ಯಾರೂ ಇರುವುದಿಲ್ಲ. ಏಕೆಂದರೆ ನೀರು ಯಾವಾಗ ಬರುವುದೋ ಎಂದು ತಿಳಿದಿರುವುದಿಲ್ಲ. ಅದೇ ವೇಳೆಯಲ್ಲಿ ಜನ ಸೀಮೆ ಎಣ್ಣೆ ಅಥವಾ ರೇಷನ್ ತರಲು ಕ್ಯೂ ನಿಂತಿರುತ್ತಾರೆ. ನೀರಿಗಾಗಿ ಜಗಳವಾಡುವುದು ಮುಂಗಾರು ಮಳೆಯಷ್ಟೇ ಸತ್ಯ. ಇನ್ನು ಚಿನ್ನದ ಅದಿರನ್ನು ತೆಗೆದು ದೇಶಕ್ಕೆ ಚಿನ್ನವನ್ನು ಒದಗಿಸಿದರೂ ಇಲ್ಲಿನ ಕಾರ್ಮಿಕರು, ಮಹಿಳೆಯರು ಚಿನ್ನವನ್ನು ನೋಡುವುದೇ ಅಪರೂಪ. ಇಲ್ಲಿ ಪ್ರತಿ ಹಬ್ಬದ ಹಿಂದಿನ ದಿನ ಎಲ್ಲಾ ಚಿನ್ನದಂಗಡಿಗಳೂ ತುಂಬಿರುತ್ತವೆ. ಅಂದರೆ ಎಲ್ಲರೂ ಚಿನ್ನ ಬೆಳ್ಳಿ ಕೊಳ್ಳುತ್ತಾರೆಂದಲ್ಲ. ಮಾರವಾಡಿಗಳ ಬಳಿ ಒತ್ತೆ ಇಟ್ಟಿರುವ ಒಡವೆಗಳನ್ನು ಬಿಡಿಸಿಕೊಳ್ಳಲು ಬಂದಿರುತ್ತಾರೆ. ಹಬ್ಬ ಕಳೆದ ಮರುದಿನವೇ ಆ ಒಡವೆಗಳು ಮತ್ತೆ ಮಾರವಾಡಿಯ ಕೈ ಸೇರುತ್ತವೆ. ತಮ್ಮ ದಿನನಿತ್ಯ ಜೀವನ

ಸಾಗಿಸುವುದೇ ದುಸ್ತರವಾಗಿರುವ ಕಾರ್ಮಿಕರಿಗೆ ಆಭರಣಗಳೆಲ್ಲಿಂದ ಬಂದೀತು. ಇನ್ನು ಕೇವಲ ಬೆಳ್ಳಿ ಬಂಗಾರ ಮಾತ್ರವಲ್ಲದೆ ಹಿತ್ತಾಳೆ, ತಾಮ್ರದ ಪಾತ್ರೆಗಳನ್ನೂ ಸಹ ಒತ್ತೆ ಇಡಲಾಗುತ್ತದೆ. ಅವುಗಳ ಮೇಲೆ ಪಾವತಿ ಮಾಡಿರುವ ಬಡ್ಡಿಯ ಹಣ ಅವರ ಸಾಲವನ್ನಷ್ಟೇ ಅಲ್ಲದೆ ಪಾತ್ರೆಗಳ ಬೆಲೆಯನ್ನೂ ಮೀರಿಹೋಗಿರುತ್ತದೆ. ಆದರೆ ಪಾತ್ರೆಗಳು ಮಾತ್ರ ಮತ್ತೆ ಮನೆ ಸೇರುವುದಿಲ್ಲ. ಕೆಲವು ಕಾರ್ಮಿಕ ವಸತಿ ಪ್ರದೇಶಗಳು ಯಾವುದೇ ಕೊಳಚೆ ಪ್ರದೇಶಕ್ಕಿಂತಲೂ ಕಡಿಮೆ ಇಲ್ಲ. ತಲೆಯ ಮೇಲೆ ಮಲ ಹೊರುವ ಪದ್ಧತಿ ಇಲ್ಲಿ ಇಂದಿಗೂ ಜಾರಿಯಲ್ಲಿದೆ. ತಮಗೆ ಬರುವ ಸಂಬಳದಲ್ಲಿ ದೈನಂದಿನ ಜೀವನ ನಡೆಸುವುದೇ ದುಸ್ತರವಾಗಿರುವಾಗ ಈ ಗಣಿ ಕಾರ್ಮಿಕರು ಉಳಿತಾಯ ಮಾಡುವುದೆಲ್ಲಿ! ಇದರೊಂದಿಗೆ ತನ್ನ ಮೈ ಮುರಿಯುವ ಕೆಲಸದ ಆಲಸ್ಯವನ್ನು ಮರೆಯಲು ಕುಡಿತ ಒಂದು ಚಟವಾಗಿರುತ್ತದೆ. ಕುಡಿದು ಬಂದ ಗಂಡನಿಂದ ಹೊಡೆತ ತಿನ್ನಲಾರದೆ ಮಹಿಳೆಯರು ಕಂಗಾಲಾಗಿರುತ್ತಾರೆ. ತನ್ನ ಸಂಸಾರ ಸಾಗಿಸಲು ಎಲ್ಲವನ್ನು ತ್ಯಾಗ ಮಾಡುವ ಮಹಿಳೆಯರು ಮಾರವಾಡಿಗಳಿಗೆ ಬಡ್ಡಿ ತೆತ್ತುವುದರಲ್ಲಿಯೇ ಜೀವ ಸವೆಸುತ್ತಾರೆ. ಇಷ್ಟೊಂದು ಬವಣೆಗಳ ನಡುವೆಯೂ ಇಲ್ಲಿನ ಜನ ಬಹಳ ಸಹನೆಯಿಂದ ತಾಳ್ಮೆಯಿಂದ ಜೀವನ ನಡೆಸುತ್ತಾರೆ.

1950-60ರಲ್ಲಿ ಮೂವತ್ತು ಸಾವಿರ ಕಾರ್ಮಿಕರಿದ್ದರು. ಇಂದು ನಾಲ್ಕು ಸಾವಿರ ಮಾತ್ರ ಇದ್ದಾರೆ; ಅಂದರೆ ಒಂದು ಇಡೀ ತಲೆಮಾರು ನಿರುದ್ಯೋಗ ಎದುರಿಸುತ್ತಿದೆ. ಇಲ್ಲಿಂದ ಬೆಂಗಳೂರಿಗೆ ದಿನಕ್ಕೆ 5000 ಜನ ಪ್ರಯಾಣ ಮಾಡುತ್ತಾರೆ. ಬಹುತೇಕ ಯುವಕರು, ಯುವತಿಯರು ದಿನಗೂಲಿ ನೌಕರಿ ಮಾಡುತ್ತಾರೆ. ಬರುವ ಅಲ್ಪಸ್ವಲ್ಪ ಹಣದಲ್ಲಿ ತಂದೆತಾಯಿಯರಿಗೆ ಸಹಾಯ ಮಾಡುತ್ತಾರೆ. ಹೊರ ನೋಟಕ್ಕೆ ವಸ್ತ್ರವಿನ್ಯಾಸಗಳಿಂದ ಇವರು ಆಫೀಸಿನ ಕೆಲಸ ಮಾಡುವವರಂತೆಯೇ ಕಂಡರೂ ವಾಸ್ತವತೆಯು ಭಿನ್ನವಾಗಿರುತ್ತದೆ. ಅವರ ಮುಖಗಳಲ್ಲಿನ ನಗುವಿನ ಹಿಂದೆ ಅಪಾರ ನೋವು ದುಃಖ ಇರುತ್ತದೆ. ಭವಿಷ್ಯದ ಬಗ್ಗೆ ಚಿಂತೆ ಇರುತ್ತದೆ.

ಇಲ್ಲಿನ ಜನತೆಯ ಈ ಅಮಾಯಕ ಸ್ವಭಾವ, ಅಸಹಾಯಕತೆಯಿಂದಲೆ ಇಲ್ಲಿ ಸಮಾಜ ದ್ರೋಹಿಗಳೂ ಬೇರೂರಿದ್ದಾರೆ. ದಿನಗಟ್ಟಲೆ ಉಪವಾಸವಿರುವವರಿಗೆ ಐದು ರೂಪಾಯಿ ಸಿಕ್ಕಿದರೆ ನಿಧಿ ಸಿಕ್ಕಿದಂತೆ. ಅದಕ್ಕೆ ಅವರು ಯಾವ ಕೆಟ್ಟ ಕೆಲಸ ಮಾಡಲೂ ಸಿದ್ಧವಾಗಿರುತ್ತಾರೆ. ರಾಜ, ಸೆಲ್ವಂ, ತಂಗಂ ಮುಂತಾದ ಯುವಕರುಗಳು 30-35ರ ವಯಸ್ಸಿಗೆ ದೊಡ್ಡ ರೌಡಿಗಳೆಂದು ಹೆಸರು ಪಡೆದು ಮರಣವನ್ನಪ್ಪಿದರು. ಅವರು ರೌಡಿಗಳಾದದ್ದು ಸ್ವ ಇಚ್ಛೆಯಿಂದಲ್ಲ. ಅವರ ಜೀವನದ ಒತ್ತಡಗಳಿಂದ, ದಿನನಿತ್ಯದ ಜಂಜಾಟಗಳಿಂದ ಮತ್ತು ದಿವ್ಯ ನಿರ್ಲಕ್ಷ್ಯದಿಂದ ಇರುವ ಅವರಿಗೆ ಸಮಾಜ ಬೇರೆ ಹಾದಿಯಲ್ಲಿ ನಡೆಯಲು ಮಾರ್ಗದರ್ಶನ ನೀಡಿದಲ್ಲಿ ಅವರು ರೌಡಿಗಳಾಗಿ ರಸ್ತೆಯಲ್ಲಿ ಕೊಲೆಯಾಗುತ್ತಿರಲಿಲ್ಲ. ಇಂತಹ ಹಲವಾರು ಯುವಕರ ಹಿಂಸಾತ್ಮಕ ಪ್ರವೃತ್ತಿಯ ಹಿಂದೆ ಒಂದು ಜನಾಂಗದ, ಒಂದು ಪ್ರದೇಶದ ಇತಿಹಾಸವೇ ಅಡಗಿದೆ. ಆಳುವ ಕ್ರೂರ ಮುಖಗಳ ಒಂದು ಪರಿಚಯ ಇದರಿಂದಾಗುತ್ತದೆ.

ಕೆ. ಜಿ. ಎಫ್. ಪ್ರದೇಶದಲ್ಲಿ ರಾಬರ್ಟ್‌ಸನ್ ಪೇಟೆಯು ಒಂದು ಬಡಾವಣೆ. ಈ ಬಡಾವಣೆಯಲ್ಲಿ ವಾಸಿಸುವವರೆಲ್ಲರೂ ಶ್ರೀಮಂತ, ಮಧ್ಯಮ ವರ್ಗದ ಜನಗಳು, ಅಧಿಕಾರಿ ವರ್ಗಗಳು, ವ್ಯಾಪಾರಸ್ಥರು. ಈ ಪೇಟೆ ಒಂದು ಬೆಳ್ಳಿಯ ಪರದೆಯಿದ್ದಂತೆ. ಇಲ್ಲಿನ ಜೀವನ ಶೈಲಿ ನೋಡಿದರೆ ಯಾವ ನಗರಕ್ಕೂ ಕಡಿಮೆಯಿಲ್ಲ. ಆಧುನಿಕ ಮಾರುಕಟ್ಟೆ ಯುಗಕ್ಕೆ ಇದು ಪ್ರತಿಬಿಂಬ. ಇಲ್ಲಿ ದೊರೆಯದ ವಸ್ತುವೇ ಇಲ್ಲ. 100ಕ್ಕೂ ಹೆಚ್ಚು ಬೆಳ್ಳಿ ಬಂಗಾರದಂಗಡಿಗಳಿವೆ. ಯಾವುದೇ ಅತ್ಯಾಧುನಿಕ ವಸ್ತುಗಳು ಇಲ್ಲಿ ಮೊದಲು ಲಭ್ಯವಿರುತ್ತವೆ. ಅತ್ಯಾಧುನಿಕ ಆಸ್ಪತ್ರೆ, ಸೌಲಭ್ಯಗಳು ಇಲ್ಲಿ ದೊರೆಯುತ್ತವೆ.



*ಚಿನ್ನದ ಗಣಿ*

ಪಕ್ಕದಲ್ಲಿರುವ ಬಿ.ಇ.ಎಂ.ಎಲ್. ಕಾರ್ಖಾನೆಯ ನೌಕರರಿಗೆ, ಅಧಿಕಾರಿಗಳಿಗೆ ಇದು ಮುಖ್ಯ ಮಾರುಕಟ್ಟೆ. ಈ ಪ್ರದೇಶದಲ್ಲಿ ವಿದ್ಯಾಸಂಸ್ಥೆಗಳಿಗೂ ಕೊರತೆಯಿಲ್ಲ. ಇಲ್ಲಿನ ಆಭರಣದ ಅಂಗಡಿಯವರಿಗೆ ಆಭರಣ ತಯಾರು ಮಾಡಿಕೊಡಲು 2000ಕ್ಕೂ ಹೆಚ್ಚು ಅಕ್ಕಸಾಲಿಗರು ಇದ್ದಾರೆ.

ಇಂತಹ ಒಂದು ಬಹುಮುಖೀ ಮಾರುಕಟ್ಟೆಯಲ್ಲಿ ಒಂದು ವಿಶಿಷ್ಟತೆಯೂ ಇದೆ. ಗಣಿ ಕಾರ್ಮಿಕರಿಗೆ ಸಂಬಳ ಸಿಗುವುದು ತಡವಾದರೆ ಅಥವಾ ಅವರೇನಾದರೂ ಮುಷ್ಕರ ನಿರತರಾದರೆ ಇಲ್ಲಿನ ಮಾರುಕಟ್ಟೆ ಕುಸಿದು ಬೀಳುತ್ತದೆ. ಇವರಿಗಿಂತಲೂ ಹೆಚ್ಚು ವೇತನ ಪಡೆಯುವ ಬಿ. ಇ. ಎಂ. ಎಲ್. ನೌಕರರಿಂದಲೂ ಮಾರುಕಟ್ಟೆ ಚೇತರಿಸಿಕೊಳ್ಳುವುದಿಲ್ಲ. ಅಂದರೆ ಕೆ.ಜಿ.ಎಫ್.ನ ಆರ್ಥಿಕ ವ್ಯವಸ್ಥೆಯ ಸುಭದ್ರತೆ, ಎಷ್ಟರ ಮಟ್ಟಿಗೆ ಗಣಿ ಕಾರ್ಮಿಕರನ್ನಾಧರಿಸಿದೆ ಎಂದು ನಾವು ಗ್ರಹಿಸಬಹುದು. ಮೇಲೆ ಹೇಳಿದಂತೆ ಲೇವಾದೇವಿ ವ್ಯವಹಾರದಿಂದಲೇ ಇಲ್ಲಿನ ಮಾರುಕಟ್ಟೆ ಚಲಿಸುತ್ತದೆ.

ಈ ರಾಬರ್ಟ್‌ಸನ್ ಪೇಟೆ ಎಂಬ ಬೆಳ್ಳಿ ಪರದೆಯ ಹಿಂದೆ ಅಡಗಿರುವ ಕ್ರೂರ ಸತ್ಯ ಯಾರಿಗೂ ಗೋಚರಿಸುವುದಿಲ್ಲ. ಎತ್ತ ಕಡೆ ತಲೆಯೆತ್ತಿ ನೋಡಿದರೂ ಕಾಣುವ ಬೆಟ್ಟದಷ್ಟೆತ್ತರ ಬೆಳೆದಿರುವ ಸೈವಾಯ್ಡ್ ಮಣ್ಣುಗುಪ್ಪೆಗಳೆ ಇಲ್ಲಿನ ಜನರು ಅನುಭವಿಸುವ ಅನಾರೋಗ್ಯದ ಬಗ್ಗೆ ಸಾರಿ ಹೇಳುತ್ತವೆ. ಇಲ್ಲಿನ ಭೂಗರ್ಭದಲ್ಲಿನ ನೀರೂ ಕಲುಷಿತವಾಗಿರುತ್ತದೆ. ಪುರಸಭೆಯ ನಿರ್ಲಕ್ಷ್ಯದ ಫಲವಾಗಿ ಪರಿಸರ ಮಾಲಿನ್ಯ ಇನ್ನೂ ಹದಗೆಟ್ಟಿರುತ್ತದೆ. 100 ವರ್ಷಗಳ ಇತಿಹಾಸವಿರುವ ಇಲ್ಲಿನ ಆಸ್ಪತ್ರೆಗಳ ದುಸ್ಥಿತಿಯ ಬಗ್ಗೆ ಹೇಳದಿರುವುದು ಲೇಸು. ಇದೆಲ್ಲವನ್ನೂ ಮೌನವಾಗಿಯೇ ಸಹಿಸುವ ಇಲ್ಲಿನ ಜನ ಅಪಾರ ಸಹನಶೀಲರಲ್ಲವೇ?

ಈ ಚಿನ್ನದ ಗಣಿ ಪ್ರದೇಶದ ರಾಜಕೀಯಕ್ಕೆ ಒಂದು ಇತಿಹಾಸವೇ ಇದೆ. ಸ್ವಾತಂತ್ರ್ಯ ಪೂರ್ವದಿಂದಲೂ ಇಲ್ಲಿನ ಜನತೆ ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಅನೇಕ ಸ್ವಾತಂತ್ರ್ಯ ಹೋರಾಟಗಾರರು ಇನ್ನೂ ಜೀವಂತವಾಗಿದ್ದಾರೆ. ಕೆಲವರ ಸ್ಥಿತಿ, ಯಾರಿಗೂ ಬೇಡವಾಗಿದೆ. ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಹಿನ್ನೆಲೆಯಲ್ಲಿ ಇಲ್ಲಿನ ಸ್ಯಾನಿಟರಿ ಬೋರ್ಡ್‌ನ ಕಛೇರಿಗೆ ಬೆಂಕಿ ಹಚ್ಚಿದ ಪ್ರಸಂಗವೂ ಇಲ್ಲಿ ನಡೆದಿದೆ. ಎಡಪಂಥೀಯ ಚಿಂತಕರಾದ ಗೋವಿಂದನ್, ಕೆ. ಎಸ್. ವಾಸನ್ ಮುಂತಾದವರ ನೇತೃತ್ವದಲ್ಲಿ ಗಣಿ ಕಾರ್ಮಿಕರು ಆ ದಿನಗಳಲ್ಲಿಯೇ 100 ದಿನಗಳ ಮುಷ್ಕರ ಹೂಡಿದ್ದರು. ಅಂದಿನ ಕಾರ್ಮಿಕ ಹೋರಾಟಗಳ ಫಲವಾಗಿಯೇ ಗಣಿ ಕಾರ್ಮಿಕರು ಅನೇಕ ಸವಲತ್ತುಗಳನ್ನು ಪಡೆದರು. ಗಣಿಯ ಖಾಸಗಿ ಮಾಲಿಕರು ಕಾರ್ಮಿಕರನ್ನು ಹೊರಹೋಗದಂತೆ ತಡೆಗಟ್ಟಲು ಅವರ ತೋಳುಗಳಿಗೆ ಲೋಹದ ಪಟ್ಟಿಯನ್ನು ಕಟ್ಟುತ್ತಿದ್ದರು. ಇಂತಹ ಅನೇಕ ಶೋಷಕ ನೀತಿಗಳು ಕಾಲಕ್ರಮೇಣ ಕಡಿಮೆಯಾಯಿತೆಂದು ಹೇಳಬಹುದು.

ಎಡಪಂಥೀಯ ರಾಜಕೀಯದ ಪರಂಪರೆಯಲ್ಲಿಯೇ ಬೆಳೆದು ಬಂದ ಕೆ.ಜಿ.ಎಫ್. ಜನತೆ ಬಹು ವರ್ಷಗಳ ಕಾಲ ಎಡಪಕ್ಷಗಳಿಗೆ ಬೆಂಬಲಿಸಿದರೂ ಅವರ ಸಾಮಾಜಿಕ - ಆರ್ಥಿಕ ಸ್ಥಿತಿಗಳಲ್ಲಿ ಯಾವುದೇ ಪರಿವರ್ತನೆ ತರುವಲ್ಲಿ ಎಡಪಕ್ಷಗಳು ವಿಫಲವಾದವು. ಸಿ.ಪಿ.ಎಂ.ನ ಕಾರ್ಮಿಕ ಸಂಘಟನೆಯೂ ಸಹ ಕ್ರಮೇಣ ತನ್ನ ವರ್ಚಸ್ಸನ್ನು ಕಳೆದುಕೊಂಡು ಈಗ ದಯನೀಯ ಸ್ಥಿತಿಯಲ್ಲಿದೆ. ತಮಿಳುನಾಡಿನ ರಾಜಕೀಯದ ಪ್ರಭಾವದಿಂದಾಗಿ ಡಿ.ಎಂ.ಕೆ., ಎ.ಐ.ಎ. ಡಿ.ಎಂ.ಕೆ. ಪಕ್ಷಗಳ ಪ್ರಭಾವ ಇಲ್ಲಿ ಹೆಚ್ಚಾಗತೊಡಗಿತು. 1980ರಲ್ಲಿ ನಡೆದ ಭಾಷಾ ಗಲಾಟೆಗಳ ಪರಿಣಾಮವಾಗಿ ಈ ಪಕ್ಷಗಳ, ಅದರಲ್ಲೂ ಎ.ಐ.ಎ.ಡಿ. ಎಂ.ಕೆ. ಪಕ್ಷದ ಪ್ರಭಾವ ಹೆಚ್ಚಾಗತೊಡಗಿತು. ಇಂದು ಇಲ್ಲಿನ ಬಹುಪಾಲು ಜನತೆ ಯಾವುದೇ ಕಾರ್ಮಿಕ ಪರವಾದ ಕಾರ್ಯಕ್ರಮ ಹೊಂದಿರದ ಭಾ.ಜ.ಪ.ದ ಹಿಂದೆ ಬೀಳಹೊರಟಿರುವಂತೆ ತೋರುತ್ತದೆ. ಚುನಾಯಿತ ಪ್ರತಿನಿಧಿಗಳ ವೈಫಲ್ಯದಿಂದ ಬೇಸತ್ತಿರುವ ಇಲ್ಲಿನ ಜನತೆಗೆ ಸರಿಯಾದ ನಾಯಕತ್ವ ಇಲ್ಲ. ಸಮಸ್ಯೆಗಳ ಬಗ್ಗೆ ಯಾವುದೇ ಪಕ್ಷದ ನಾಯಕರು ನಿಷ್ಠೆಯಿಂದ ಯೋಚಿಸದಿರುವುದು ದುರಂತವೇ ಸರಿ.

ಇಷ್ಟೊಂದು ದಿರ್ಘವಾದ, ವಿಶಿಷ್ಟವಾದ, ಇತಿಹಾಸ ಹೊಂದಿರುವ ಈ ನಗರದ ಸಂಸ್ಕೃತಿಯೂ ವಿಶಿಷ್ಟವಾಗಿಯೇ ಇದೆ. ಕ್ರೈಸ್ತ ಮಿಷನರಿಗಳ ಪ್ರಭಾವದಿಂದ ಕ್ರೈಸ್ತ ಮತಕ್ಕೆ ಪರಿವರ್ತನೆಗೊಂಡಿರುವ ಇಲ್ಲಿನ ಹಲವು ಜನ ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ. ಕಾರ್ಮಿಕರ ಮನೆಗಳಲ್ಲಿ ಯಾರಾದರೂ ಮರಣ ಹೊಂದಿದರೆ ಸುತ್ತಲಿನ ಜನರೆಲ್ಲರೂ ಅವರ ನೆರವಿಗೆ ಬಂದು ಅಂತ್ಯಸಂಸ್ಕಾರವನ್ನು ನಡೆಸುತ್ತಾರೆ. ಬಡಕುಟುಂಬಗಳಾಗಿದ್ದ ಪಕ್ಷದಲ್ಲಿ ಎಲ್ಲರೂ ಸೇರಿ ಧನಸಹಾಯ ಮಾಡುತ್ತಾರೆ. ಯಾರಾದರೂ ಮೃತರಾದಾಗ ಗುಂಪಾಗಿ ಸೇರಿಕೊಂಡು ರೋದಿಸುವ ಪದ್ಧತಿ ಇಲ್ಲಿನ ವೈಶಿಷ್ಟ್ಯ. ವೇಷ-ಭೂಷಣ, ವಸ್ತ್ರ-ವಿನ್ಯಾಸ, ಆಚರಣೆಗಳು, ಸಮಾರಂಭಗಳ ವಿಭಿನ್ನತೆಯೇ ಈ ಜನತೆಯ ಸಹನಶೀಲತೆಗೂ ಕಾರಣವೆಂದು ಹೇಳಬಹುದು. ಒಮ್ಮೊಮ್ಮೆ ಇಲ್ಲಿ ಏರ್ ಬ್ಲಾಸ್ಟ್ ಆದಾಗ ಗಣಿಯಲ್ಲಿ ಸಿಲುಕಿ ಕಾರ್ಮಿಕರು ಪ್ರಾಣ ಕಳೆದುಕೊಳ್ಳುತ್ತಾರೆ. ಇದುವರೆಗೂ ಆ ರೀತಿ ಸಾವಿರಾರು ಕಾರ್ಮಿಕರು ಪ್ರಾಣ ತೆತ್ತಿದ್ದಾರೆ. ಆಗ ಈ ಗಣಿ ಕಾರ್ಮಿಕರ ಪರಿವಾರದವರ ಮನಸ್ಥಿತಿ ದಾರುಣವಾಗಿರುತ್ತದೆ.

ಯಾರು ಸತ್ತಿದ್ದಾರೆಂಬುದು ಶವ ಹೊರಬರುವವರೆಗೂ ತಿಳಿದಿರುವುದಿಲ್ಲವಾದ್ದರಿಂದ ಒಳಗೆ ಹೋಗಿರುವ ಕಾರ್ಮಿಕರ ಕುಟುಂಬಗಳೆಲ್ಲವೂ ಕಾಯುತ್ತಾ ಕೂರಬೇಕಾಗುತ್ತದೆ. ನಿಜ ಸ್ಥಿತಿ ತಿಳಿಯುವವರೆಗೂ ಈ ಜನಗಳ ಮನದಲ್ಲಿ ಉಂಟಾಗುವ ದುಗುಡ, ತುಮುಲಗಳನ್ನು ವರ್ಣಿಸಲಾದೀತೆ? ಇಂತಹ ಅನೇಕಾನೇಕ ಸನ್ನಿವೇಶಗಳನ್ನು ಈ ಜನ ಎದುರಿಸಿದ್ದಾರೆ. ಆದರೆ ಮೃತಪಟ್ಟ ಕಾರ್ಮಿಕರ ಮಕ್ಕಳಿಗೆ ಸರಿಯಾದ ನೌಕರಿ ನೀಡದೆ ನಮ್ಮ ಸರ್ಕಾರಗಳು ಅವರನ್ನೂ ವಂಚಿಸಿವೆ.

ಗಣಿ ಕಾರ್ಮಿಕರು ಕೆಲಸ ಮುಗಿಸಿ ಬರುವಾಗ ಚಿನ್ನದ ಗಟ್ಟಿಗಳನ್ನು ಕದ್ದಿದ್ದಾರೆಯೋ ಇಲ್ಲವೋ ಎಂದು ಪರೀಕ್ಷೆ ಮಾಡಲಾಗುತ್ತದೆ. ಅಪರಾಧಿಗಳಿಗೆ ಶಿಕ್ಷೆಯೂ ಸಿದ್ಧವಾಗಿರುತ್ತದೆ. ಆದರೂ ಕಾರ್ಮಿಕರ ಅರಿವಿಗೆ ಬಾರದಂತೆ ಚಿನ್ನದ ಅದಿರಿನ ಕಳ್ಳಸಾಗಾಣಿಕೆ ನಡೆಯುತ್ತಿರುತ್ತದೆ. ಈ ಕಳ್ಳಸಾಗಾಣಿಕೆಯಿಂದಲೇ ಚಿನ್ನದ ಗಣಿ ಇಂದು ದುಸ್ಥಿತಿಯಲ್ಲಿದೆ ಎನ್ನುವುದು ಎಲ್ಲರಿಗೂ ತಿಳಿದಿರುವ ಅರ್ಧಸತ್ಯ. ಇದರಿಂದಲೇ ಇಲ್ಲಿನ ಅನೇಕರು ಲಕ್ಷಾಧಿಪತಿಗಳಾಗಿರುವುದು ಅಷ್ಟೇ ಸತ್ಯ. ಇವೆಲ್ಲವನ್ನೂ ನೋಡಿಯೂ ನೋಡದಂತೆ ಸರ್ಕಾರ ವರ್ತಿಸಿದರೆ ಇದೇ ನಮ್ಮ ಜೀವನ ಎಂದು ಸ್ವೀಕರಿಸುವ ಇಲ್ಲಿನ ಕಾರ್ಮಿಕ ಜನತೆ ಇಂದು ತಮ್ಮ ಭವಿಷ್ಯದ ಬಗ್ಗೆ ಚಿಂತಾಕ್ರಾಂತರಾಗಿದ್ದಾರೆ.

ಏಕೆಂದರೆ ಕೇಂದ್ರ ಸರ್ಕಾರವು ತನ್ನ ಆದೇಶದ ಮೂಲಕ ಚಿನ್ನದ ಗಣಿಯನ್ನು ಮುಚ್ಚಿಹಾಕಲು ತೀರ್ಮಾನಿಸಿದೆ. ಒಂದೇ ಏಟಿಗೆ ನಾಲ್ಕು ಸಾವಿರ ಕಾರ್ಮಿಕರನ್ನು, ಅವರ ಕುಟುಂಬದವರನ್ನು ಬೀದಿಪಾಲು ಮಾಡಲು ಹೊರಟಿರುವ ಈ ಸರ್ಕಾರ ಅವರಿಗೆ ಹಣದ ಆಮಿಷ ತೋರಿಸಿದೆಯೇ ಹೊರತು ಸುಭದ್ರ ಜೀವನದ ಬಗ್ಗೆ ಯಾವುದೇ ಆಶ್ವಾಸನೆ ನೀಡಿಲ್ಲ. ಬದಲಿ ವ್ಯವಸ್ಥೆಯ ಬಗ್ಗೆಯೂ ಸರ್ಕಾರ ಮೌನ ತಾಳಿದೆ. ಒಂದು ವೇಳೆ ಗಣಿಗಳನ್ನು ಮುಚ್ಚಿದರೆ ಏನಾದೀತು?

ಈಗಿರುವ ನಾಲ್ಕು ಸಾವಿರ ಕಾರ್ಮಿಕರು ಬೀದಿಪಾಲಾಗುತ್ತಾರೆ. ಈಗಾಗಲೇ ನಿರುದ್ಯೋಗದಿಂದ ಬಳಲುತ್ತಿರುವ ಸಾವಿರಾರು ಯುವಕ-ಯುವತಿಯರು ಕಂಗಾಲಾಗುತ್ತಾರೆ. ಇಲ್ಲಿನ ಆರ್ಥಿಕತೆ ಕುಸಿಯುತ್ತದೆ. ಗಣಿಯ ಕಾರ್ಯಾಚರಣೆಗಾಗಿಯೇ ಇರುವ ಇಲ್ಲಿನ ವಿದ್ಯುಚ್ಛಕ್ತಿ ಕೇಂದ್ರದಲ್ಲಿರುವ 2000 ಕಾರ್ಮಿಕರು, ನೀರು ಸರಬರಾಜು ಕೇಂದ್ರದಲ್ಲಿನ 2000 ಕಾರ್ಮಿಕರು ನಿರುದ್ಯೋಗಿಗಳಾಗುತ್ತಾರೆ. ಆರ್ಥಿಕ ವ್ಯವಸ್ಥೆಯೇ ಕುಸಿದುಬಿದ್ದಾಗ ನೌಕರಿಯಿಲ್ಲದೆ ಹತಾಶರಾಗಿ ಸಣ್ಣಪುಟ್ಟ ವ್ಯಾಪಾರ ನಡೆಸುತ್ತಿರುವವರೂ ಬೀದಿಪಾಲಾಗುತ್ತಾರೆ. ಈ ಆರ್ಥಿಕ ಸಾಮಾಜಿಕ ಗೊಂದಲಗಳ ನಡುವೆ ಯುವ ಜನಾಂಗ ಹತಾಶೆಗೆ ಸಿಲುಕುತ್ತದೆ. ಸಮಾಜ ವಿರೋಧಿ ಶಕ್ತಿಗಳು ಬಲವಾಗುತ್ತವೆ. ಇಂದಿನವರೆಗೂ ಸಹನೆಯಿಂದ ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡು ಉತ್ತಮ ಭವಿಷ್ಯ ನಿರೀಕ್ಷೆಯಲ್ಲಿದ್ದ ಜನತೆಗೆ ಅವರ ಭವಿಷ್ಯದ ಕನಸು ಭಸ್ಮವಾಯಿತೆಂದು ಗೊತ್ತಾದರೆ ಅವರ ಸಹನೆ ಕೈಮೀರಿದರೂ ಹೆಚ್ಚೇನಿಲ್ಲ.

ಯಾವುದೇ ಪರ್ಯಾಯ ವ್ಯವಸ್ಥೆ ಮಾಡದೆ, ಬದಲಿ ನೌಕರಿ ವ್ಯವಸ್ಥೆ ಒದಗಿಸದೆ, ಚಿನ್ನದ ಗಣಿಯನ್ನು ಮುಚ್ಚಲು ಹೊರಟಿರುವ ಕೇಂದ್ರ ಸರ್ಕಾರವು ಕಾರ್ಮಿಕರಿಗೆ ಈಗ ಅವರು ವಾಸಿಸುತ್ತಿರುವ ಬೆಂಕಿಪೆಟ್ಟಿಗೆಯಂತಹ ಮನೆಗಳಲ್ಲಿ ನೆಲೆಸುವಂತೆ ಹೇಳುವುದಲ್ಲದೆ ಹೆಚ್ಚು ಬಾಡಿಗೆ ನೀಡುವಂತೆ ಕೇಳುತ್ತಿದೆ. ಆಳುವ ವರ್ಗದ ಇಂತಹ ಅಮಾನವೀಯ ವರ್ತನೆಗೆ ಕೆ. ಜಿ. ಎಫ್.ನ ಜನತೆಯು ಹೇಗೆ ಪ್ರತಿಕ್ರಿಯಿಸಬೇಕು ಎಂಬುದೇ ದೊಡ್ಡ ಪ್ರಶ್ನೆಯಾಗಿದೆ. ಪ್ರಸ್ತುತ, ರಾಜಕೀಯ ನಾಯಕರು ಹಾಗೂ ಇತರ ಸಂಘಟನೆಗಳು ಗಣಿ ಉದ್ಯಮವನ್ನೇ ಮುಂದುವರೆಸಿ ಎಂದು ಆಗ್ರಹಿಸುತ್ತಿವೆ. ಇನ್ನೂ ಕೆಲವು ಸಂಘಟನೆಗಳು ಓಪನ್ ಕಾಸ್ಟ್ ಮೈನಿಂಗ್, ಲೋಕೋಮೋಟಿವ್ ಕಾರ್ಖಾನೆ ಮುಂತಾದವುಗಳನ್ನು ಆರಂಭಿಸಲು ಸಲಹೆ ನೀಡಿವೆ. ತಮ್ಮ ನಾಳಿನ ಭವಿಷ್ಯವನ್ನು ಕುತೂಹಲದಿಂದ ಎದುರು ನೋಡುತ್ತಿರುವ ಕಾರ್ಮಿಕ ವರ್ಗ ಇಂದಿಗೂ ಸಹನೆಯಿಂದಲೇ ದುಃಸ್ಥಿತಿಯನ್ನು ಎದುರಿಸುತ್ತಿದೆ. ಇಲ್ಲಿ ಕೆ. ಜಿ. ಎಫ್.ನ ಜನತೆಗೆ ಬೇಕಿರುವುದು ಗಣಿಯ ಪುನರಾರಂಭವಲ್ಲ, ತಮ್ಮ ಬೆವರು ರಕ್ತ ಸುರಿಸಿ ದುಡಿದು ಜೀವವನ್ನೇ ಪಣವಿಟ್ಟು ಭೂತಳದಲ್ಲಿ ದುಡಿಯುವ ಗಣಿ ಕಾರ್ಮಿಕರಿಗೆ ಬೇಕಿರುವುದು ಒಂದು ಹೊಸ ಜೀವನ. ಗಣಿಯನ್ನು ಪುನರಾರಂಭಿಸಿದ ಮಾತ್ರಕ್ಕೆ ಕೆ.ಜಿ.ಎಫ್. ಸ್ವರ್ಗವಾಗುವುದಿಲ್ಲ. ಇಲ್ಲಿನ ಕಾರ್ಮಿಕರ ಬವಣೆಯೂ ತಪ್ಪುವುದಿಲ್ಲ. ನೆರೆ ರಾಜ್ಯದಿಂದ ಬಂದು ಒಂದು ಶತಮಾನಕ್ಕಿಂತಲೂ ಹೆಚ್ಚು ಕಾಲ ಇಲ್ಲಿ ನೆಲೆಸಿ ದೇಶದ ಸಂಪತ್ತಿನ ಭಂಡಾರಕ್ಕೆ ತಮ್ಮ ಕಾಣಿಕೆ ನೀಡಿರುವ ಇಲ್ಲಿನ ಕಾರ್ಮಿಕರಿಗೆ ಬೇಕಿರುವುದು ತಮ್ಮ ಬಾಳ್ವೆ ನಡೆಸಲು ಒಂದು ನೌಕರಿ. ಉತ್ತಮ ಶಿಕ್ಷಣ, ಆರೋಗ್ಯ, ಸುಭದ್ರ ಜೀವನ ಇವನ್ನು ಒದಗಿಸುವುದು ಸರ್ಕಾರದ ಜವಾಬ್ದಾರಿಯಲ್ಲವೆ? ಆದರೆ ಕನ್ನಡ ನಾಡನ್ನು ಚಿನ್ನದ ಬೀಡಾಗಿ ಮಾಡಿದ ಕಾರ್ಮಿಕರಿಗೆ ಸರ್ಕಾರ ನೀಡುತ್ತಿರು ವುದೇನು? ಅದೇ ಹಳೆಯ ಮನೆಗಳು, ಅದೇ ಅನಾರೋಗ್ಯಕರ ಪರಿಸರ, ಅದೇ ಸಾಮಾಜಿಕ ದೈನ್ಯಸ್ಥಿತಿ, ಅದೇ ನಿಕೃಷ್ಟ ಜೀವನ. ಚಿನ್ನದ ಗಣಿಯ ದುಃಸ್ಥಿತಿಗೆ ಕಾರಣರಾದವರು ಇಂದು ಚಿನ್ನದ ಮಹಲುಗಳಲ್ಲಿ ವಾಸಿಸುತ್ತಿದ್ದಾರೆ; ಅವರನ್ನು ಕೇವಲ ಬಡ್ಡಿ ಹಣದಿಂದಲೇ ಪೋಷಿಸಿದ ಕಾರ್ಮಿಕರು ಬೀದಿ ಪಾಲಾಗುತ್ತಿದ್ದಾರೆ! ಇದು ಹೀಗೆಯೇ ಮುಂದುವರೆ ಯಬೇಕೇ? ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದು ಕೆ.ಜಿ.ಎಫ್.ನ, ಕರ್ನಾಟಕದ, ಪ್ರಜ್ಞಾವಂತ ಜನತೆಯ ಕರ್ತವ್ಯ.

ಜಾಗತೀಕರಣದ ಹೆಸರಿನಲ್ಲಿ ಸಾಮ್ರಾಜ್ಯಶಾಹಿಗಳ ದಾಸಾನುದಾಸರಾಗಿ ಸಾಮಾನ್ಯ ಜನತೆಯನ್ನು ಕಡೆಗಣಿಸಿರುವ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಈ ಜನವಿರೋಧಿ ನೀತಿಯನ್ನು ಹಿಮ್ಮೆಟ್ಟಿಸಲು ಇದು ಸುಸಮಯ. ನಮ್ಮ ಪುರೋಗಾಮಿ ಪಕ್ಷಗಳು ಈ ನಿಟ್ಟಿನಲ್ಲಿ ಕಣ್ತೆರೆದು ನೋಡುತ್ತಿವೆಯೇ ?

**ನಾ. ದಿವಾಕರ್**

ಕೆನರಾ ಬ್ಯಾಂಕ್, ಬೆಳ್ಳೂರು ಅಂಚೆ, ಮಂಡ್ಯ ಜಿಲ್ಲೆ - ೫೭೧ ೪೧೮

*(ಪುಟ ೩ರಿಂದ ಮುಂದುವರೆದಿದೆ)*

ಸೂಚನೆ. ರಾಜ್ ಅವರನ್ನು ಕ್ಷೇಮವಾಗಿ ಹಿಂದಕ್ಕೆ ಪಡೆಯಲು ಕೃಷ್ಣ ಎಂತೆಂತಹ ರಾಜಿ ಮಾಡಿಕೊಂಡರೂ ರಾಜ್ ಕುಟುಂಬ ಆಗಾಗ್ಗೆ ಅವರನ್ನು ಕಟುವಾಗಿ ಟೀಕಿಸಿರುವುದು ಆಶ್ಚರ್ಯಕರವಾಗಿದೆ. ಅನಪೇಕ್ಷಿತ ಹಾಗೂ ಆಕ್ಷೇಪಾರ್ಹ ಮಾತುಗಳನ್ನು ಈ ಸಂದರ್ಭದಲ್ಲಿ ಕೃಷ್ಣ ಅವರ ಬಗ್ಗೆ ಆಡಿರುವುದನ್ನು ನೋಡಿದರೆ ಮುಖ್ಯಮಂತ್ರಿಗಳು ಏನು ಮಾಡಿದರೂ ಟೀಕೆಗೆ ಗುರಿಯಾಗುವ ಪೇಚಿನಲ್ಲಿ ಸಿಲುಕಿದ್ದಾರೆ. ಟೀಕೆಗಳ ತೀಕ್ಷ್ಣತೆಯನ್ನು ಕಡಿಮೆ ಮಾಡಿಕೊಳ್ಳಲು ಅವರು ಇನ್ನೊಂದು ಯಜ್ಞ ಮಾಡಿದರೂ ಮಾಡಿದರೆ! ಏನೇ ಇರಲಿ, ಮಾರನ್‌ಗಳ ಮಧ್ಯಪ್ರವೇಶವನ್ನು ಅವರು ವಿರೋಧಿಸದಿದ್ದುದು ಅತ್ಯಂತ ಶೋಚನೀಯ. ಟಾಡಾ ಬಂಧಿಗಳನ್ನು ಬಿಡುವವರೆಗೆ ರಾಜ್ ಅವರನ್ನು ಬಿಡುವುದಿಲ್ಲವೆಂದು ಹೇಳಿಸಿಕೊಂಡು ಬರಲು ಇವರು ಬೇಕಾಗಿತ್ತೆ?

ಕರುಣಾನಿಧಿ-ಜಯಲಲಿತಾ ಸೇರಿದಂತೆ ತಮಿಳುನಾಡಿನ ಹಿಂದಿನ ಮುಖ್ಯಮಂತ್ರಿಗಳು ವೀರಪ್ಪನ ಬಗ್ಗೆ ತಾಳಿದ ಉಪೇಕ್ಷೆಯ ಮನೋಭಾವವು ಇಂದಿನ ಪ್ರಚಂಡ ಪಾತಕವಾಗಿ ಬೆಳೆದಿರುವಂತೆ, ಇಂದು ಕರುಣಾನಿಧಿ ಕೈಗೊಳ್ಳುತ್ತಿರುವ ಕ್ರಮಗಳು ಈ ಪಾತಕಗಳನ್ನು ನಾಳೆ ಮತ್ತೂ ಉಲ್ಬಣಗೊಳ್ಳುವಂತೆ ಮಾಡಿದರೆ ಆಶ್ಚರ್ಯವಿಲ್ಲ. ಕಾಡು ಕಡಿದ ವೀರಪ್ಪ ಜನಗಳ ಬೇಟೆಯಾಡಿದ; ಕರುಣಾನಿಧಿ ಪೋಷಿಸುವ ಮಾರನ್‌ಗಳು ನಾಳೆ ನಾಡನ್ನು ಕಡಿದು ಜನಾಂಗೀಯ ಬೇಟೆ ಆರಂಭಿಸುತ್ತಾರೆಂಬ ಕಲ್ಪನೆ ಅಪಥ್ಯವಾದ್ದು. ಹಾಗಾಗಬಹುದೆಂಬ ನಮ್ಮ ಆತಂಕ ಸುಳ್ಳಾಗಿ ಪರಿಣಮಿಸಿದರೆ ಬಹಳ ಸಂತೋಷ, ಆದರೆ ಹಾಗಾಗಲಾರದೆಂಬ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಕಾಡಿನ ಸಂಪತ್ತನ್ನು ಲೂಟಿ ಮಾಡಿದವನ ಜೊತೆ ಶಾಮೀಲಾದ ರಾಜಕಾರಣಿಗಳಿಗೆ ಮಾರನ್‌ಗಳ ಜೊತೆ ಸೇರುವುದು ಅಷ್ಟೇನೂ ಅಸಹ್ಯವೆನಿಸಲಾರದು. ಆದರೆ ಇತರರಿಗೆ ಅದು ಸತ್ಸಂಗವೆನಿಸುವುದಿಲ್ಲ.

# ಖ-ಭೌತ ವಿಜ್ಞಾನ ಸಂಸ್ಥೆಯ ಹಗರಣ

**ಬೆಂ**ಗಳೂರಿನಲ್ಲಿರುವ ಖ-ಭೌತವಿಜ್ಞಾನ ಸಂಶೋಧನಾ ಸಂಸ್ಥೆಯ (ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಸ್ಟ್ರೋ-ಫಿಸಿಕ್ಸ್) ವಿಜ್ಞಾನಿಗಳು ಸಿಡಿದೆದ್ದಿದ್ದಾರೆ. ಅಲ್ಲಿಯ ನಿರ್ದೇಶಕರ ನಿಯಮರಹಿತ ಬೇಜವಾಬ್ದಾರಿ ಆಡಳಿತದಿಂದ ರೋಸಿಹೋದವರು ಇನ್ನೇನು ಮಾಡಬೇಕು! ಈ ಸಂಶೋಧನಾ ಸಂಸ್ಥೆಗೆ ಭವ್ಯವಾದ ಖ್ಯಾತಿಯಿದೆ. ಆದರೆ ಈಗಿನ ಆಡಳಿತವು ಸರ್ವಾಧಿಕಾರಿ ಮನೋಭಾವದ್ದು, ಪರದೆಯ ಹಿಂದಿನ ಕುತಂತ್ರದ್ದು. ನಿರ್ದೇಶಕರ ಮತ್ತು ಆಡಳಿತ ಮಂಡಲಿಯ ಹಲವು ಹೊಲಸು ನಿರ್ಧಾರಗಳು ಸಂಸ್ಥೆಯ ನಿಷ್ಠಾವಂತ ವಿಜ್ಞಾನಿಗಳಿಗೆ ಆಘಾತ ಉಂಟುಮಾಡಿವೆ. ಅಲ್ಲಿ ಕೆಲಸ ಮಾಡುವವರ ಹಕ್ಕುಗಳಿಗೆ ಚ್ಯುತಿ ತರುವ ಕ್ರಮಗಳಿಂದಾಗಿ ಈಗ ಅಲ್ಲಿ ನಿರ್ದೇಶಕರ ಹಾಗೂ ವಿಜ್ಞಾನಿಗಳ ನಡುವೆ ವಿರಸವು ವಿಪರೀತವಾಗಿ ಬೆಳೆದಿದೆ. ಇತ್ತೀಚಿನ ಒಂದು ಘಟನೆ ಡಾ|| ಜೋರ್ದಾರ್ ಎಂಬ ಅಂತರರಾಷ್ಟ್ರೀಯ ಖ್ಯಾತಿಯ ವಿಜ್ಞಾನಿಗೆ ಸಂಬಂಧಿಸಿದ್ದು. ಅವರ ಕೆಲವು ಪ್ರಕಟಣೆಗಳು ಅತಿ ಶ್ರೇಷ್ಠ ಮಟ್ಟದವೆಂದು ವಿಶ್ವದ ಅನೇಕ ಪರಿಣತರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ನಿರ್ದೇಶಕ ಕೌಶಿಕ್ ಮಾತ್ರ ಅವರನ್ನು ಕೆಲಸದಿಂದ ತೆಗೆದಿದ್ದಾರೆ : ಅವರ ಸಂಶೋಧನೆಯ ಮಟ್ಟ ಕಳಪೆಯಾದದ್ದೆಂದು ಯಾರೋ ಮೇಧಾವಿಗಳು ವರದಿ ನೀಡಿದ್ದಾರಂತೆ! ನಿರ್ದೇಶಕರ ದರ್ಬಾರಿಗೆ ಹೋಗಿ ನಜರು ಒಪ್ಪಿಸುವ ಕ್ಷುದ್ರ ಪ್ರಾಣಿಗಳಿರುವುದೇ ವಿಜ್ಞಾನದ ಕ್ಷೇತ್ರಕ್ಕೆ ಅಪಖ್ಯಾತಿ; ಅವರೇ ಹೀಗೆ 'ವರದಿ' ನೀಡುವವರು. ದೇಶ-ವಿದೇಶಗಳಿಂದ ಅನೇಕ ವಿಜ್ಞಾನಿಗಳು ಜೋರ್ದಾರ್ ಸಂಶೋಧನೆಗಳ ಬಗ್ಗೆ ನಿರ್ದೇಶಕರಿಗೆ ಪತ್ರ ಬರೆದು ಅವರನ್ನು ಕೆಲಸದಿಂದ ವಜಾ ಮಾಡುವುದನ್ನು ಖಂಡಿಸಿದ್ದಾರೆ. ಆದರೆ ಈ ಮೊದ್ದು ಪಾತಕಿಗೆ ಅವೆಲ್ಲಾ ಲೆಕ್ಕಕ್ಕೆ ಬರುವುದಿಲ್ಲ. ಆಡಳಿತ ಮಂಡಲಿಯ ಅಧ್ಯಕ್ಷ ಶ್ರೀ ಅವಧಾನಿಯವರಿಗೂ ಪತ್ರಗಳು ಬಂದಿವೆ. ಅವರು ಕೌಶಿಕರ ಬೆಂಬಲಕ್ಕೆ ನಿಂತಿದ್ದಾರೆ, ವಿಜ್ಞಾನಿಯ ಶ್ರೇಷ್ಠತೆ ಅವರ ಕಣ್ಣಿಗೆ ಕಾಣುವುದಿಲ್ಲ. ಜೋರ್ದಾರ್ ಅವರ ಗುಣಮಟ್ಟವನ್ನು 'ಅಳೆದ' ಕೌಶಿಕ್ ಬಣದ ಪರಿಣತರು ಯಾವ ಮಾಪನಸಾಧನ ಬಳಸಿದ್ದಾರೋ ತಿಳಿಯದೆಂದು ವಿಜ್ಞಾನಿಗಳು ಉದ್ಗರಿಸುತ್ತಿದ್ದಾರೆ. ಕೌಶಿಕರ ಕುಟಿಲತೆಯನ್ನು ಪ್ರಶ್ನಿಸಿದ್ದೇ ಜೋರ್ದಾರ್ ಅಂಥವರ ಅಪರಾಧವೆಂದು ತೋರುತ್ತದೆ. ಜೋರ್ದಾರ್ ಅಂತೂ ಈಗ ನಿರುದ್ಯೋಗಿ. ನ್ಯಾಯಾಲಯಕ್ಕೆ ಮೊರೆಯಿಟ್ಟಿದ್ದಾರೆ. ಅಲ್ಲಿಯ ತೀರ್ಮಾನ ಎಷ್ಟು ಶೀಘ್ರವಾಗಿ ಬರುತ್ತದೆಂದು ಹೇಳುವವರು ಯಾರು! ವಿದೇಶಕ್ಕೆ ಪಲಾಯನ ಮಾಡಿದರೆ ಜೋರ್ದಾರ್ ಅವರಿಗೆ ಈ ಕ್ಷಣದಲ್ಲಿ ಹತ್ತು ಉನ್ನತ ಉದ್ಯೋಗಗಳು ಕಾದ ನಿಂತಿವೆ. ನಮ್ಮ ಪ್ರತಿಭಾ ಪುರಸ್ಕಾರ ಪದ್ಧತಿ ಈ ಮಾದರಿಯದು. ಕೇಂದ್ರ ಸಚಿವ ಮುರಳಿ ಮನೋಹರ ಜೋಶಿ ಕರ್ಮಕಾಂಡದ ಪ್ರಾಧ್ಯಾಪಕರನ್ನು ಉತ್ಪಾದಿಸುವ ಹುಮ್ಮಸ್ಸಿನಲ್ಲಿ ಪೌರೋಹಿತ್ಯದ ಪರವೇ ಹೊರತು ಸಂಶೋಧನೆಯ ಪರವಲ್ಲ ! ಪಾರ್ಥನ ಕೂಗು ಅವರಿಗೆ ಕೇಳಿಸದು.

ಈ ಸಂಸ್ಥೆಗೆ ಎಂ. ಕೆ. ವೈನು ಬಪ್ಪು ಅವರಂತಹ ಸ್ಥಾಪಕ-ನಿರ್ದೇಶಕರನ್ನು ಹೊಂದಿದ್ದ ಹೆಮ್ಮೆ ಇದೆ. ೧೯೭೧ರಲ್ಲಿ ಇದು ಸ್ವಾಯತ್ತ ಸಂಸ್ಥೆಯಾದಾಗ ಅವರೇ ಇದರ ಮುಂದಾಳು. ೧೯೮೨ರಲ್ಲಿ ಅವರು ನಿಧನರಾದರು. ಆಗ ಖ್ಯಾತ ಜೆ. ಸಿ. ಭಟ್ಟಾಚಾರ್ಯ ನಿರ್ದೇಶಕರಾದರು. ಅದಕ್ಕೆ ಮೊದಲು ಕೊಡೈಕನಾಲ್ ವೀಕ್ಷಣಾಲಯದ ಉಪನಿರ್ದೇಶಕರಾಗಿದ್ದ ಶ್ರೀಯುತರು ಬಪ್ಪು ಗರಡಿಯಲ್ಲೇ ಬೆಳೆದಿದ್ದವರು. ಕೌಶಿಕ್ ಮೂರನೆಯ ನಿರ್ದೇಶಕ. ಮುಂಬೈನ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್‌ನಿಂದ ಬಂದ ಭೌತವಿಜ್ಞಾನಿ ಈತ. ಖಗೋಳಶಾಸ್ತ್ರದಲ್ಲಿ ಇವರಿಗೆ ಪ್ರವೇಶ ಅಷ್ಟಕ್ಕಷ್ಟೇ ಆದರೂ ನಿರ್ದೇಶಕರಾಗಿದ್ದಾರೆ.

೧೯೭೧ರಿಂದ ೮೨ರವರೆಗೆ ಸಂಸ್ಥೆಯು ದಾಪುಗಾಲುಗಳ ದಾಖಲೆಯನ್ನು ನಿರ್ಮಿಸಿದೆ. ವಿಜ್ಞಾನಿಗಳ ಸಂಖ್ಯೆ ಮೂರುಪಟ್ಟು ಹೆಚ್ಚಿತು, ಶಿಕ್ಷಣ ವಿಭಾಗವು ಯುವವಿಜ್ಞಾನಿಗಳಿಗೆ ವರದಾನವಾಗಿ ಬಂತು, ಕಾವಲೂರಿನ ಖಗೋಳ ವೀಕ್ಷಣಾಲಯದ ಸ್ಥಾಪನೆಯಾಯಿತು. ಹೀಗೆ ಬಹುಮುಖವಾಗಿ ತನ್ನ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳುತ್ತಿದ್ದ ಸಂಸ್ಥೆಗೆ ಕೇಂದ್ರಸರ್ಕಾರವು ಆಡಳಿತ ಮಂಡಲಿಯೊಂದನ್ನು ರಚಿಸಿಕೊಟ್ಟಿತು. ಹಿರಿಯ ವಿಜ್ಞಾನಿಗಳ ಸಂಶೋಧನಾ ವಿಭಾಗದೊಟ್ಟಿಗೆ ನಾಲ್ಕು ಸಮಿತಿಗಳನ್ನು ನೇಮಿಸಲಾಯಿತು. ಎಲ್ಲವೂ ಸ್ವತಂತ್ರವಾಗಿ ಕಾರ್ಯೋನ್ಮುಖವಾಗಬೇಕೆಂಬ ಆಶಯವಿದ್ದಿತು. ಸಂಶೋಧನಾ ತಂಡಕ್ಕೆ ಆಡಳಿತಾಧಿಕಾರ ಇರಲಿಲ್ಲ; ಆದರೆ ವೈಜ್ಞಾನಿಕ ಮುನ್ನಡೆಯ ಕಾರ್ಯಕ್ರಮಗಳಿಗೆ ಅದರ ಸಲಹೆಯೇ ಅತ್ಯುನ್ನತವಾದ್ದು ಎಂಬ ಗ್ರಹಿಕೆ ಇದ್ದಿತು.

ಕೌಶಿಕರ ನೇತೃತ್ವದಲ್ಲಿ ಇದೆಲ್ಲಾ ತಿರುಗುಮುರುಗಾಗಿದೆ. ಸಂಸ್ಥೆಯು ಮೂಲತಃ ಖಗೋಳ ವಿಜ್ಞಾನಕ್ಕೆ ಮೀಸಲಾದ್ದು. ಖಗೋಳ ವಿಜ್ಞಾನ ಮತ್ತು ಖ-ಭೌತವಿಜ್ಞಾನಗಳನ್ನು ತುಂಡರಿಸಿ ಸಾಂಪ್ರದಾಯಿಕ ಭೌತಶಾಸ್ತ್ರ ಅಧ್ಯಯನಕ್ಕೆ ಕೌಶಿಕ್ ಒತ್ತುಕೊಟ್ಟಿದ್ದು ಸಂಸ್ಥೆಗೆ ಕೊಡಲಾದ ಮೊದಲ ದೊಡ್ಡಪೆಟ್ಟು. ಆಡಳಿತ ಮಂಡಲಿಯಲ್ಲಿಯೂ ಖಗೋಳ ವಿಜ್ಞಾನಿಗಳನ್ನು ಕೈಬಿಡಲಾಯಿತು ಮತ್ತು ಮುಂಬೈನ ಮಾಜಿ ಸಹೋದ್ಯೋಗಿಗಳಿಬ್ಬರನ್ನು ಕೌಶಿಕ್ ತಮ್ಮೊಡನೆ ಪೋಣಿಸಿಕೊಂಡರು. ಟೆಲಿಸ್ಕೋಪನ್ನು ಕೊಳ್ಳುವ ಸಮಿತಿಗೆ ಖಗೋಳಶಾಸ್ತ್ರದ ಪರಿಚಯವೇ ಇಲ್ಲದವರೊಬ್ಬರನ್ನು ಕೌಶಿಕ್ ತಂದರು. ಅವರ ಕೆಲಸ ಅಮೆರಿಕಾಕ್ಕೆ ಹೋಗಿ ವ್ಯವಹಾರ ಕುದುರಿಸುವುದು! ಎರಡು ಮೀಟರಿನ ಟೆಲಿಸ್ಕೋಪ್ ಕೊಳ್ಳಲು ಇಷ್ಟೊಂದು ತಯಾರಿ. ಆಡಳಿತ ಮಂಡಲಿ ಈ ಬಗ್ಗೆ ಒಮ್ಮೆಯಾದರೂ

*ನಮ್ಮ ವೈಜ್ಞಾನಿಕ ಸಂಸ್ಥೆಗಳು ನಿರೀಕ್ಷಿತ ಹಿರಿಮೆ ಸಾಧಿಸಿಲ್ಲವೆಂದು ಅಸಮಾಧಾನ ವ್ಯಕ್ತಪಡಿಸುವವರು ಅವುಗಳ ಆಂತರಿಕ ವಿದ್ಯಮಾನಗಳನ್ನು ಅಷ್ಟಾಗಿ ತಿಳಿದಿರುವುದಿಲ್ಲ. ಆ ಸಂಸ್ಥೆಗಳು ಸಾರ್ವಜನಿಕರಿಂದ ದೂರವಿವೆ. ಅಲ್ಲಿ ನಡೆಯುವ ದುರಾಡಳಿತ, ಕುತಂತ್ರ, ದುಂದುಗಾರಿಕೆ, ಇವೂ ಸಾರ್ವಜನಿಕರಿಗೆ ತಿಳಿಯುವುದಿಲ್ಲ. ತಿಳಿದರೂ ಅಪರೂಪವಾಗಿ ಮಾತ್ರ. ಯಾವ ರಾಜಕಾರಣಿಗೂ ಕಡಿಮೆ ಇಲ್ಲದಷ್ಟು ಭ್ರಷ್ಟಾಚಾರದಲ್ಲಿ ತೊಡಗುವ ಅಧಿಕಾರಿಗಳು ಕೆಲವರು ಈ ಸಂಸ್ಥೆಗಳಲ್ಲಿ ಸೇರಿಕೊಂಡು ಇಡೀ ವೈಜ್ಞಾನಿಕ ಸಂಸ್ಥೆಯು ದಿಕ್ಕುತಪ್ಪುವಂತೆ ಮಾಡುತ್ತಿದ್ದಾರೆ. ಯಾವನೋ ಮಂತ್ರಿಯ ಮುಸುಕಿನಲ್ಲಿ ಮೆರೆಯುವ ಇವರು ವೈಜ್ಞಾನಿಕ ಸಂಶೋಧನೆಗಾಗಲಿ, ವಿಜ್ಞಾನಿ ವೃಂದಕ್ಕಾಗಲಿ ಗೌರವ ತರುವಂಥವರಲ್ಲ. ಯುವ ವಿಜ್ಞಾನಿಗಳು ಇದರಿಂದ ಬೇಸತ್ತು ಸಹಜವಾಗಿಯೇ ನಿರಾಸಕ್ತಿ ತಳೆಯುತ್ತಾರೆ, ಇಲ್ಲವೆ ವಿದೇಶಗಳಿಗೆ ಪಲಾಯನ ಮಾಡುತ್ತಾರೆ. ವೈಜ್ಞಾನಿಕ ಸಂಸ್ಥೆಗಳ ವೀರಪ್ಪನ್‌ಗಳಿಂದಾಗಿ ನಮ್ಮ ವಿಜ್ಞಾನದ ಕ್ಷೇತ್ರ ಕುಬ್ಜವಾಗುತ್ತಿದೆ. ಹಿಂದೊಮ್ಮೆ ರಾಮನ್ ಸಂಶೋಧನಾ ಸಂಸ್ಥೆಯ ಪಾಳೆಗಾರರು ಡಾ|| ಸಿ. ವಿ. ವಿಶ್ವೇಶ್ವರ ಅವರ ಮೇಲೆ ಗದಾಪ್ರಹಾರ ಮಾಡಿದರು. ಈಗ ಡಾ|| ಪಾರ್ಥಸಾರಥಿ ಜೋರ್ದಾರ್ ಎಂಬುವರನ್ನು ಖ-ಭೌತ ವಿಜ್ಞಾನ ಸಂಶೋಧನಾ ಸಂಸ್ಥೆಯಲ್ಲಿ ಕೆಲಸದಿಂದ ಕಿತ್ತುಹಾಕಿದ್ದಾರೆ. ಸಂಶೋಧನೆ ಮಾಡಲಿಲ್ಲವೆಂಬ ಕಾರಣದಿಂದಲ್ಲ. ಅವರು ಸಂಶೋಧನೆಯಲ್ಲಿ ಸಿದ್ಧಹಸ್ತರೆಂದು ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದ್ದಾರೆ. ಆದರೆ ಪಾರ್ಥ ನಿರ್ದೇಶಕರ ತಾಳಕ್ಕೆ ತಕ್ಕಂತೆ ಕುಣಿಯದಿರುವುದು ಅವರ ಅಪರಾಧ! ಸಾರ್ವಜನಿಕ ಸಂಸ್ಥೆಗಳಿಗೆ ಕುತ್ತು ತರುತ್ತಿರುವ ಇಂತಹ ನಿರ್ದೇಶಕರನ್ನು ಸಾರ್ವಜನಿಕರು ತರಾಟೆಗೆ ತೆಗೆದುಕೊಳ್ಳಬೇಕಾದ ಸಂದರ್ಭ ಬಂದಿದೆ. ಸಾರ್ವಜನಿಕ ಹಣ ಮೋಜಿಗಾಗಿ ಇರುವುದಲ್ಲ. ಹಾಗೆ ಭಾವಿಸಿ ದರ್ಪ ಪ್ರದರ್ಶಿಸುತ್ತಿರುವ ರಾಮನಾಥ ಕೌಶಿಕ್ ಎಂಬ ಮಹಾಶಯರು ಜಯಲಲಿತಾ ಸಂತತಿಗೆ ಸೇರುತ್ತಾರೆ. "ಕೌಶಿಕ" ಎಂದರೆ ಸಂಸ್ಕೃತದಲ್ಲಿ 'ಗೂಬೆ' ಎಂಬ ಒಂದು ಅರ್ಥವೂ ಇದೆ. ಖ-ಭೌತವಿಜ್ಞಾನ ಸಂಶೋಧನಾ ಸಂಸ್ಥೆಯ ಮೇಲೆ ಗೂಬೆಯಂತೆ ಬಂದು ಕುಳಿತಿರುವ ಕೌಶಿಕ್‌ಗೆ ಇನ್ನಾದರೂ ನೇರ ವ್ಯವಹಾರದ ಪರಿಚಯ ಮಾಡಿಸಬೇಕು. ಕೂಡಲೆ ಇವರ ಎತ್ತಂಗಡಿಯಾಗಬೇಕಾದ್ದು ನ್ಯಾಯೋಚಿತವಾಗಿದೆ.*

ಉಸಿರೆತ್ತಲಿಲ್ಲ. ಕೌಶಿಕರು ವಿಜೃಂಭಣೆಯಲ್ಲಿ ಪ್ರಖ್ಯಾತರು. ಒಂದು ವೈಜ್ಞಾನಿಕ ಗೋಷ್ಠಿ ನಡೆಸಬೇಕಾದರೂ ಅದು ಜಂಬೂರಿಯೇ! ವಿಜ್ಞಾನಕ್ಕಿಂತ ಪ್ರದರ್ಶನವೇ ಜಾಸ್ತಿ; ಕುದುರೆಗಿಂತ ಲದ್ದಿ ಬಿರುಸು, ಎನ್ನುವಂತೆ. ೧೯೯೪ರಲ್ಲಿ ಒಂದು ಅಂತರರಾಷ್ಟ್ರೀಯ ಗೋಷ್ಠಿ ಸಂಯೋಜಿಸಿದಾಗ ಕೌಶಿಕ್ ಆಯ್ಕೆ ಮಾಡಿಕೊಂಡ ವಿಷಯಕ್ಕೂ ಖ-ಭೌತವಿಜ್ಞಾನಕ್ಕೂ ಯಾವ ಸಂಬಂಧವೂ ಇರಲಿಲ್ಲವೆಂಬುದು ವಿಸ್ಮಯಕ್ಕೆ ಕಾರಣವಾಗಿತ್ತು. ಅವರ ಮೇಲ್ವಿಚಾರಣೆಯಲ್ಲಿ ಸಂಸ್ಥೆಯ ಪುಸ್ತಕಭಂಡಾರವನ್ನು ಹಠಾತ್ತಾಗಿ ಸಮಾವೇಶ-ಉಪನ್ಯಾಸ ಕೊಠಡಿಯನ್ನಾಗಿ ವಿನಾಕಾರಣ ಪರಿವರ್ತಿಸಲಾಯಿತು! ಆಡಿಟೋರಿಯಂ ಇದ್ದದ್ದು ಖಾಸಗಿ ಕಂಪೆನಿಗಳ ಸರಕುಗಳ ಪ್ರದರ್ಶನ ಕೇಂದ್ರವಾಗಿ ಮಾರ್ಪಟ್ಟಿತು. ವೈಜ್ಞಾನಿಕ ಸಂಶೋಧನೆ ಮೂಲೆಗೆ ಸರಿಸಲಾಯಿತು, ಆಡಂಬರದ ಪ್ರದರ್ಶನಗಳು ದಿನನಿತ್ಯದ ಕಾರ್ಯಕ್ರಮವಾಯಿತು. ಕಾವಲೂರು ವೀಕ್ಷಣಾಲಯಕ್ಕೂ ಕೌಶಿಕರ ಗೂಬೆಕಣ್ಣು ಬಿದ್ದಿತು. ೧೯೯೩-೯೪ರಲ್ಲಿ ವೀಕ್ಷಣೆ ನಡೆಸಬೇಕಾಗಿದ್ದಾಗ ಅಲ್ಲಿಯ ವಿಜ್ಞಾನಿಗಳನ್ನು ಅದ್ದೂರಿಯ ಉತ್ಸವಗಳಲ್ಲಿ ತೊಡಗಿಸಲಾಗಿತ್ತು.

ಹಿಮಾಲಯದಲ್ಲಿ ಒಂದು ಪ್ರಶಸ್ತವಾದ ವೀಕ್ಷಣಾಲಯವನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ೧೯೯೩ರ ಸೆಪ್ಟೆಂಬರ್‌ನಲ್ಲಿ ಒಂದು ಸರ್ವೇಕ್ಷಣ ನಡೆಸಿ ನೀಲಾಂಬುಲ್ ಸಮತಟ್ಟು ಪ್ರದೇಶವನ್ನು ಆಯ್ಕೆ ಮಾಡಲಾಗಿತ್ತು. ಇದು ದಕ್ಷಿಣ ಲದಾಖ್‌ನಲ್ಲಿದೆ. ಉದ್ದೇಶಿತ ಇನ್‌ಫ್ರಾರೆಡ್ ಟೆಲಿಸ್ಕೋಪಿಗೆ ಇದೇ ಸರಿಯಾದ ಸ್ಥಳವೆಂದು ಗುರುತಿಸಲಾಗಿತ್ತು. ೧೯೯೮ರ ಜನವರಿಯಲ್ಲಿ ಭಾರತ ಖಗೋಳಶಾಸ್ತ್ರೀಯ ಸಂಸ್ಥೆಯು ಗುವಾಹಟಿಯಲ್ಲಿ ವಾರ್ಷಿಕ ಸಭೆ ನಡೆಸಿದಾಗ ಇಂತಹ ದೂರದರ್ಶಕವನ್ನು ಲದಾಖ್‌ನಲ್ಲಿ ಸ್ಥಾಪಿಸುವ ತೀರ್ಮಾನವನ್ನು ಕೌಶಿಕ್ ಬಹಿರಂಗಗೊಳಿಸಿದರು. ಆ ಟೆಲಿಸ್ಕೋಪಿನ ಪರಿಮಾಣದ ಕ್ಲುಪ್ತ ಮಾಹಿತಿ ನೀಡಿರಲಿಲ್ಲ. ಆದರೆ ಅವರ ಮನಸ್ಸಿನಲ್ಲಿದ್ದುದು ೨ ಮೀಟರ್‌ನ ದೂರದರ್ಶಕ. ಇದು ಒಂದು ರೀತಿಯಲ್ಲಿ 'ಜುಜುಬಿ ಪ್ರಮಾಣ' ಉಳ್ಳದ್ದೆಂದು ಅವರ ಸಹೋದ್ಯೋಗಿಗಳ ಭಾವನೆ. ಅವರೆಲ್ಲಾ ಅದು ಕನಿಷ್ಠ ೪ ಮೀಟರ್ ಪರಿಮಾಣ ಹೊಂದಿರುತ್ತದೆಂದು ನಂಬಿದ್ದರು. ಆದರೆ ಆದದ್ದೇ ಬೇರೆ.

ನೀಲಾಂಬುಲ್ ಪ್ರದೇಶದ ಹ್ಯಾನ್ಲೆ ಸಮತಟ್ಟಿನ ಜಾಗದ ಬಗ್ಗೆ ಬೇರೆ ಖಗೋಳವಿಜ್ಞಾನಿಗಳಿಗೆ ಅನುಮಾನವಿತ್ತು. ಅಂತಹ ಕಷ್ಟದ ಭೌಗೋಳಿಕ ನೆಲೆಯಲ್ಲಿ ಸಂಶೋಧನಾ ವೀಕ್ಷಣೆ ಎಷ್ಟರಮಟ್ಟಿಗೆ ಸಾಧ್ಯವೆಂಬ ವಿಷಯ ಅವರನ್ನು ಬಾಧಿಸುತ್ತಿತ್ತು. ಬೃಹತ್ ಪ್ರಮಾಣದ ಯೋಜನೆಯನ್ನು ಕಾರ್ಯಗತಗೊಳಿಸುವಾಗ ಮೊದಲು ಸರಿಯಾದ ಜಾಗವನ್ನು ಗೊತ್ತುಪಡಿಸಬೇಕೆಂಬುದು ಅವರ ಆಗ್ರಹವಾಗಿತ್ತು. ಮೂಲಸಾಧನೆಗಳೇ ಇಲ್ಲದೆಡೆ ಎಂತಹ ವೀಕ್ಷಣೆ ಎಂಬುದು ಅವರ ಪ್ರಶ್ನೆ. ಕೌಶಿಕರ ತೀರ್ಮಾನವನ್ನು ಹೀಗೆ ಪ್ರಶ್ನಿಸಿದವರ ಸಂಖ್ಯೆಯೇ ಹೆಚ್ಚಾಗಿದ್ದುದು ಕೌಶಿಕರಿಗೆ ಅಸಮಾಧಾನ ತಂದಿತು. ಸಾಕಷ್ಟು ಹಣವಿದ್ದರೆ ಯೋಜನೆ ಸಫಲವಾಗುತ್ತದೆಂಬುದು ಅವರ ವಾದವಾಗಿತ್ತು.



*ಕೊಡೈಕನಾಲ್‌ನಲ್ಲಿರುವ ಸೌರ ವೀಕ್ಷಣಾಲಯ*

ಹೀಗೆ ಪಟ್ಟುಹಿಡಿದ ಕೌಶಿಕ್ ತಮ್ಮ ಸಂಸ್ಥೆಯ ಎಲ್ಲ ಪರಿಣತರನ್ನೂ ಸಮಿತಿಗಳನ್ನೂ ಕಡೆಗಣಿಸಿ ಸ್ವಂತದ ಅಜೆಂಡಾಕ್ಕೆ ಸೊಪ್ಪುಹಾಕಿದರು. ಕಾಲಕಾಲಕ್ಕೆ ನಡೆಯುತ್ತಿದ್ದ ಎಲ್ಲ ಸಮಿತಿಗಳ ಸಭೆಗಳನ್ನು ರದ್ದುಮಾಡಿದರು. ಸಂಸ್ಥೆಯ ಹಿರಿಯ ವಿಜ್ಞಾನಿಗಳು ಒಟ್ಟಾಗಿ ಕಲೆತು ಏನನ್ನಾದರೂ ಚರ್ಚಿಸುವ ಪದ್ಧತಿಯೇ ಇಲ್ಲವಾಯಿತು. ಲದಾಖ್ ಯೋಜನೆಯನ್ನು ಖಗೋಳವಿಜ್ಞಾನಿಗಳು ಚರ್ಚಿಸುವ ಅವಕಾಶವೇ ಇಲ್ಲದಂತೆ ಮಾಡುವ ಹುನ್ನಾರದಲ್ಲಿ ಕೌಶಿಕ್‌ರು ತಮ್ಮ ಬಲಗೈಭಂಟರ ಸಮಿತಿಗಳನ್ನು ಮಾತ್ರವೇ ಔಪಚಾರಿಕವಾಗಿ ರಚಿಸಿದ್ದು. ಸಂಸ್ಥೆಯ ಎಲ್ಲ ಚಟುವಟಿಕೆಗಳಿಗೂ ಈ ಕೌಶಿಕಾರಾಧಕರ ತಂಡದ್ದೇ ಕೊನೆಯ ತೀರ್ಮಾನ ಎನ್ನುವಂತಾಯಿತು. ಒಬ್ಬನ ತಾಳ, ಹತ್ತು ಜನರ ಕುಣಿತ. ಹೀಗಾಯಿತು ಪ್ರೌಢಸಂಸ್ಥೆಯ ಪಾಡು. ಅದು ನಮ್ಮ ವಿಜ್ಞಾನದ ಪಾಡೂ ಹೌದು.

ಸಮಸ್ತ ಖಗೋಳವಿಜ್ಞಾನಿಗಳ ಭಾಗವಹಿಸುವಿಕೆಯಿಂದ ಅಸ್ತಿತ್ವಕ್ಕೆ ಬರಬೇಕಾಗಿದ್ದ ಬೃಹತ್ ವೀಕ್ಷಣಾಲಯದ ಬದಲು ಕೋಟಿಗಟ್ಟಲೆ ಹಣವನ್ನು ದುರುಪಯೋಗಪಡಿಸಿಕೊಳ್ಳಬಹುದಾದ ಒಬ್ಬ ವ್ಯಕ್ತಿಯ ವೈಭವದ ಯೋಜನೆ ಇದಾಯಿತು. ಕಡೆಗೆ ಕೌಶಿಕ್ ಮಾಡಿದ್ದೇನು? **ಭಾರತದ ಸ್ವಂತಿಕೆಯನ್ನು ಭಗ್ನಗೊಳಿಸುವ ದುರಂತ, ಹಿಮಾಲಯದ ಗಾತ್ರದಷ್ಟು ದೊಡ್ಡ ಪ್ರಮಾದ. ಎರಡು ಮೀಟರ್ ಪ್ರಮಾಣದ ಟೆಲಿಸ್ಕೋಪನ್ನು ವಿದೇಶದಿಂದ ಆಮದು ಮಾಡಿಕೊಳ್ಳಬೇಕೆಂಬ ರಾಷ್ಟ್ರವಿರೋಧಿ ತೀರ್ಮಾನ ಬಂದದ್ದು ಹೀಗೆ. ಅದಕ್ಕೆ "ಹ್ಯಾನ್ಲೆ-೨ ಎಮ್ ಯೋಜನೆ" ಎಂಬ ಹೆಸರಿದೆ.**

ಇದು ಅಮೆರಿಕಾದಿಂದ ತಂದಿದ್ದು. ಅಪಾರ ಮೊತ್ತದ ವಿದೇಶಿ ವಿನಿಮಯ ಇದಕ್ಕೆ ದುರ್ವ್ಯಯವಾಗಿದೆ. ಹದಿನೈದು ಕೋಟಿಗೂ ಮೀರಿದ ಬೆಲೆ ಈ ಒಂದು ಟೆಲಿಸ್ಕೋಪಿಗೆ. ಇಂಥದನ್ನು ಸ್ವತಃ ನಿರ್ಮಿಸುವ ಸಾಮರ್ಥ್ಯ ಬೆಂಗಳೂರಿನ ಸಂಶೋಧನಾ ಸಂಸ್ಥೆಗೇ ಇದೆ. ಕಾವಲೂರಿನ ದೂರದರ್ಶಕದ ಪ್ರಮಾಣವೇ ೨.೩೪ ಮೀ. ಆಗಿತ್ತು. ಇಪ್ಪತ್ತು ವರ್ಷಗಳ ಹಿಂದೆ ಅದನ್ನು ಸಂಪೂರ್ಣವಾಗಿ ಸ್ವದೇಶೀಯವಾಗಿ ನಿರ್ಮಿಸಲಾಗಿತ್ತು. ಏಷ್ಯದಲ್ಲೇ ಅತಿದೊಡ್ಡದೆಂದು ಹೆಸರಾಗಿದ್ದ ಅದನ್ನು ಅಂದಿನ ಪ್ರಧಾನಿ ಉದ್ಘಾಟಿಸಿದ್ದು ೧೯೮೬ರಲ್ಲಿ. ಈಗ ಅದಕ್ಕಿಂತಲೂ ಚಿಕ್ಕದೊಂದನ್ನು 'ಬೃಹತ್' ಎಂದು ಕರೆದು ಹಿಮಾಲಯದಲ್ಲಿ ಸ್ಥಾಪಿಸಲು ವಿದೇಶದಿಂದ ೧೫ ಕೋಟಿಗೆ ಆಮದು! ಇದು ನಮ್ಮ ವೈಜ್ಞಾನಿಕ ಅಭಿವೃದ್ಧಿ, ಕೌಶಿಕ ಮಹಾಶಯರ ಅವ್ಯವಹಾರ. ಇದನ್ನು ಹೊರಗಿನಿಂದ ತರಲೆಂದೇನು ನಾವು ನಮ್ಮ ದೇಶದಲ್ಲಿ ಸಂಶೋಧನಾ ಕೇಂದ್ರವೊಂದನ್ನು ಸ್ಥಾಪಿಸಿ ಪೋಷಿಸುತ್ತಿರುವುದು? ಹಲವು ದಶಕಗಳ ಹಣ, ಶ್ರಮ, ಸಂಶೋಧನಾ ಸಾಮರ್ಥ್ಯ, ರಾಷ್ಟ್ರೀಯ ಅಭಿಮಾನ, ಎಲ್ಲವನ್ನೂ ಕೌಶಿಕ್ ಯೋಜನೆ ಮಣ್ಣುಪಾಲಾಗಿಸಿದೆ. ಇನ್ನು ನಮ್ಮ ವಿಜ್ಞಾನಿಗಳ ಹುಮ್ಮಸ್ಸು ಹೇಗೆ ತಾನೆ ಉಳಿಯಬೇಕು? ಇದನ್ನು ಸರಿಪಡಿಸಿರೆಂದು ವಿಜ್ಞಾನಿಗಳು ಅಹವಾಲು ಸಲ್ಲಿಸಿದರೆ ಕೇಂದ್ರಮಂತ್ರಿಯ ಬೆಂಬಲ ಕೌಶಿಕ್‌ಗೆ.

*(೩೦ನೇ ಪುಟದಲ್ಲಿ ಮುಂದುವರೆದಿದೆ)*

## ಹೊಸತು ವಿಮರ್ಶಾ ಲೇಖನಗಳಿಗೆ ಸ್ವಾಗತ

೧೯೯೯ರ ಆಗಸ್ಟ್‌ನಿಂದ ೨೦೦೦ದ ಜುಲೈವರೆಗಿನ 'ಹೊಸತು' ಸಂಚಿಕೆಗಳ ಕುರಿತು, ವೈಚಾರಿಕ ಮತ್ತು ಸೈದ್ಧಾಂತಿಕ ಲೇಖನಗಳ ಬಗ್ಗೆ ಹೆಚ್ಚು ಒತ್ತು ನೀಡಿ ಬರೆಯಲಾಗುವ ವಸ್ತುನಿಷ್ಠ ವಿಮರ್ಶೆಗಳಿಗೆ ಸ್ವಾಗತವಿದೆ.

ಮೂರು ಅತ್ಯುತ್ತಮ ವಿಮರ್ಶೆಗಳಿಗೆ ಕ್ರಮವಾಗಿ ಒಂದು ಸಾವಿರ, ಏಳುನೂರು ಮತ್ತು ಐನೂರು ರೂಪಾಯಿ ಮೌಲ್ಯದ, ನವಕರ್ನಾಟಕ ಪುಸ್ತಕಗಳ ಬಹುಮಾನಗಳು.

ಲೇಖನಗಳು ಸ್ಫುಟವಾದ ಅಕ್ಷರಗಳಲ್ಲಿ ಫುಲ್‌ಸ್ಕೇಪ್ ನಾಲ್ಕು ಪುಟಗಳಿಗೆ (ಸುಮಾರು ೧೮೦೦ ಪದಗಳಿಗೆ) ಮೀರದಂತಿರಲಿ. ವಿಮರ್ಶೆ ನಮಗೆ ತಲುಪಬೇಕಾದ ದಿನಾಂಕ : ೧೫.೧೧.೨೦೦೦. ವಿಜೇತರ ಹೆಸರುಗಳನ್ನು ೨೦೦೧ ಜನವರಿ ಹೊಸತು ವಾರ್ಷಿಕ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

ಅಂತಿಮ ತೀರ್ಮಾನ ತೀರ್ಪುಗಾರರದು. ಪತ್ರವ್ಯವಹಾರಕ್ಕೆ ಅವಕಾಶವಿಲ್ಲ.

*-ಸಂಪಾದಕ*




ಅರ್ನೆಸ್ಟೋ ಗೆವಾರ ಲಿಂಚ್ (ಚೆ ಗೆವಾರ) ಹುಟ್ಟಿದ್ದು ಅರ್ಜೆಂಟೈನಾದಲ್ಲಿ. ಮೊದಲು ಕ್ರಾಂತಿಕಾರಕ ವ್ಯಕ್ತಿತ್ವ ರೂಢಿಸಿಕೊಂಡದ್ದು ಗ್ವಾಟೆಮಾಲಾದಲ್ಲಿ. ವೈದ್ಯನಾಗಿ ವೃತ್ತಿಗೆ ತೊಡಗಿದ್ದು ಮೆಕ್ಸಿಕೋದಲ್ಲಿ, ಕ್ರಾಂತಿ ಮಾಡಿದ್ದು ಕ್ಯೂಬಾದಲ್ಲಿ, ಹೋರಾಡುತ್ತಲೇ ಕೊನೆಯುಸಿರೆಳೆದದ್ದು ಬೊಲಿವಿಯಾದಲ್ಲಿ. ಹೀಗೆ ಚೆ ಒಬ್ಬ ಗಡಿಮೀರಿದ ಹೋರಾಟಗಾರ.

ಕ್ರಾಂತಿ ಎಂದರೇನು, ಗೆರಿಲ್ಲಾ ಕದನ ಎಂದರೇನು? ಎಂಬುದಕ್ಕೆ ತನ್ನದೇ ರೀತಿಯಲ್ಲಿ ತನ್ನ ಬದುಕಿನ ಮೂಲಕವೇ ಉತ್ತರ ನೀಡಿದ ಚೆ ಗೆವಾರ ಇಂದಿಗೂ ಒಂದು ಮಾದರಿ ವ್ಯಕ್ತಿತ್ವ. ಧರ್ಮ, ಭಾಷೆ, ಜನಾಂಗ, ರಾಷ್ಟ್ರೀಯತೆ ಈ ಎಲ್ಲ ಮಿತಿಗಳನ್ನು ಮೀರಿದ ಹೋರಾಟಗಾರ ಈತ. ವಿಶ್ವಾತ್ಮಕ ಚಿಂತನೆ ಮತ್ತು ವಿಶ್ವಾತ್ಮಕ ನಡೆವಳಿಕೆಯ ಮೂಲಕ ಇಂದಿಗೂ ಕ್ಯೂಬನ್ನರ ಆರಾಧ್ಯ ದೈವವಾಗಿರುವ ಚೆ ನ ವ್ಯಕ್ತಿತ್ವ ತಿಳಿಯುವ ಮೂಲಕ, ಅಂತರರಾಷ್ಟ್ರೀಯ ಭಯೋತ್ಪಾದಕರು - ಜೆಹಾದಿನ ಯೋಧರು-ಪ್ರಭಾಕರನ್-ವೀರಪ್ಪನ್ ಅಂಥವರ ಬಗ್ಗೆ ಭಾವನಾತ್ಮಕವಾಗಿ ಯೋಚಿಸುವವರು – ಇಂದು ಮರು ಚಿಂತನೆ ಮಾಡಬೇಕಾಗಿದೆ.

**ಕ್ರಾಂತಿಯ ಹಿನ್ನೆಲೆ**

೧೯೫೯ರಲ್ಲಿ ಕ್ಯೂಬಾ ಕ್ರಾಂತಿ ಯಶಸ್ವಿಯಾಗುವ ಮುನ್ನ ಫುಲ್‌ಗೆನ್ಸಿಯೊ ಬಟಿಸ್ಟಾನ ಮಿಲಿಟರಿ ಆಡಳಿತ ಅಲ್ಲಿತ್ತು. ಕ್ಯೂಬಾದಲ್ಲಿ ಕೆಲವೇ ಬಂಡವಾಳಗಾರರು ಬಹುಜನರ ಶ್ರಮದಿಂದ ಐಷಾರಾಮವಾಗಿ ಬದುಕುತ್ತಿದ್ದರು. ಅಮೆರಿಕನ್ ಅಧಿಕಾರಿಗಳ ಮತ್ತು ಸಿ.ಐ.ಎ.ಯ ಕೈವಾಡ ಕ್ಯೂಬಾದಲ್ಲಿ ಸಾಕಷ್ಟಿತ್ತು. ಬಟಿಸ್ಟಾನ ಆಡಳಿತದಲ್ಲಿ ವಿರೋಧ ಪಕ್ಷದ ಸದಸ್ಯರ ಊನಗೊಂಡ ದೇಹಗಳು ಬೀದಿಗಳಿಗೆ, ಸಮುದ್ರಕ್ಕೆ ಎಸೆಯಲ್ಪಡುತ್ತಿದ್ದರೂ ಅಮೆರಿಕಾ ಬಟಿಸ್ಟಾನನ್ನು ಅತ್ಯಂತ ಪ್ರಾಮಾಣಿಕ ವ್ಯಕ್ತಿ ಎಂದು ಕರೆಯುತ್ತಿತ್ತು! ತನ್ನ ಏಳು ವರ್ಷಗಳ ಅಧಿಕಾರಾವಧಿಯಲ್ಲಿ ಬಟಿಸ್ಟಾನ ಸರ್ಕಾರ ಸುಮಾರು ಇಪ್ಪತ್ತು ಸಾವಿರ ಕ್ಯೂಬನ್ನರನ್ನು ಕೊಂದಿತ್ತು. ಮಹಾಕ್ರೂರಿಯಾದ ಬಟಿಸ್ಟಾ ಹವಾನಾ ಬಂದರಿನ ಪ್ರವೇಶದ್ವಾರದಲ್ಲಿ ಭಾರಿ ಗಾತ್ರದ ಕ್ರಿಸ್ತನ ಮೂರ್ತಿಯನ್ನು ಸ್ಥಾಪಿಸುವಂಥ ಕೆಲಸಗಳಿಂದ ಅಹಿಂಸಾವಾದಿಯಂತೆ ನಾಟಕವಾಡುತ್ತಿದ್ದ.

ಕ್ಯೂಬಾದ ತಂತ್ರಜ್ಞರು, ವಿಜ್ಞಾನಿಗಳು, ಬೂರ್ಶ್ವಾಗಳು ಅಮೆರಿಕಾದ ಬಟ್ಟೆ ಧರಿಸಿ, ಅಮೆರಿಕಾದ ಟಿ.ವಿ.ಯಲ್ಲಿ ಅಮೆರಿಕಾದ್ದೆ ಕಾರ್ಯಕ್ರಮ ನೋಡುತ್ತ, ಅಮೆರಿಕನ್ ಪಾನೀಯ ಕುಡಿಯುತ್ತ, ಅಮೆರಿಕಾದ ವಾಹನಗಳಲ್ಲಿ ಓಡಾಡುತ್ತಿದ್ದರು. ಕ್ಯೂಬಾದ ಎಲ್ಲ ಕಚ್ಚಾ ಅಮೆರಿಕಾಕ್ಕೆ ರಫ್ತಾಗುತ್ತಿದ್ದವು. ಸಿದ್ಧವಸ್ತುಗಳು ಆಮದಾಗುತ್ತಿದ್ದವು. ಕ್ಯೂಬಾದ ನೆಲವನ್ನು ವಸತಿಗಳನ್ನು ಅಮೆರಿಕಾದ ಟ್ರ್ಯಾಕ್ಟರ್‌ಗಳು ಉಳುತ್ತಿದ್ದವು. ಅವುಗಳ ಇಂಧನವೂ ಅಮೆರಿಕಾದ್ದೆ. ಇಂಥಾ ಅಮೆರಿಕಾವಲಂಬಿ ಕ್ಯೂಬಾ ಏಕಕಾಲಕ್ಕೆ ಆಂತರಿಕ ಮತ್ತು ಬಾಹ್ಯ ಶೋಷಕ ರಿಬ್ಬರಿಂದಲೂ ಮುಕ್ತಿ ಪಡೆಯಬೇಕಿತ್ತು. ಇದೇ ಕ್ರಾಂತಿಗೆ ಮೂಲವಾಯಿತು.

ಇಂಥ ಸ್ಥಿತಿಯಲ್ಲಿ ಫಿಡೆಲ್‌ರ ಬಣಕ್ಕೆ ಸೇರಿದ ಚೆ ತನ್ನನ್ನು ಸದಾ ಕಾಡುವ ಆಸ್ತಮಾ ರೋಗದ ನಡುವೆಯೂ ವೈದ್ಯನಾಗಿ, ಸಾಮಾನ್ಯ ಸೈನಿಕನಾಗಿ, ಮೇಜರ್ ಆಗಿ, ಕಮ್ಯಾಂಡರ್ ಆಗಿ ಕ್ರಾಂತಿಗಾಗಿ ದುಡಿದ. ಕ್ಯೂಬಾದ ಅನೇಕ ರೈತ ತಂದೆಯರು ತಮ್ಮ ಕಣ್ಣ ಮುಂದೆಯೇ ತಮ್ಮ ಮಕ್ಕಳು ಹಸಿವಿನಿಂದ ಸಾಯುತ್ತಿರುವಾಗ ಅನ್ನವನಿಕ್ಕಲಾರದ ಅಸಹಾಯಕತೆಯಿಂದ ಮರುಗುವುದನ್ನು ಕಂಡು ತಾನೂ ಮರುಗಿದ. ಕಾಡುಮೇಡೆನ್ನದೆ ಸಂಘಟನೆಗಾಗಿ, ಕ್ರಾಂತಿಕದನಕ್ಕಾಗಿ, ದುಡಿದ. ಕದನದಲ್ಲಿ ಎರಡೆರಡು ಬಾರಿ ಗಾಯಗೊಂಡರೂ ಬದುಕುಳಿದ. ಇಷ್ಟೆಲ್ಲದರ ನಡುವೆಯೂ ಕಾವ್ಯವನ್ನು ಪ್ರೀತಿಸುತ್ತಿದ್ದ. ವಿಶ್ವದ ಯಾವುದೇ ಭಾಗದಲ್ಲಿ ನೋವಿಗೀಡಾದ ಶೋಷಿತ ಮಾನವನಿದ್ದರೂ ಅವನ ನೆರವಿಗೆ ಧಾವಿಸುವುದೇ ನಿಜವಾದ ಕ್ರಾಂತಿಕಾರನ ಲಕ್ಷಣ ಎಂದು ಚೆ ಹೇಳುತ್ತಿದ್ದ.

*ಕ್ಯೂಬಾ ಬಂಡವಾಳಶಾಹಿ ಉತ್ಪಾದನಾ ಪದ್ಧತಿಯಿಂದ ಸಮಾಜವಾದಿ ಉತ್ಪಾದನಾ ಪದ್ಧತಿಗೆ ಚೆ ನ ಪರಿಶ್ರಮದಿಂದ ರೂಪಾಂತರ ಪಡೆಯಿತು. ಅನುಭವ ಮತ್ತು ಕಾರ್ಯಜ್ಞಾನವಿಲ್ಲದಿದ್ದರೂ ಕ್ರಾಂತಿ ಸರ್ಕಾರ ಅಮೆರಿಕಾದ ಉತ್ಪಾದನಾ ತಜ್ಞರ ಭವಿಷ್ಯವನ್ನು ಪೂರ್ತಿಯಾಗಿ ಬುಡಮೇಲಾಗಿಸಿತ್ತು. ಅಂತರರಾಷ್ಟ್ರೀಯ ಒತ್ತಡ, ಕ್ರಾಂತಿಕಾರಿಗಳ ಕೊಲೆ ಯತ್ನ, ವಿಮಾನಾಪಹರಣ, ಬೇಹುಗಾರಿಕೆ, ಬಾಂಬ್‌ದಾಳಿ, ಕೂಲಿಸಿಪಾಯಿಗಳ ರವಾನೆ, ದಿಗ್ಬಂಧನ, ಇಂಥ ಚಟುವಟಿಕೆಗಳ ಮೂಲಕ ಅಮೆರಿಕಾವು ಕ್ಯೂಬಾ ವಿರುದ್ಧ ಕ್ಷುಲ್ಲಕ ಭಯೋತ್ಪಾದಕನಂತೆ ವರ್ತಿಸಿತು. ಇವಾವೂ ಕ್ಯೂಬಾ ಕ್ರಾಂತಿಯನ್ನು ವಿಫಲಗೊಳಿಸಲಿಲ್ಲ. ಕೆನೆಡಿಯ 'ಪ್ರಗತಿಕೂಟ' ತಂತ್ರ, ಕೂಡ ಕ್ಯೂಬಾವನ್ನು ಹಿಡಿತಕ್ಕೆ ತೆಗೆದುಕೊಳ್ಳಲು ಆಗಲಿಲ್ಲ. ಪ್ರತಿಯಾಗಿ ಅಮೆರಿಕಾಕ್ಕೆ ಆದರ ಗಡಿಯಾಚೆಯ ಪಿತೂರಿಗಳು ಕ್ಯೂಬಾದ ಸಕ್ಕರೆಯ ಜೊತೆಗೆ ಮೆಕ್ಸಿಕೋದ ತೈಲ, ಬ್ರೆಜಿಲ್‌ನ ಕಾಫಿ, ಚಿಲಿಯ ತಾಮ್ರಗಳನ್ನು ಕಳಕೊಳ್ಳುವ ಭೀತಿ ಹುಟ್ಟಿಸಿದವು.*

ಇಂಥ ಚೆ ಗೆವಾರನಿಗೂ ಇಂದಿನ ಭಯೋತ್ಪಾದಕರಿಗೂ ಏನಾದರೂ ಹೋಲಿಕೆಯುಂಟೇ?

**ಕ್ರಾಂತಿ – ಅಧಿಕಾರ ಪಲ್ಲಟ**

ಕ್ಯೂಬಾ ಕ್ರಾಂತಿಯ ನಂತರ ಚೆ ಗೆವಾರ ಆಡಳಿತಾಧಿಕಾರಕ್ಕೂ ಬಂದ. ಉದ್ಯಮ ಮಂತ್ರಿಯಾಗಿ, ಭೂ ಸುಧಾರಣಾ ಆಯೋಗದ ನಿರ್ವಾಹಕನಾಗಿ, ನ್ಯಾಶನಲ್ ಬ್ಯಾಂಕಿನ ಡೈರೆಕ್ಟರ್, ಯೋಜನಾ ಆಯೋಗದ ನಿರ್ದೇಶಕ, ವಿಚಾರಣಾಧೀನ ಖೈದಿಗಳ ಮೇಜರ್, ಹೀಗೆ ಹಲವಾರು ಅಧಿಕಾರಗಳಲ್ಲಿ ಚೆ ಸೇವೆ ಸಲ್ಲಿಸಿದ. ಈತ ಅಧಿಕಾರ ಹಿಡಿದು ಮೋಜು ಮಾಡಲಿಲ್ಲ, ಕ್ರಾಂತಿ ಮಾಡಿದ. ರಾಜಶಾಹಿಯ ಪಲ್ಲಟದಂತೆಯೇ ಅಧಿಕಾರ ಹಿಡಿದು ಸುಧಾರಣೆ ಮಾಡುವುದೂ ಚೆ ಗೆ ಕ್ರಾಂತಿಯ ಭಾಗವೇ ಆಗಿತ್ತು. ಹಾಗೇ ಕ್ಯೂಬಾ ಒಂದು ಸ್ಥಿತಿಗೆ ಬಂದಿತು ಅನ್ನಿಸಿದಾಗ ಚೆ ಅಧಿಕಾರದಲ್ಲಿ ಮುಂದುವರಿಯಲಿಲ್ಲ. ಬೊಲಿವಿಯಾದ ಹಿತಕ್ಕಾಗಿ ಹೋರಾಡಲು ತೆರಳಿದ. ಚೆ ಪ್ರಕಾರ ಕ್ರಾಂತಿ ಎಂದರೆ ಶೋಷಣೆಯ ಮತ್ತು ಅಸಮಾನತೆಯ ನಿರ್ನಾಮ ಹಾಗೂ ಸೌಖ್ಯ ಮತ್ತು ಸಮಾನತೆಯ ನಿರ್ಮಾಣ. ಸೌಖ್ಯ ಮತ್ತು ಸಮಾನತೆಯ ನಿರ್ಮಾಣಕ್ಕಾಗಿ ಒಬ್ಬ ಹೋರಾಟಗಾರ ಗನ್ನು ಹಿಡಿಯಲು, ಗೆರಿಲ್ಲಾ ಆಗಲು, ಅಧಿಕಾರ ಹಿಡಿಯಲು, ಸಾಮಾನ್ಯ ಕಾರ್ಯಕರ್ತನಾಗಲು, ಹೀಗೆ ಹತ್ತವತಾರ ಎತ್ತಲೂ ಸಿದ್ಧವಾಗಬೇಕೆನ್ನುವುದು ಚೆ ವಾದವಾಗಿತ್ತು. ಹೀಗೇ ತನ್ನ ಜೀವನದುದ್ದಕ್ಕೂ ಚೆ ನಡೆದುಕೊಂಡ ಕೂಡ.

ಚೆ ಗೆ ಕ್ರಾಂತಿ ಯಾವುದೋ ಒಂದು ಹಂತದಲ್ಲಿ ಮುಗಿದುಹೋಗುವ ಕ್ರಿಯೆಯಲ್ಲ. ಅದು ಸದಾ ಜೀವಂತವಾಗಿರುವ ಕ್ರಿಯೆ. ಹಾಗೇ ಕ್ರಾಂತಿ ಕೇವಲ ಕ್ರಿಯೆಯಲ್ಲ. ಇದೊಂದು ಮನೋಭಾವ. ಸಾಮುದಾಯಿಕ ಮನೋಭಾವ.

ಆರ್ಥಿಕ ಮತ್ತು ವಾಣಿಜ್ಯ ದಿಗ್ಬಂಧನ ಎಂಥ ಮಹತ್ವದ ಕ್ರಾಂತಿಯನ್ನೂ ಪತರುಗುಟ್ಟಿಸಬಲ್ಲದು. ತೈಲ ದಿಗ್ಬಂಧನ ಕೂಡಾ ಹಾಗೇ ಮಾರಕವಾದದ್ದು. ಆದರೆ ಕ್ಯೂಬಾ ಕ್ರಾಂತ್ಯೋತ್ತರ ಕಾಲದಲ್ಲಿ ಇವೆರಡನ್ನು ಎದುರಿಸಿ ಬದುಕಿದೆ. ಇದರ ಹಿಂದೆ ಚೆ ಮತ್ತು ಫಿಡೆಲ್‌ರಂತಹ ಮುತ್ಸದ್ದಿಗಳ ಪ್ರಯತ್ನವಿದೆ. ಚೆ ಕ್ಯೂಬಾ ನ್ಯಾಶನಲ್ ಬ್ಯಾಂಕಿನ ಅಧ್ಯಕ್ಷನಾದಾಗ ಅವನೇನೂ ಅರ್ಥಶಾಸ್ತ್ರಜ್ಞ ನಾಗಿರಲಿಲ್ಲ. ಆದರೆ ಅವನ ಆರ್ಥಿಕ ಸುಧಾರಣಾ ಕ್ರಮಗಳು ಮತ್ತು ಅಂತರರಾಷ್ಟ್ರೀಯ ವಾಣಿಜ್ಯ ವಹಿವಾಟುಗಳು ಎಂಥ ಅರ್ಥಶಾಸ್ತ್ರಜ್ಞರನ್ನೂ ಮೀರಿಸು ವಂತಹವಾಗಿದ್ದುವು. ಆತನ ಪ್ರತಿಯೊಂದು ಸುಧಾರಣೆಯೂ ಸಮಾಜವಾದದ ತಳಹದಿ ಹೊಂದಿದ್ದಿತು, ಜನಪರವಾಗಿದ್ದಿತು. ಅಲ್ಲದೆ ಚೆ ಯಾವುದೇ ಸುಧಾರಣೆಗೆ ಜ್ಞಾನಕ್ಕಿಂತ ಮುಖ್ಯವಾಗಿ ಹೃದಯವಂತಿಕೆ ಬೇಕೆಂದು ಭಾವಿಸಿದ್ದನು.

ಭಾರತೀಯ ನೆಲೆಯಲ್ಲಿ ಮಾತಾಡುವುದಾದರೆ ಧರ್ಮ, ಭಕ್ತಿ, ಭಾಷೆ, ಪ್ರಾಂತೀಯತೆಗಳನ್ನೇ ಹೋರಾಟದ ಮೂಲ ದ್ರವ್ಯಗಳನ್ನಾಗಿ ಹೊಂದಿದ್ದ ನಮ್ಮ ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿ ಮೊತ್ತ ಮೊದಲ ಬಾರಿಗೆ ಮಹಾತ್ಮ ಗಾಂಧಿಯ ನೇತೃತ್ವ ಧರ್ಮ, ಭಕ್ತಿ,

ರಾಮಲಿಂಗಪ್ಪ ಟಿ. ಬೇಗೂರು

ಭಾಷೆ, ಪ್ರಾಂತ್ಯೇತರ ಸಿದ್ಧಾಂತಗಳಿಂದ ಹೋರಾಟವನ್ನು ಸಂಘಟಿಸಿತು. (ಬುದ್ಧ, ಮಹಾವೀರ, ಬಸವರ ಹೋರಾಟಗಳಿಗೆ ಒಂದು ಧಾರ್ಮಿಕ ಸ್ವರೂಪ ಕಾಲಕ್ರಮದಲ್ಲಿ ಬಂದಂತೆ ಗಾಂಧಿಯ ಹೋರಾಟಕ್ಕೆ ಬಂದಿಲ್ಲ.) ಆದರೆ ನಮ್ಮ ಸ್ವಾತಂತ್ರ್ಯ ಹೋರಾಟವು ಕೇವಲ ರಾಜಕೀಯ ಅಧಿಕಾರದ ಹಸ್ತಾಂತರವನ್ನಾಗಲಿ ಶೋಷಕ ಸಮುದಾಯದ ಬದಲುಗೊಳ್ಳುವಿಕೆಯನ್ನಾಗಲಿ ಮೂಲೋದ್ದೇಶವನ್ನಾಗಿ ಹೊಂದಿದ್ದಲ್ಲ. ಸ್ವಾವಲಂಬಿ ಬದುಕಿನ ಸಾಧನೆ, ಜನಪದರ ಹೃದಯ ಪರಿವರ್ತನೆ, ಆ ಮೂಲಕ ರಾಮರಾಜ್ಯದ ಸ್ಥಾಪನೆ, ಈ ಹೋರಾಟದ ಮೂಲೋದ್ದೇಶವಾಗಿತ್ತು. ಗಾಂಧೀಜಿ ಚಿಂತನೆಗಳಲ್ಲಿ ಈ ಉದ್ದೇಶಗಳು ಸ್ಪಷ್ಟವಾಗಿದ್ದವು. ಆದರೆ ನಮಗೆ ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳಾದರೂ ಈಗ ಏನಾಗಿದೆ? ನಮ್ಮ ಸ್ವಾತಂತ್ರ್ಯ ಹೋರಾಟದ ಗುರಿ ಕೇವಲ ರಾಜಕೀಯ ಅಧಿಕಾರದ ಬದಲುಗೊಳ್ಳುವಿಕೆ ಅಷ್ಟೇ ಆಗಿತ್ತೇನೋ ಅನ್ನಿಸುವಂತೆ ಆಗಿದೆ.

ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯದ ನಂತರ ಅಧಿಕಾರಕ್ಕೆ ಬರದೆ ಗಾಂಧಿ ತಪ್ಪು ಮಾಡಿದರು ಅನ್ನಿಸುತ್ತೆ. ಅಧಿಕಾರಕ್ಕೆ ಬರುವುದು ಅಧಿಕಾರ ಅನುಭವಿಸುವುದಕ್ಕಲ್ಲ; ಆ ಮೂಲಕ ಮತ್ತೆ ಹೋರಾಟ ಮುಂದುವರಿಸುವುದಕ್ಕೆ ಎಂದು ಗಾಂಧಿ ಅಧಿಕಾರಕ್ಕೆ ಬಂದು ತೋರಿಸಬೇಕಾಗಿತ್ತು. ಗಾಂಧಿ ವ್ಯಕ್ತಿತ್ವದ ಸ್ಪರ್ಶ ರಾಜಕೀಯಕ್ಕೂ ಆಗಬೇಕಿತ್ತು. ಬಸವಣ್ಣ ಇದಕ್ಕೆ ಒಳ್ಳೆಯ ಉದಾಹರಣೆ. ಗಾಂಧಿ ತತ್ವರಹಿತ ನೆಹರೂರ ಕೈಗಾರಿಕೀಕರಣಗೊಳಿಸಿ ಇಲ್ಲವೆ ಪತನಗೊಳ್ಳಿ, ಎಂಬ ಧೋರಣೆ ಎಲ್ಲೋ ಒಂದು ಕಡೆ ಅಪೂರ್ಣವೆನಿಸುತ್ತದೆ. ಚೆ ಗೆವಾರ, ಫಿಡೆಲ್, ಮಾಂಡೆಲಾ ಮೊದಲಾದವರ ಕ್ರಾಂತಿಯೋತ್ತರ ಹೋರಾಟ ಒಂದು ದೃಷ್ಟಿಯಿಂದ ಅನುಕರಣೀಯ ಅನ್ನಿಸುತ್ತೆ.

**ಅಭೇದ ಕಲ್ಪನೆ ಮತ್ತು ವಿಧಾಯಕ ಪ್ರತಿಷ್ಠೆ**

ಕ್ರಾಂತಿಪೂರ್ವ ಕ್ಯೂಬಾ ಅಮೆರಿಕಾದ ಪರೋಕ್ಷ ವಸಾಹತುವಾಗಿದ್ದಂತಹ ಸ್ಥಿತಿಗೆ ಭಾರತ ಕ್ರಮೇಣ ಸಿಲುಕಿಕೊಳ್ಳುತ್ತಿದೆ, ಪ್ರತ್ಯಕ್ಷ ಮತ್ತು ಪರೋಕ್ಷ ವಸಾಹತೀಕರಣಕ್ಕೆ ಒಳಗಾಗುತ್ತಿದೆ. ಪ್ರಜಾಪ್ರಭು ಮತ್ತು ಪರೋಕ್ಷ ಪ್ರಭುಗಳಿಂದ ಶೋಷಣೆ ದಿನೇ ದಿನೇ ದ್ವಿಗುಣಗೊಳ್ಳುತ್ತಿದೆ. ಭಾರತದ 'ಮಾದಿಗ'ನೊಬ್ಬ ಸಂಭ್ರಮದಿಂದ 'ಬ್ರಾಹ್ಮಣ'ನನ್ನು ಅನುಕರಿಸುವಂತೆ ಭಾರತವು ಅಮೆರಿಕಾವನ್ನು ಅನುಕರಿಸುತ್ತಿದೆ. ಭಾರತದ ಸ್ವಭಾವ, ಅಭಿರುಚಿ ಚಿಂತನಾಕ್ರಮಗಳೇ ಬದಲುಗೊಳ್ಳುತ್ತಿವೆ. ಭಾರತ ಹೀಗೆ ಜಾಗತೀಕರಣದ ಅಂಗವಾಗುತ್ತಿರುವ, ತಾನೂ ಸಾಮ್ರಾಜ್ಯಶಾಹಿಯಾಗಲು ಪೈಪೋಟಿ ನಡೆಸುತ್ತಿರುವ ಈ ತಪ್ಪು ಹೆಜ್ಜೆಗಳ ಮೂಲ ನಮ್ಮ ಸ್ವಾತಂತ್ರ್ಯ ಹೋರಾಟದಲ್ಲಿಯೆ ಇದೆ.

ಧರ್ಮ, ದೇಶಭಕ್ತಿ, ಹಾಗೂ ಹೋರಾಟಗಳ ನಡುವೆ ವ್ಯತ್ಯಾಸವಿಲ್ಲದಂತೆ ಅಭೇದ ಕಲ್ಪನೆಯಿಂದ ಹೋರಾಟ ಪೂರ್ವದಲ್ಲಿ ವರ್ತಿಸಿದ್ದೇವೆ. ಈಗಲೂ ಈ ಅಭೇದ ಕಲ್ಪನೆ ಮುಂದುವರಿದಿದೆ. ಕೆಲವೇ ಕೆಲವು ನಾಯಕರ ವಿಧಾಯಕ ಪ್ರತಿಷ್ಠೆ ಕೂಡ ಈ ಅಭೇದ ಕಲ್ಪನೆಗೆ ತುಪ್ಪ ಸುರಿದಿದೆ.



ಜಿನ್ನಾ, ನೆಹರೂರಂತಹ ಕೆಲವು ವಿಧಾಯಕ ಮಣಿಗಳು ತಮ್ಮ ವಿಧಾಯಕ ಪ್ರತಿಷ್ಠೆಯನ್ನು ಸಾಮುದಾಯಿಕ ಪ್ರತಿಷ್ಠೆಯನ್ನಾಗಿ ಪರಿವರ್ತಿಸಲಾಗಿ ಈ ವಿಧಾಯಕ ಪ್ರತಿಷ್ಠೆಯು ಒಂದು ಹಂತದಲ್ಲಿ ಜನಾಂಗೀಯ ಪ್ರತಿಷ್ಠೆಯಾಗಿಬಿಟ್ಟಿತು. ಹೋರಾಟದ ಗೊತ್ತು ಗುರಿಗಳೇ ದಿಕ್ಕು ತಪ್ಪಿದವು. ಭಾರತಕ್ಕೆ ಸ್ಥಳೀಯವಾಗಿ ಅಗತ್ಯವಿದ್ದ ಗಾಂಧಿ ಚಿಂತನೆಯಾಗಲಿ ಬೋಸರ ಶಿಸ್ತು ತ್ಯಾಗಗಳಾಗಲಿ ಕೆಲಸಕ್ಕೆ ಬಾರದೆ ಹೋದವು. ಇದರ ಬೇರುಗಳು ಗಾಂಧಿ ತತ್ವದ ಸೋಲಿನಲ್ಲಿದ್ದವು.

ದೇಶವಿಭಜನೆ ಮತ್ತು ಸ್ವಾತಂತ್ರ್ಯೋತ್ತರ ಯುದ್ಧ ಪರಂಪರೆಗಳನ್ನು ಜನಾಂಗೀಯ ಪ್ರತಿಷ್ಠೆಗಳೇ ಸೃಷ್ಟಿಸಿದ್ದು ಗಾಂಧಿ ತತ್ವಗಳ ಮೊದಲ ಸೋಲಾದರೆ, ಸ್ವಾತಂತ್ರ್ಯ ನಂತರ ಗಾಂಧೀಜಿ ಸ್ವತಃ ರಾಜಕೀಯ ಅಧಿಕಾರಕ್ಕೆ ಬಾರದೇ ಹೋದದ್ದು ಗಾಂಧಿ ಸಿದ್ಧಾಂತದ ಎರಡನೇ ಸೋಲಾಗಿದೆ.

ಚೆ ಗೆವಾರ ಕ್ಯೂಬಾದಲ್ಲಿ ಈಸಿದ, ಇದ್ದು ಜೈಸಿದ. ಆದರೆ ಭಾರತದಲ್ಲಿ ಗಾಂಧಿ ಈಸಿದರು, ಇದ್ದು ಜೈಸಲಿಲ್ಲ (ಇರಗೊಡಲಿಲ್ಲ?). ಆದರೆ ಸ್ವಾತಂತ್ರ್ಯ ಪರಕಾಲೀನ ಭಾರತಕ್ಕೆ ಗಾಂಧಿಯಂತಹ ಗಾಂಧಿಯ ಅವಶ್ಯಕತೆ ಇರಲಿಲ್ಲ. ಹಾಗಾಗಿಯೇ ಅದು ತನಗೆ ಬೇಕಾದ ನಾಯಕರನ್ನು ಆರಿಸಿಕೊಂಡಿತು ಎನ್ನುವುದು ಹೆಚ್ಚು ಸೂಕ್ತವೇನೋ.

**ಧರ್ಮಯುದ್ಧ – ಭಯೋತ್ಪಾದನೆ ಮತ್ತು ಹೋರಾಟ**

ಯಾವುದೇ ಧರ್ಮಯುದ್ಧವು ಮತ್ತೊಬ್ಬರಿಗೆ ಭಯೋತ್ಪಾದಕವಾಗಿ, ಹಿಂಸೆಯಾಗಿ ಕಾಣುವುದಾದರೆ ಅದು ಎಂದಿಗೂ ಹೋರಾಟವೆನ್ನಿಸಿಕೊಳ್ಳಲಾರದು. ಅಧರ್ಮದ ವಿರುದ್ಧ, ಅನ್ಯಾಯದ ವಿರುದ್ಧ, ಮೌಲ್ಯದ ಪರವಾಗಿ ಹೋರಾಡುವುದು ಬೇರೆ; ಅನ್ಯಧರ್ಮದ ವಿರುದ್ಧ, ಅನ್ಯದೊರೆಗಳ ವಿರುದ್ಧ, ನೆಲ, ಜಲ, ಕುಲ ಇತ್ಯಾದಿಗಳಿಗಾಗಿ ಹೋರಾಡುವುದು ಬೇರೆ. ಅನ್ಯಧರ್ಮದ ವಿರುದ್ಧ ನಡೆಸುವ ಯುದ್ಧವೇ ಧರ್ಮಯುದ್ಧ ಎಂದೂ, ಇಂಥ ನೆಲದಲ್ಲಿ ಇಂತಿಂಥ ಧರ್ಮದವರು ಮಾತ್ರ ಬದುಕಲು ಅರ್ಹರೆಂದು ಬಡಿದಾಡುವುದೇ ಧರ್ಮಯುದ್ಧ ಎಂದೂ ಭಯೋತ್ಪಾದಕರು ಬಿಂಬಿಸುತ್ತಿದ್ದಾರೆ. ಇಂಥ ಭಯೋತ್ಪಾದನೆಗಳನ್ನು ಧರ್ಮಯುದ್ಧಗಳೆಂದಾಗಲೀ ಅಥವಾ ವಿಮೋಚನಾ ಚಳುವಳಿಗಳೆಂದಾಗಲೀ ಕರೆಯಲಾಗುವುದಿಲ್ಲ. ಹೋರಾಟ ಮತ್ತು ಭಯೋತ್ಪಾದನೆಗಳ ನಡುವಿನ ವ್ಯತ್ಯಾಸವನ್ನು ನಾವಿಂದು ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ. ಸ್ಥಳೀಯ, ಸಾಮಾನ್ಯ, ಗಣ್ಯರನ್ನು ಕೊಲ್ಲುವ, ಅಪಹರಿಸುವ ಮೂಲಕ ಆಡಳಿತವರ್ಗವನ್ನು ಪೇಚಿಗೆ ಸಿಲುಕಿಸುವ, ಬಾಡಿಗೆ ಬಂಟರಿಂದ ದಾಳಿ ಮಾಡಿಸುವ, ಧಾರ್ಮಿಕ ಮತ್ತು ಸಾರ್ವಜನಿಕ ಸ್ಥಳಗಳನ್ನು ಸ್ಫೋಟಿಸುವ, ಮಾದಕದ್ರವ್ಯ ಮತ್ತು ಮಾರಕಾಸ್ತ್ರಗಳನ್ನು ಕದ್ದು ಸರಬರಾಜು ಮಾಡುವ ಕ್ರಿಯೆಗಳು ಎಂದಿಗೂ ಹೋರಾಟಗಳಾಗುವುದಿಲ್ಲ. ಇವು ವಿದ್ರೋಹಗಳು ಮಾತ್ರ. ಇಂಥ ವಿದ್ರೋಹಗಳ ರೂವಾರಿಗಳು ಖಚಿತ ಸೈದ್ಧಾಂತಿಕ ನೆಲೆಗಟ್ಟಿಲ್ಲದೆ ಉಚಿತ ಗುರಿ-ಮಾರ್ಗೋಪಾಯಗಳಿಲ್ಲದೆ ಹಲವು ಭಾವುಕ ಮನೋರೋಗಗಳಿಂದ ಬಳಲುತ್ತಿರುತ್ತಾರೆ. ಜೊತೆಗೆ ಇತರರನ್ನು ಸದಾ ಇಂಥ ರೋಗಕ್ಕೆ ತರಪೇತುಗೊಳಿಸುತ್ತಾರೆ. ಇದಕ್ಕೆ ಅಂತರರಾಷ್ಟ್ರೀಯ ಪ್ರತಿಷ್ಠೆಗಳೂ ಬೆಂಬಲ ನೀಡುತ್ತವೆ. ಈ ಬೆಂಬಲ ಕೂಡ ಖಚಿತ

*ರಷ್ಯಾದ ಕಮ್ಯುನಿಸ್ಟ್ ಕೆಂಪು ವಸಾಹತುವನ್ನಾಗಿ ಕ್ಯೂಬಾವನ್ನು ಪರಿವರ್ತಿಸಲು ಕಳುಹಿಸಲ್ಪಟ್ಟ ಒಬ್ಬ ಏಜೆಂಟ್ ಚೆ, ಎಂಬಂತೆ ಅಮೆರಿಕನ್ ಪತ್ರಿಕೆಗಳು ಬಿಂಬಿಸಿದವು. ಅವನ ಅರ್ಜೆಂಟೈನಿತ್ವವನ್ನು ಎತ್ತಿ ಆಡಿದವು. ಚೆ ಕ್ಯೂಬಾದಲ್ಲಿನ ಏಜೆಂಟ್‌ನಂತೇನೂ ವರ್ತಿಸಲಿಲ್ಲ. ಸಮಾಜವಾದಿ ಹೋರಾಟಗಾರನಾಗಿ ಬದುಕಿದ.*

*ಕ್ಯೂಬಾ ಕ್ರಾಂತಿಯ ನಂತರ ಚೆ ೧೯೬೫ರಲ್ಲಿ ಕ್ಯೂಬಾ ತೊರೆದಾಗ ಅಮೆರಿಕಾಕ್ಕೆ ಎಂಥ ತಲ್ಲಣವಾಗಿತ್ತೆಂದರೆ, ಲ್ಯಾಟಿನ್ ಅಮೆರಿಕಾದ ಯಾವ ಭಾಗದಲ್ಲಿ ಯಾವಾಗ ಕ್ರಾಂತಿಯಾಗುವುದೋ ಎಂದು ಚಿಂತಿಸುವಷ್ಟು ತಲ್ಲಣವಾಗಿತ್ತು. ಅಂತರರಾಷ್ಟ್ರೀಯ ಪತ್ರಿಕಾರಂಗ ಕ್ಯೂಬಾದಲ್ಲಿನ ಚೆ ನ ಅನುಪಸ್ಥಿತಿ ಬಗ್ಗೆ ತಲೆಗೊಂದರಂತೆ ಸುದ್ದಿ ಹಬ್ಬಿಸಿತು. ಆದರೆ ಚೆ ಗೆವಾರ ಬೊಲಿವಿಯಾದಲ್ಲಿ ಥಣ್ಣಗೆ ಕ್ರಾಂತಿ ಸಂಘಟಿಸುತ್ತಿದ್ದ.*

*ಅಮೆರಿಕಾ ಸಹಕಾರ ಬೊಲಿವಿಯಾದಲ್ಲಿ ಚೆ ನ ಸೆರೆ ಮತ್ತು ಕೊಲೆಗೆ ಪ್ರಮುಖ ಪಾತ್ರ ವಹಿಸಿತು. ಕೊನೆಗೆ ಚೆ ನ ದಿನಚರಿಯನ್ನು ಕದ್ದು ತಿದ್ದಲು ಯತ್ನಿಸಿದ ಅಮೆರಿಕಾ ಪ್ರಯತ್ನಗಳು ಕೈಗೂಡಲಿಲ್ಲ.*

*ಚೆ ನ ನಿಜ ಹೋರಾಟ ವಿವರ ಜಗತ್ತಿಗೆ ದಕ್ಕಿತು.*

ಸೈದ್ಧಾಂತಿಕ ಚೌಕಟ್ಟಿಲ್ಲದ, ಅಂತರರಾಷ್ಟ್ರೀಯ ಕಾನೂನಿನ ತಿಳುವಳಿಕೆಯಿಲ್ಲದ ಒಣ ರಾಷ್ಟ್ರೀಯ ಪ್ರತಿಷ್ಠೆಯಿಂದ ಮಾತ್ರ ಕೂಡಿರುತ್ತದೆ. ಇಂಥ ಪ್ರತಿಷ್ಠೆಗಳಿಗೆ ಆಂತರಿಕ ಹಸ್ತಕ್ಷೇಪ ಮತ್ತು ನೆರವಿನ ನಡುವಿನ ವ್ಯತ್ಯಾಸಗಳು ತಿಳಿಯುವುದಿಲ್ಲ.

**ಕಾಶ್ಮೀರ ಕದನ**

ಕಾಶ್ಮೀರ ಕದನವು ಕುಲಕ್ಕಾಗಿ, ನೆಲಕ್ಕಾಗಿ ಮತ್ತು ಛಲಕ್ಕಾಗಿ ನಡೆಯುತ್ತಿರುವ ಕದನ. ಯಾವತ್ತೂ ಮಾನವನ ನಡುವೆ ಅಡ್ಡಗೋಡೆಗಳಾಗಿ ವರ್ತಿಸುವ ಕುಲ, ನೆಲ, ಭಾಷೆ ಇವುಗಳ ಮೂಲಕ ಮತ್ತು ರಕ್ಷಣೆಗಾಗಿ ನಡೆದಿರುವ ಕದನಗಳೆಲ್ಲವೂ ಮನುಕುಲ-ವ್ಯವಸ್ಥೆಯ ನಾಶವನ್ನೇ ಮಾಡಿವೆ. ಮಹಾಭಾರತ ದಾಯಾದಿ ಕಲಹ ಇದಕ್ಕೆ ಉತ್ತಮ ಉದಾಹರಣೆ. ಕಾಶ್ಮೀರವು ಆಧುನಿಕ ಕುರುಕ್ಷೇತ್ರಕ್ಕೆ ಕಾರಣವಾದರೆ ಯಾವ ಪಕ್ಷಕ್ಕೂ ಲಾಭವಿಲ್ಲ.

ಕ್ಯೂಬಾದಂತೆ ಕಾಶ್ಮೀರ ಸಾಮ್ರಾಜ್ಯಶಾಹಿ ಹಿಡಿತದಲ್ಲಿ ನರಳುತ್ತಿಲ್ಲ. ದಾಯಾದಿ ರಾಷ್ಟ್ರಗಳ ಸ್ವಪ್ರತಿಷ್ಠೆಯ ಸಂಕೇತವಾಗಿ ನರಳುತ್ತಿದೆ. ಈ ಹಿನ್ನೆಲೆಯಲ್ಲಿ ಅರ್ಜೆಂಟೈನಿ ಚೆ ಗೆವಾರ ಗ್ವಾಟೆಮಾಲಾ, ಮೆಕ್ಸಿಕೋ, ಕ್ಯೂಬಾ, ಬೊಲಿವಿಯಾಗಳಲ್ಲಿ ಹೋರಾಡಿದ್ದು ಮಾನವೀಯ ನೆರವು, ಮಾನವೀಯ ಕರ್ತವ್ಯ ಎನಿಸಿಕೊಂಡರೆ, ಕಾಶ್ಮೀರ ವಿಷಯದಲ್ಲಿ 'ಜೆಹಾದಿನ ಯೋಧ'ರು ಸಂಘರ್ಷಕ್ಕಿಳಿದಿರುವುದು ಆಂತರಿಕ ಹಸ್ತಕ್ಷೇಪವೂ, ಅಧಿಕ ಪ್ರಸಂಗತನವೂ ಎನಿಸಿಕೊಳ್ಳುತ್ತದೆ.

ಆದರೂ ಕಾಶ್ಮೀರ ಸಮಸ್ಯೆ ಒಮ್ಮೆಗೇ ಬಗೆಹರಿದು ಬಿಡುವುದು ಯಾರಿಗೂ ಇಷ್ಟವಿದ್ದಂತೆ ಕಾಣುತ್ತಿಲ್ಲ. ಈಗಿನ ಪೊಳ್ಳು ಭಾವನಾವಾದಿ ಉದ್ರೇಕ ಮತ್ತು ಸೋಲು ಗೆಲುವಿನ ಭಾವ ಈ ಸಮಸ್ಯೆಯನ್ನು ಪರಿಹರಿಸಲಾರದು. ಅಲ್ಲದೆ ಕಾಶ್ಮೀರದ ಕುರಿತ ಜನಾಭಿಪ್ರಾಯ ಮತ್ತು ರಾಜಕೀಯ ಹಿತಾಸಕ್ತಿಗಳು ತಾಳೆಯಾಗುತ್ತಿಲ್ಲ. ದಿನೇ ದಿನೇ ಕಾಶ್ಮೀರದ ಕುರಿತ ಜನಾಭಿಪ್ರಾಯವನ್ನು ರಾಜಕೀಯ ಹಿತಾಸಕ್ತಿಗಳು ತಿರುಚುವುದು ನಡೆಯುತ್ತಿದೆ. ಮೊನ್ನೆ ನಡೆದ ಕಾರ್ಗಿಲ್ ಕದನವು ಜನಾಭಿಪ್ರಾಯವನ್ನು ತಿರುಚಲು ಮತ್ತು ಉದ್ರೇಕಗೊಳಿಸಲು ರಾಜಶಾಹಿಗೆ ಒಂದು ಒಳ್ಳೆಯ ಅವಕಾಶವನ್ನು ನೀಡಿತು.

**ವಿಜಯೋತ್ಸವವೆಂಬ ಕೋಮುವಾದ**

ನಮ್ಮ ಸ್ವಾತಂತ್ರ್ಯ ಹೋರಾಟ ಸಂದರ್ಭದ ಅಭೇದ ಕಲ್ಪನೆಯ ಮುಂದುವರಿದ ಕ್ರಿಯೆಯೇ ಕಾರ್ಗಿಲ್ ವಿಜಯೋತ್ಸವ. ರಾಷ್ಟ್ರೀಯ ಹಬ್ಬದಂತೆ ಕಾರ್ಗಿಲ್ ವಿಜಯವನ್ನು ಆಚರಿಸುವುದು ಎಷ್ಟು ಮಾತ್ರವೂ ಸರಿಯಲ್ಲ. ಇದು (ಅ) ಸಮುದಾಯದ ಮನಸ್ಸನ್ನು ಕೋಮುಮನಸ್ಸನ್ನಾಗಿ ಪರಿವರ್ತಿಸುವ, ಆ ಮೂಲಕ (ಆ) ರಾಷ್ಟ್ರೀಯತೆಯ ಮೇಲೆ ಘಾತಮಾಡುವ ಹಾಗೂ (ಇ) ಅಂತರರಾಷ್ಟ್ರೀಯ ಶಸ್ತ್ರ ಪೈಪೋಟಿಗೆ ಪ್ರಚೋದಿಸುವ ಕೆಲಸ ಮಾಡಬಲ್ಲದು, ಅಷ್ಟೆ.

ಈ ಹಿಂದೆ ೧೯೬೨ರಲ್ಲಿ ನಾವು ಚೀನಾಕ್ಕೆ ಹೀನಾಯವಾಗಿ ಸೋತದ್ದನ್ನು ಚೀನಾ ಎಂದೂ ವಿಜಯೋತ್ಸವವಾಗಿ ಆಚರಿಸುತ್ತಿಲ್ಲ. ಸೋತವರು ಯಾರೇ ಆಗಿರಲಿ, ಯಾವ ಕಾರಣಕ್ಕೇ ಸೋತಿರಲಿ, ಗೆದ್ದವರು ಸೋತವರ ಅಭಿಮಾನವನ್ನು ಪ್ರತಿವರ್ಷ ಕೆಣಕಿ ಅವಮಾನಿಸುವುದು ಸರಿಯಲ್ಲ. ಕೆಲವರು ಕಾರ್ಗಿಲ್ ವಿಜಯೋತ್ಸವವನ್ನು ಹುತಾತ್ಮರ ನೆನಪಿನ ದಿನವೆಂದು ಕರೆದಿದ್ದಾರೆ. ಇದಕ್ಕಾಗಿ ಸರ್ಕಾರಿ ಹಣ, ಆಡಳಿತ ಯಂತ್ರವನ್ನು ಬಳಸಿದ್ದಾರೆ. ಇದನ್ನು ಹುತಾತ್ಮರ ಸಂಸ್ಮರಣೆ ಎಂದಾಕ್ಷಣಕ್ಕೆ ಇದಕ್ಕಂಟಿದ ಧಾರ್ಮಿಕ, ದೇಶದ್ವೇಷಿ ಭಾವವೇನೂ ಅಳಿಸಿಹೋಗುವುದಿಲ್ಲ. ಈಗಾಗಲೇ ಜನವರಿ ಮುವ್ವತ್ತಕ್ಕೆ ಪ್ರತಿವರ್ಷ ಒಂದು ಹುತಾತ್ಮರ ದಿನವೆಂದು ಇರುವಾಗ ಇನ್ನೊಂದು ಹುತಾತ್ಮರ ದಿನಾಚರಣೆ ಯಾಕೆ? ಹೀಗೇ ಮಾಡುತ್ತಾ ಹೋದರೆ ನಾವು ಹತ್ತಾರು ಹುತಾತ್ಮರ ದಿನಾಚರಣೆಗಳನ್ನು ಮಾಡಬೇಕಾದೀತು !

**ವೀರಪ್ಪನ್ ಮತ್ತು ಚೆ**

ಚೆ ಗೆವಾರನ ಕ್ರಾಂತಿಕಾರಿ ವ್ಯಕ್ತಿತ್ವವೇ ಬೇರೆ, ಹೋರಾಟದ ಉದ್ದೇಶ- ಮಾರ್ಗಗಳೇ ಬೇರೆ, ವೀರಪ್ಪನ್ ವ್ಯಕ್ತಿತ್ವವೇ ಬೇರೆ, ಜೀವನಶೈಲಿಯೇ ಬೇರೆ. ವೀರಪ್ಪನ್ ಒಬ್ಬ ಸಾಧಾರಣ ಕಾಡುಗಳ್ಳ - ಕೊಲೆಗಾರ. ತನ್ನನ್ನು ಹಿಡಿಯಲು ಬಂದವರನ್ನು ಕೊಲ್ಲಲು ಬಂದವರೆಂದೇ ತಿಳಿದು ಕೊಲ್ಲುತ್ತಿದ್ದ ನಿರ್ದಯಿ. ಇದೀಗ ಜನಾಂಗೀಯ ಭಯೋತ್ಪಾದಕನಾಗಿ ಬದಲಾಗುತ್ತಿರುವ ದಾಳ. ಇವನನ್ನು ಸಂಗೊಳ್ಳಿ ರಾಯಣ್ಣನಿಗಾಗಲಿ, ಪೂಲನ್ ದೇವಿಗಾಗಲಿ ಯಾವ ಕಾರಣಕ್ಕೂ ಹೋಲಿಸುವಂತಿಲ್ಲ.

ವೀರಪ್ಪನ್ ಒಬ್ಬ ಮುಗ್ಧನೂ ಅಲ್ಲ, ಬಂಡವಾಳಶಾಹಿ ವಿರೋಧಿಯೂ ಅಲ್ಲ, ಆತ್ಮರಕ್ಷಣೆಗಾಗಿ ಅಪರಾಧ ಮಾಡಿದವನೂ ಅಲ್ಲ. ಹೀಗೆಂದು ತಿಳಿಯುವುದು ನಮ್ಮ ಅಜ್ಞಾನ. ಕೋಟಿಗಟ್ಟಲೆ ಲೂಟಿ ಮಾಡುತ್ತಿರುವವರೇ ನಾಡಿನಲ್ಲಿ ರಾಜಾರೋಷ ಓಡಾಡಿಕೊಂಡಿರುವಾಗ, ಪಾಪ, ಈ ವೀರಪ್ಪನ್ನಂಥವರು ಯಾಕೆ ಕಾಡಿನಲ್ಲಿ ಕೊಳೆಯಬೇಕು ಅಂದುಕೊಳ್ಳುವುದು ಕೂಡ ಬೇಜವಾಬ್ದಾರಿ ಸಿನಿಕತನ. ಅಂತೆಯೇ ಅವನು ಚೆ ಭಾವಚಿತ್ರವನ್ನಿರಿಸಿ ಕೊಂಡಿದ್ದಾನೆಂದು ನಾವು ಭಾವುಕರಾಗುವುದು ಬೇಡ.

ರಾಜಕುಮಾರ್‌ನನ್ನು ಅಪಹರಿಸಿ ಕಾಡಲ್ಲಿ ಕೂತು ಚೆ ಗೆವಾರನನ್ನು ನೆನಪಿಸಿಕೊಂಡಾಕ್ಷಣಕ್ಕೆ ಚೆ ಗೆವಾರನಿಗೂ ವೀರಪ್ಪನ್ನಿಗೂ ಸಂಬಂಧ ಹುಟ್ಟಿಬಿಡುವುದಿಲ್ಲ. ಚೆ ಗೆವಾರನೊಂದಿಗೆ ಹೋಲಿಸಿಕೊಳ್ಳಲೂ ಅನರ್ಹ ಇವನು. ಇವನೇ ಯಾಕೆ, ಕಾಶ್ಮೀರ ವಿಮೋಚನಾ ಪಾಲುದಾರರಾಗಲಿ, ತಮಿಳು ಈಳಂಗಳಾಗಲಿ ಯಾರೂ ಚೆ ಗೆವಾರನೊಂದಿಗೆ ಹೋಲಿಸಿಕೊಳ್ಳಲೂ ಅರ್ಹರಲ್ಲ, ಯಾಕೆಂದರೆ ಅವರದು ಹೋರಾಟವಲ್ಲ, ಭಯೋತ್ಪಾದನೆ.

ಇವರ್‍ಯಾರೂ ಮಾನವನ ನಡುವಿನ ಅಡ್ಡಗೋಡೆಗಳಾದ ನೆಲ, ಕುಲ, ಜಲ, ಭಾಷೆಗಳಾಚೆ ತಮ್ಮ ಹೋರಾಟವನ್ನು ಯೋಚಿಸಿದವರೇ ಅಲ್ಲ. ಆದರೆ ಚೆ ತನ್ನ ಹೋರಾಟಕ್ಕೆ ವಿಶ್ವಾತ್ಮಕ ನೆಲೆಯಲ್ಲಿ ದುಡಿದವನು. ಗೆರಿಲ್ಲಾ ಆಗಿ, ಆಡಳಿತಗಾರನಾಗಿ, ಮುಖ್ಯವಾಗಿ ಮಾನವನಾಗಿ ಶೋಷಣೆ, ಅನ್ಯಾಯಗಳ ವಿರುದ್ಧ ದುಡಿದವನು. ರಕ್ತಪಾತದ ಆಚೆಗೂ ಕ್ರಾಂತಿ ಇರುತ್ತದೆ ಎಂದು ತೋರಿಸಿಕೊಟ್ಟವನು. ತನಗಾಗಿ ಎಂದೂ ದುಡಿಯದೆ ಒಂದು ಚಿಕ್ಕಾಸೂ ತನ್ನವರಿಗಾಗಿ ಆಸ್ತಿ ಮಾಡದೆ ಶೋಷಿತರಿಗಾಗಿ ಬದುಕಿ ಮಡಿದವನು. ಇಂಥ ಚೆ ಗೆವಾರನಿಗೆ ಕ್ಷುಲ್ಲಕ ಭಯೋತ್ಪಾದಕರು, ಪ್ರಾಣ ಹಿಂಡುವ ಮೂಲಕವೇ ಅಸ್ತಿತ್ವ ತೋರಿಸುವ ಭಯೋತ್ಪಾದಕರು, ತಿಲ ಮಾತ್ರವೂ ಸಾಮ್ಯರಲ್ಲ.

ರಾಮಲಿಂಗಪ್ಪ ಟಿ. ಬೇಗೂರು
ಉಪನ್ಯಾಸಕರು, ಸರ್ಕಾರಿ ಬಾಲಕರ ಕಾಲೇಜು, ಕೋಲಾರ

**ಪುಸ್ತಕ ಬಿಡುಗಡೆ**
**4-11-2000**
**ಸಂಜೆ 5.30ಕ್ಕೆ**

*

ಡಾ|| ಎಚ್. ಎನ್. ಸಭಾಂಗಣ
ನ್ಯಾಷನಲ್ ಕಾಲೇಜು
ಬಸವನಗುಡಿ
ಬೆಂಗಳೂರು-4

*

ನವಕರ್ನಾಟಕ ಪ್ರಕಾಶನ

**ಬಿಡುಗಡೆಯಾಗಲಿರುವ ಪುಸ್ತಕಗಳು**

**ಫಲ ಜ್ಯೋತಿಷ ನಂಬುವಿರಾ ?**
**ASTROLOGY : BELIEVE IT OR NOT ?**
**(ಲೇಖಕರು : ಡಾ|| ಎಸ್. ಬಾಲಚಂದ್ರರಾವ್)**

**ಸನ್ಮಾನ್ಯ ಶ್ರೀ ವೀರಭದ್ರ ಚನ್ನಮಲ್ಲ ಮಹಾಸ್ವಾಮಿ**
ಕೃತಿಗಳನ್ನು ಬಿಡುಗಡೆ ಮಾಡುವರು

*ಅಧ್ಯಕ್ಷತೆ:* **ಪ್ರೊ|| ಬಿ. ವಿ. ವೀರಭದ್ರಪ್ಪ**

*ಕೃತಿ ಪರಿಚಯ :* **ಡಾ|| ಜಿ. ಶ್ರೀನಿವಾಸ ಮೂರ್ತಿ**

***ತಮಗೆಲ್ಲರಿಗೂ ಆದರದ ಸ್ವಾಗತ***

**ಆರ್. ಎಸ್. ರಾಜಾರಾಮ್**
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

# ಸ್ಥಿತ್ಯಂತರದಲ್ಲಿ ಇಂದಿನ ಜಗತ್ತು

## ಎಡ್ವರ್ಡ್ ಸಯಿದ್

**ಜಾ**ಗತಿಕ ಮಟ್ಟದ ಎಷ್ಟೋ ಮಹಾನ್ ಘಟನೆಗಳು ಇಡೀ ಮನುಕುಲವನ್ನೇ ಅಲುಗಾಡಿಸಿಬಿಡುತ್ತವೆ. ಪರಿಣಾಮವಾಗಿ ಹಲವಾರು ರಾಷ್ಟ್ರಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳು ಬೇರೆ ಬೇರೆ ದಿಕ್ಕುಗಳನ್ನೇ ಹಿಡಿಯುತ್ತವೆ. ಅಂತೆಯೇ ಪರ್ಯಾಯ ವ್ಯವಸ್ಥೆಗಳನ್ನು ಅರಸಿ ಹೆಜ್ಜೆಗಳನ್ನು ಇಡುವುದು ಮಾನವ ಸಮುದಾಯದ ಸ್ವಾಭಾವಿಕ ಲಕ್ಷಣವೂ ಕೂಡ. ಇದು ಇತಿಹಾಸ.

ಈ ಹಿನ್ನೆಲೆಯಲ್ಲಿ ೧೯೯೦ರ ದಶಕದಲ್ಲಿ ಸೋವಿಯೆತ್ ಒಕ್ಕೂಟ ಕುಸಿದು ಬಿದ್ದದ್ದು, ಪರಿಣಾಮವಾಗಿ ಉಂಟಾದ ಶೂನ್ಯ ವಾತಾವರಣದಲ್ಲಿ ಸಂಭವಿಸಿದ, ಸಂಭವಿಸುತ್ತಿರುವ ಘಟನೆಗಳು ಈ ನಿಟ್ಟಿನಲ್ಲಿ ಒಂದು ಸೂಕ್ತ ಉದಾಹರಣೆ. ಇದು ಸಮಾಜವಾದದ ಹೀನಾಯ ಸೋಲು, ಬಂಡವಾಳಶಾಹಿಯ ದಿಗ್ವಿಜಯ ಎಂದೆಲ್ಲ ಪಟ್ಟಭದ್ರ ಹಿತಾಸಕ್ತಿಗಳು ಗುಲ್ಲೆಬ್ಬಿಸುತ್ತಿದ್ದಾರೆ. ಖಾಸಗೀಕರಣ, ಉದಾರೀಕರಣ, ಜಾಗತೀಕರಣ ಮುಂತಾದವು ಸಮಾಜದ ಪ್ರಗತಿಗೆ ಉಳಿದಿರುವ ಏಕೈಕ ಮಾರ್ಗ ಎಂಬುವ ಮಾತು ಎಲ್ಲೆಡೆಯಲ್ಲಿಯೂ ಕೇಳಿಬರುತ್ತಿದೆ.

ಇವೆಲ್ಲವನ್ನು ಬಿಂಬಿಸುವ ಒಂದು ಮುಖ್ಯ ರಾಜಕೀಯ ಪ್ರಕ್ರಿಯೆ ಇಂದು ಅಮೆರಿಕದಲ್ಲಿ ಜರುಗುತ್ತಿದೆ. ಅದೆಂದರೆ, ಈ ಅತ್ಯಂತ ಬಲಶಾಲಿ ಮತ್ತು ಶ್ರೀಮಂತ ಪ್ರಜಾಪ್ರಭುತ್ವವೆನಿಸಿಕೊಂಡಿರುವ ರಾಷ್ಟ್ರದ ಅಧ್ಯಕ್ಷ ಸ್ಥಾನಕ್ಕೆ ಡೆಮೊಕ್ರಟಿಕ್ ಪಕ್ಷದ ಗೋರ್ ಮತ್ತು ರಿಪಬ್ಲಿಕನ್ ಪಕ್ಷದ ಬುಷ್ ಅವರ ನಡುವೆ ಬಿರುಸಿನಿಂದ ಜರುಗುತ್ತಿರುವ ಚುನಾವಣಾ ಪೈಪೋಟಿ. ವಿಚಿತ್ರವೆಂದರೆ, ಸ್ಪರ್ಧಿಸುತ್ತಿರುವ ಇವರ ನಡುವೆ ರಾಜಕೀಯ, ಆರ್ಥಿಕ ಮತ್ತು ವಿದೇಶಾಂಗ ನೀತಿಗಳ ಬಗ್ಗೆ ಭಿನ್ನಾಭಿಪ್ರಾಯಗಳನ್ನು ಗುರುತಿಸುವುದು ಕಷ್ಟದ ಕೆಲಸವೇ. ಸಾಮ್ಯತೆ? ಅದೇ ಹೆಚ್ಚು. ಆದರೂ ಎರಡೂ ಪಕ್ಷಗಳು ವಿರೋಧ ಪಕ್ಷಗಳೆನಿಸಿಕೊಂಡಿವೆ! ಇಬ್ಬರು ಸ್ಪರ್ಧಿಗಳೂ ಬೃಹತ್ ಸಂಸ್ಥೆಗಳ ಒಡೆತನ, ಮುಕ್ತ ಮಾರುಕಟ್ಟೆ ಎರಡರಲ್ಲೂ ಕಟ್ಟಾ ನಂಬಿಕೆಯುಳ್ಳವರು. ಎಲ್ಲ ಕ್ಷೇತ್ರಗಳಲ್ಲಿಯೂ ಸರಕಾರದ ಪಾತ್ರ ತೀರ ಕನಿಷ್ಠವಿರಬೇಕೆಂದು ವಾದಿಸುವವರು. ಇವರು ಅಧಿಕಾರಕ್ಕೆ ಬಂದಲ್ಲಿ ಸಾಮಾನ್ಯ ಹಿತಸಾಧನೆಯ ಕಲ್ಯಾಣರಾಜ್ಯದ ಕಲ್ಪನೆಯನ್ನು ಉಗ್ರವಾಗಿ ವಿರೋಧಿಸಲು ಕಂಕಣಬದ್ಧರಾಗಿದ್ದಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈಗಿನ ಜಾಗತಿಕ ಸಂದರ್ಭದಲ್ಲಿ ಬಿರುಗಾಳಿಯಂತೆ ಬೀಸಿಕೊಂಡು ಎಲ್ಲೆಲ್ಲೂ ವ್ಯಾಪಿಸುತ್ತಿರುವ ಹೊಸ ಉದಾರೀಕರಣ ನೀತಿಯ ಬೆಳವಣಿಗೆ. ಅಮೆರಿಕ ಇದರ ಪ್ರಧಾನ ವಕ್ತಾರ. ಇದರ ಪ್ರಭಾವ ಎಷ್ಟಿದೆಯೆಂದರೆ ಬ್ರಿಟನ್ನಿನ ಲೇಬರ್ ಪಕ್ಷವೂ (ಈಗ ನ್ಯೂ ಲೇಬರ್) ಮತ್ತು ಅಮೆರಿಕದ ಡೆಮೊಕ್ರಟಿಕ್ ಪಕ್ಷವೂ ತಮ್ಮ ಮೂಲ ಸ್ವರೂಪಗಳನ್ನೇ ಬದಲಾಯಿಸಿಕೊಂಡಿವೆ.

ಜಾಗತಿಕ ಮಟ್ಟದಲ್ಲಿ ಅನೇಕ ರಾಷ್ಟ್ರಗಳು ಹೊಸ ಉದಾರೀಕರಣವಾದಕ್ಕೆ ಮಣಿಯುತ್ತಿರುವುದು ಭೀಕರ ಪರಿಣಾಮಗಳಿಗೆ ಎಡೆಮಾಡಿಕೊಡಲಿದೆ. ದುರಂತವೆಂದರೆ, ಈ ಪಕ್ರಿಯೆಗೆ ಮೊದಲ ಬಲಿಪಶುಗಳಾಗುವುದು ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ನೈಸರ್ಗಿಕ ಪರಿಸರ. ಈ ಅಂಶವನ್ನು ಗಂಭೀರವಾಗಿ ಪರಿಗಣಿಸದಿದ್ದರೆ ನಮ್ಮ ಕುತ್ತಿಗೆಗೆ ನಾವೇ ಉರುಲು ಹಾಕಿಕೊಂಡಂತಾಗುತ್ತದೆ.

ಅಂತರರಾಷ್ಟ್ರೀಯ ಮಟ್ಟದಲ್ಲಿ ಹರಿದುಬರುತ್ತಿರುವ ಬಲಿಷ್ಠ ರಾಷ್ಟ್ರಗಳ ಬಂಡವಾಳದ ಹುಚ್ಚು ಹೊಳೆ ಅನೇಕ ಅಭಿವೃದ್ಧಿಶೀಲ ರಾಷ್ಟ್ರಗಳ ಇಡೀ ಆರ್ಥಿಕ ವ್ಯವಸ್ಥೆಯನ್ನು, ಅಲ್ಲಿನ ಮಾರುಕಟ್ಟೆಗಳನ್ನು ಕಬಳಿಸುತ್ತಿದೆ. ಸ್ವರ್ಗವೇ ಬಾಗಿಲಿಗೆ ಬಂದಿದೆಯೆಂಬ ಭ್ರಮೆಗಳನ್ನು ಹುಟ್ಟಿಸುತ್ತಿದೆ. ಜೊತೆಗೆ ಸರಕಾರದ ನಿಯಂತ್ರಣದಲ್ಲಿನ ಯಾವುದೇ ವ್ಯವಸ್ಥೆಯೆಂದರೆ ಅಧಿಕಾರಶಾಹಿಯ ದುರಾಡಳಿತ, ಆರ್ಥಿಕ ಹಿಂದುಳಿಕೆ ಹಾಗೂ ಜನಸಾಮಾನ್ಯರ ನಿತ್ಯಜೀವನಕ್ಕೆ ಒಂದು ಅಡಚಣೆ ಎಂಬುವ ಅಪಪ್ರಚಾರದ ಮಾಯಾಜಾಲಕ್ಕೆ ಅಸಂಖ್ಯಾತ ಜನರು, ಅದರಲ್ಲೂ ಮಧ್ಯಮ ವರ್ಗದವರು, ಸಿಲುಕಿಬಿದ್ದಿರುವುದು ವಿಷಾದನೀಯ. ಪೂರ್ವ ಯೂರೋಪಿನ ರಾಷ್ಟ್ರಗಳು, ಚೀನಾ, ಏಷ್ಯ ಮತ್ತು ಆಫ್ರಿಕದ ಕೆಲವು ರಾಷ್ಟ್ರಗಳು ಈ ಪ್ರಚಂಡ ದಾಳಿಯ ವಿರುದ್ಧವಾಗಿ ನಿಂತು ತಮ್ಮ ತಮ್ಮ ವ್ಯವಸ್ಥೆಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗದೇ ಹೋದದ್ದು ಒಂದು ಐತಿಹಾಸಿಕ ಸಂಗತಿ. ಇದೀಗ ರಷ್ಯ ಮತ್ತು ಪೂರ್ವ ಯೂರೋಪಿನ ರಾಷ್ಟ್ರಗಳು ಇದೇ ಬಂಡವಾಳಶಾಹಿ ಜಾಡನ್ನೇ ಹಿಡಿದಿವೆ. ಎಂದರೆ, ಒಂದು ''ನವಯುಗ'' ಏಕೆ, ಒಂದು ''ಹೊಸ ಜಗತ್ತೇ ಸೃಷ್ಟಿಯಾಗಿದೆ'' ಎನ್ನಬಹುದಲ್ಲವೇ?

*ನವೆಂಬರ್ ೧೯೧೭ರ ಸಮಾಜವಾದಿ ಕ್ರಾಂತಿಯು ರಷ್ಯಾದಲ್ಲಿ ಗುಣಾತ್ಮಕ ಬದಲಾವಣೆಗಳನ್ನು ತಂದಿತೆಂಬುದನ್ನು ಯಾರೂ ನಿರಾಕರಿಸುವಂತಿಲ್ಲ. ಆದರ ಹೆಗ್ಗಳಿಕೆಗಳನ್ನು ಮಣ್ಣುಪಾಲು ಮಾಡುವ ರೀತಿಯಲ್ಲಿ ಕಳೆದ ಒಂದು ದಶಕದ ವಿದ್ಯಮಾನಗಳು ಆ ದೇಶದಲ್ಲಿ ಪ್ರಕ್ಷೋಭೆಯನ್ನು ತಂದಿವೆ. ಜೊತೆಗೆ, ವಿಶ್ವದ ಸಂರಚನೆಯಲ್ಲಿ ಅಮೆರಿಕಾ ಸಾಮ್ರಾಜ್ಯಶಾಹಿಗೆ ಎಲ್ಲಿಲ್ಲದ ಪ್ರಾಬಲ್ಯ ಉಂಟಾಗುತ್ತಿದೆ. ಫುಕುಯಾಮ ಎಂಬೊಬ್ಬ ಚಿಂತಕನ ವಿಚಾರದಂತೆ ಸೋವಿಯೆತ್ ಒಕ್ಕೂಟವು ಇಲ್ಲವಾಗಿದ್ದು 'ಇತಿಹಾಸದ ಮುಕ್ತಾಯ'ವೇ ಆಗಿದೆ. ಆಮೂಲಾಗ್ರ, ಬದಲಾವಣೆ ಎಂಬುದು ಅರ್ಥವಿಲ್ಲದ ಕನಸು ಎಂಬುದು ಆತನ ಸಿದ್ಧಾಂತದ ತಿರುಳು. ಮಾನವಕೋಟಿಯು ಈ ತಿರುಳನ್ನು ಆಸ್ವಾದಿಸುತ್ತಾ ಭ್ರಾಮಕಲೋಕದಲ್ಲಿ ವಿಹರಿಸುತ್ತದೋ ಅಥವಾ ಕ್ರಾಂತಿಪಥದಲ್ಲಿ ಮುನ್ನಡೆದು ಸಮ-ಸಮಾಜವನ್ನು ತನಗೆ ಸೃಷ್ಟಿಸಿಕೊಳ್ಳುತ್ತದೋ ಎಂಬುದು ಇಂದಿನ ಪ್ರಶ್ನೆ. ಆಕ್ಟೋಬರ್ ಕ್ರಾಂತಿಯ ಘಟನೆಗಳನ್ನು ನೆನೆಯುತ್ತಾ ಈ ಪ್ರಶ್ನೆಯನ್ನು ಹಾಕಿಕೊಳ್ಳಬೇಕಾದ್ದು ಅವಶ್ಯಕ. ತಮ್ಮದೇ ಆದ ಶೈಲಿಯಲ್ಲಿ ಎಡ್ವರ್ಡ್ ಸಯಿದ್ ಈ ಪ್ರಶ್ನೆಯನ್ನು ಎದುರಿಸಿದ್ದಾರೆ. ಅವರ ಲೇಖನದ ಸಾರಾಂಶವನ್ನು ಕನ್ನಡದಲ್ಲಿ ಸಿದ್ಧಗೊಳಿಸಿ ಕೊಟ್ಟಿರುವವರು ಶ್ರೀ ಎಸ್. ಸುರೇಂದ್ರ.*

ಜಾಗತಿಕ ಯುದ್ಧದ ನಂತರ ಬ್ರಿಟನ್ ಮತ್ತು ಅಮೆರಿಕಗಳಲ್ಲಿ ಪ್ರಗತಿಪರ ಯೋಜನೆಗಳು ಒಂದಲ್ಲ ಒಂದು ರೀತಿಯಲ್ಲಿ ಪ್ರಜಾಪ್ರಭುತ್ವವಾದಿ ಚೌಕಟ್ಟಿನಲ್ಲಿಯೇ ಸಾಕಷ್ಟು ಸುಧಾರಣೆ ಮತ್ತು ಸಾಮಾಜಿಕ ಅನುಕೂಲತೆಗಳಿಗೆ ದಾರಿಮಾಡಿಕೊಟ್ಟಿದ್ದವೆಂಬುದನ್ನು ಮತ್ತು ಹಾಗೆ ದೊರಕಿದ ಹಲವಾರು ಸವಲತ್ತುಗಳು ಸುಸಂಘಟಿತ ಕಾರ್ಮಿಕರಂಗದ ಬೃಹತ್ ಹೋರಾಟಗಳಿಂದಲೇ ಎಂಬುದನ್ನು ಮರೆಯುವಂತಿಲ್ಲ. ಅಲ್ಲದೆ, ಆಗ ಅಲ್ಲಿನ ಸರಕಾರಗಳು ತಮ್ಮ ಖರ್ಚಿನಲ್ಲಿಯೇ ಈ ಯೋಜನೆಗಳನ್ನು ಜಾರಿಗೊಳಿಸುತ್ತಿದ್ದುದು ಬಹು ಮುಖ್ಯ ಅಂಶ. ಇದರಿಂದಾಗಿ, ೧೯೪೦-೫೦ರ ದಶಕದಲ್ಲಿ ಬ್ರಿಟನ್ ಮತ್ತು ಅಮೆರಿಕಗಳಲ್ಲಿ ಕಾರ್ಮಿಕರಿಗೆ, ಕೆಳವರ್ಗದ ಜನರಿಗೆ ಸಾಧ್ಯವಾದ ಮಟ್ಟಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡಲು ಸಾಧ್ಯವಾಯಿತೆನ್ನುವುದೇನೋ ನಿಜ. ಆದರೆ ಬದಲಾಗುತ್ತಿದ್ದ ಸನ್ನಿವೇಶಕ್ಕೆ ತಕ್ಕಂತೆ ಈ ಬಗೆಯ ಸಮಾಜ ಕಲ್ಯಾಣ ಯೋಜನೆಗಳೆಲ್ಲವೂ ತೀವ್ರ ಟೀಕೆಗೆ ಗುರಿಯಾಗಿ ಜನರ ಕೈತಪ್ಪಿ ಹೋದುದು ೮೦ರ ದಶಕದಲ್ಲಿ.

ಬಲಿಷ್ಠವಾಗಿದ್ದ ಬ್ರಿಟನ್ ಗಣಿ ಕೆಲಸಗಾರರ ಸಂಘವನ್ನು ಒಡೆದು, ನಾಶ ಮಾಡಲಾಯಿತು. ಅದೇ ಗತಿ ಅಮೆರಿಕದ ವೈಮಾನಿಕ ಇಲಾಖೆಯ ನೌಕರರ ಸಂಘಟನೆಯದು. ಯೂರೋಪಿನಲ್ಲಿ ಜನಜೀವನಕ್ಕೆ ಅಗತ್ಯವಾದ ಬಹುತೇಕ (ಸಾರಿಗೆ, ಶಿಕ್ಷಣ, ಬೃಹತ್ ಕೈಗಾರಿಕೆ.....ಇತ್ಯಾದಿ) ಕ್ಷೇತ್ರಗಳ ಖಾಸಗೀಕರಣ ಜರುಗಿದ್ದು ಆ ಕಾಲದಲ್ಲಿಯೇ. ಅಮೆರಿಕದಲ್ಲಿ ಖಾಸಗಿ ವ್ಯವಸ್ಥೆ ಮುಂಚಿನಿಂದಲೂ ಅಸ್ತಿತ್ವದಲ್ಲಿದ್ದರೂ ಬೆಲೆ ನಿಯಂತ್ರಣ ಸರಕಾರದ ಹತೋಟಿಯಲ್ಲಿತ್ತು. ಈಗಿನ ಪರಿಸ್ಥಿತಿಯೇ ಬೇರೆ.

ಇವೆಲ್ಲದರ ಮೂಲ ಅರ್ಥ ಇಷ್ಟೆ. ಜನಸಾಮಾನ್ಯರ ನಿತ್ಯ ಜೀವನದ ಆರ್ಥಿಕ ವ್ಯವಹಾರಗಳಲ್ಲಿ ಸರಕಾರದ ಪಾತ್ರ ಗೌಣವಾಗಿರಬೇಕು ಹಾಗೂ ಖರ್ಚುವೆಚ್ಚ, ಬೆಲೆ ನಿಯಂತ್ರಣ, ಲಾಭದ ಮೊತ್ತ ಎಲ್ಲವೂ ಮಾರುಕಟ್ಟೆಯದೇ. ಅಂಚೆ ಸೇವೆ ಮತ್ತು ಜೈಲುಗಳ ಆಡಳಿತ ವ್ಯವಸ್ಥೆಗಳೂ ಈ ಜಾಲದಿಂದ ಹೊರಬರಲಾಗಿಲ್ಲ. ಮಾರ್ಗರೆಟ್ ಥ್ಯಾಚರ್ ಅವರ ಸಿದ್ಧಾಂತದ ಬಿಸಿ

ಎಲ್ಲಿಯವರೆಗೆ ತಟ್ಟಿತೆಂದರೆ ಬ್ರಿಟನ್ನಿನಲ್ಲಿ ವಿಶ್ವವಿದ್ಯಾಲಯಗಳನ್ನೂ ಖಾಸಗೀಕರಣಗೊಳಿಸಲಾಯಿತು. ಏಕೆಂದರೆ, ಅವು ಲಾಭಗಳಿಸುವ ಸಂಸ್ಥೆಗಳಂತೆ! ಈ ಜನವಿರೋಧಿ ಕೃತ್ಯದಿಂದಾಗಿ ಅಲ್ಲಿನ ವಿದ್ಯಾಸಂಸ್ಥೆಗಳೂ, ಶಿಕ್ಷಕ ವರ್ಗದವರೂ ಇನ್ನೂ ಚೇತರಿಸಿಕೊಳ್ಳಲು ಸಾಧ್ಯವಾಗಿಲ್ಲ.

ಆದರೆ ಬ್ರಿಟನ್ನಿನ ಲೇಬರ್ ಪಕ್ಷ ಮತ್ತು ಅಮೆರಿಕದ ಡೆಮೊಕ್ರಟಿಕ್ ಪಕ್ಷಗಳು ಬಣ್ಣ ಬಣ್ಣದ ಮಾತುಗಳಿಂದ, ಕ್ಲೀಷೆಗಳಿಂದ ಸಮಾಜಕಲ್ಯಾಣ ಯೋಜನೆಗಳಲ್ಲಿ ಹೆಚ್ಚಿನ ಬದಲಾವಣೆಗಳೇನೂ ಇಲ್ಲವೆಂದು ಪ್ರಚುರಪಡಿಸಿದ ಕತೆಯೇ ಬೇರೆ. ವಾರ್ಷಿಕ ಆಯವ್ಯಯದಲ್ಲಿ ರಕ್ಷಣೆಗಾಗಿ, ಮಿಲಿಟರಿ, ಕಾನೂನು ಪರಿಪಾಲನೆ (ಪೊಲೀಸು, ಜೈಲು ಆಡಳಿತ.... ಇತ್ಯಾದಿ) ಗಳಿಗಾಗಿ ಹೆಚ್ಚುವರಿ ಹಣ ನಿಗದಿ ಮಾಡಿದುದೂ ಸಮಾಜ ಕಲ್ಯಾಣ, ಬಡವರ ಹಾಗೂ ವಯೋವೃದ್ಧರ ಆರೋಗ್ಯ ಸುಧಾರಣೆ ಮತ್ತು ಶಿಕ್ಷಣ ಸಂಸ್ಥೆಗಳಿಗೆ ಅನುದಾನ ನೀಡುವಲ್ಲಿ ಕಡಿತ ಮಾಡಿದುದೂ ಖಾಸಗೀಕರಣ ಮತ್ತು ಲಾಭಗಳಿಕೆ ನೀತಿಯ ಪರಿಣಾಮಗಳೇ.

ಅಮೆರಿಕದಲ್ಲಿ ಮುಕ್ತ ಮಾರುಕಟ್ಟೆಯು ಡಾಂಭಿಕತನದಿಂದ ಮೆರೆಯುವ ಮೇಲ್ವರ್ಗದ ಜನರಿಗೆ ವರಪ್ರದಾನವಾಗಿದೆ. ಕೆಳವರ್ಗದವರ ಪರಿಸ್ಥಿತಿ ಹೀನಾಯವಾಗಿದೆ. ಬೃಹತ್ ವಾಣಿಜ್ಯ ಸಂಸ್ಥೆಗಳು, ಇಲೆಕ್ಟ್ರಾನಿಕ್ ಉದ್ದಿಮೆಗಳು ರಾಷ್ಟ್ರದ ಉತ್ಪನ್ನಗಳನ್ನು ಕೊಳ್ಳೆ ಹೊಡೆಯುತ್ತಿವೆ. ಇವರ ಹಿತಾಸಕ್ತಿಗಳನ್ನು ಕಾಪಾಡುವ ಸಲುವಾಗಿಯೇ, ಚುನಾವಣೆಗಳು ಜರುಗುತ್ತವೆಂದರೆ ಅತಿಶಯೋಕ್ತಿಯಾಗಲಾರದು. ಈ ದುರದೃಷ್ಟಕರ ಪ್ರಕ್ರಿಯೆಯಲ್ಲಿ ಪ್ರಜಾಪ್ರಭುತ್ವದ ಮೌಲ್ಯಗಳು ತಮ್ಮ ಅರ್ಥವನ್ನು ಕಳೆದುಕೊಳ್ಳುತ್ತಿವೆ. ಅಮೆರಿಕದಲ್ಲಿನ ಜನಸಾಮಾನ್ಯರ ಹಕ್ಕು ಬಾಧ್ಯತೆಗಳು ಶೋಚನೀಯ ಪರಿಸ್ಥಿತಿಯನ್ನು ತಲುಪುತ್ತಿವೆ.

ದುರಂತವೆಂದರೆ, ಈ ಹೊಸ ಉದಾರವಾದಕ್ಕೆ ಪರ್ಯಾಯವೇ ಇಲ್ಲವೆಂಬ ಭ್ರಾಂತಿ ಎಲ್ಲೆಲ್ಲೂ ಮೂಡುತ್ತಿರುವುದು. ಇದಕ್ಕಿಂತಲೂ ಉತ್ತಮ ನೀತಿ ಬೇರೊಂದಿಲ್ಲ, ಇದುವೆ ಸರ್ವತೋಮುಖ ಏಳಿಗೆಗೆ ದಾರಿ, ಮಾನವೀಯ ಮೌಲ್ಯಗಳ ವಿಕಾಸಕ್ಕೆ ಏಕೈಕ ಮಾರ್ಗ ಎಂದೆಲ್ಲ ಬೊಬ್ಬೆ, ಸುಳ್ಳು, ಕ್ಷುದ್ರ ಪ್ರಚಾರಗಳನ್ನು ಜನಸಾಮಾನ್ಯರಲ್ಲಿ, ಅದರಲ್ಲಿಯೂ ಮಧ್ಯಮ ವರ್ಗದ ಜನರ ಮಧ್ಯೆ ಹರಡುತ್ತಿದ್ದಾರೆ. ಗೊಬ್ಬೆಲ್ಸ್‌ನ ಪುನರವತಾರವಿದು.

ಇವೆಲ್ಲದರ ನೇರ ಫಲಿತಾಂಶವೆಂದರೆ ಏಷ್ಯ, ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕಗಳ ಸಂಪನ್ಮೂಲಗಳ ಲೂಟಿ ಮತ್ತು ಅಲ್ಲಿನ ಪರಿಸರ ನಾಶ.

ಇಲ್ಲಿ ನಗಣ್ಯವಾಗುವುದು ಸಾಮಾನ್ಯ ವ್ಯಕ್ತಿ, ಮುಗ್ಧ ಪ್ರಜೆ. ಬಂಡವಾಳದ ಹುಚ್ಚು ಕುಣಿತದ ಮುಂದೆ ಅವರ ಬದುಕು ಶೂನ್ಯ. ಜಾಗತೀಕರಣ, ಮುಕ್ತ ಮಾರುಕಟ್ಟೆ, ಲಾಭದಾಹ- ಇವು ಸಮಾಜದ ಪ್ರಗತಿಗೆ ಮಾರಕವಾಗುತ್ತವೆ.

ಹೊಸ ಉದಾರೀಕಣ ನೀತಿ ಮತ್ತು ಸಂಬಂಧಪಟ್ಟ ಈ ಸಮಾಜವಿರೋಧಿ ಬೆಳವಣಿಗೆಗಳು ಹೀಗೆ ಎಷ್ಟು ಕಾಲ ಮುಂದುವರೆಯಲು ಸಾಧ್ಯ? ಇದರಿಂದ ಕುಡಿಗೊಂಡಿರುವ ಹುಚ್ಚು ಕನಸುಗಳಿಗೂ, ಭ್ರಮೆಗಳಿಗೂ ಕೊನೆ ಇಲ್ಲವೇ?

ಇದಂತೂ ನಿಜ. ವರ್ಗಗಳ ಅಸಮಾನತೆ ಹೆಚ್ಚಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಸಮಾಜ ಕಲ್ಯಾಣ ಯೋಜನೆಗಳಿಂದ, ಕನಿಷ್ಠ ಅಗತ್ಯತೆಗಳಿಂದ, ನೈಜ ಪ್ರಜಾಪ್ರಭುತ್ವ ಹಕ್ಕುಗಳಿಂದ ವಂಚಿತರಾದ ಜನತೆಯಲ್ಲಿ ವರ್ಗ ಪ್ರಜ್ಞೆಯ ಆಧಾರದ ಮೇಲೆ ಸುತ್ತಮುತ್ತಲಿನ ವಿದ್ಯಮಾನಗಳ ಬಗೆಗಿನ ಅರಿವು ಮೂಡಲೇಬೇಕಾಗುತ್ತದೆ. ಆ ಪ್ರಜ್ಞೆ ವರ್ಗಸಂಘರ್ಷಕ್ಕೆ ಅಣಿಮಾಡಿಕೊಡಲೇಬೇಕಾಗುತ್ತದೆ. ಮನುಕುಲದ ಇತಿಹಾಸದಲ್ಲಿ ರಾಜಕೀಯ, ಆರ್ಥಿಕ ಪರ್ಯಾಯ ವ್ಯವಸ್ಥೆಗಳ ಹುಡುಕಾಟ ನಿರಂತರವಾದದ್ದು. ಬದಲಾವಣೆಗಳೂ ಕೂಡ. ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ ಇದು ಎಲ್ಲಿ? ಹೇಗೆ? ಎಂದು?.... ಇವು ನಮ್ಮ ಮುಂದಿರುವ ಬೃಹತ್ ಪ್ರಶ್ನೆಗಳಾಗಿವೆ.

ಕನ್ನಡ ಅನುವಾದ : **ಎಸ್. ಸುರೇಂದ್ರ**,
ನಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲೋನಿ
ಬೈರಸಂದ್ರ, ಜಯನಗರ ಪೂರ್ವ
ಬೆಂಗಳೂರು - ೫೬೦ ೦೧೧

## ನವಕರ್ನಾಟಕ ಪ್ರಕಾಶನ ಈ ತಿಂಗಳು ಬಿಡುಗಡೆ ಮಾಡಲಿರುವ ಪುಸ್ತಕಗಳು


ಪುಟ 48 ಬೆಲೆ 18


ಪುಟ 32 ಬೆಲೆ 15



ಪುಟ 120 ಬೆಲೆ 40


ಪುಟ 112 ಬೆಲೆ 40


ಪುಟ 128 ಬೆಲೆ 45

*ಸ್ಥಳೀಯ ಪುಸ್ತಕದಂಗಡಿಯಲ್ಲಿ ವಿಚಾರಿಸಿ ಇಲ್ಲವೇ ನಮಗೆ ಬರೆಯಿರಿ*

*ರಿಜಿಸ್ಟರ್ಡ್ ಬುಕ್ ಪೋಸ್ಟ್ ಮೂಲಕ ಪಡೆಯಲು ಪುಸ್ತಕದ ಬೆಲೆಯೊಂದಿಗೆ ರೂ. ೧೫ ಸೇರಿಸಿ ಎಂ. ಓ. ಅಥವಾ ಡಿ. ಡಿ.ಯನ್ನು ಈ ವಿಳಾಸಕ್ಕೆ ಕಳಿಸಿಕೊಡಿ*

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ: ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್: ೨೨೦೩೫೮೯೦ / ೯೧ / ೯೨
**e-mail : nkp@bgl.vsnl.net.in**


ಪುಟ 24 ಬೆಲೆ 8



ಪುಟ [illegible] ಬೆಲೆ 35



ಪುಟ 208 ಬೆಲೆ 80

# ಪುಷ್ಯದ ರಾತ್ರಿ

*ಹಿಂದಿ ಮೂಲ:* **ಪ್ರೇಮಚಂದ್**

''ಜಬರಾ, ನಾಳೆಯಿಂದ ನನ್ನ ಜೊತೆ ಬರಬೇಡ ಕಣೋ... ಚಳಿಯಲ್ಲಿ ಹಿಮವಾಗಿ ಬಿಡ್ತೀಯಾ... ಇದೆಂಥ ಚಳಿ....ಏನ್ ಥಂಡಿ.... ಎಲ್ಲಿಂದ ಬರುತ್ತೋ.... ನಾನಂತೂ ತಾಳೆನಪ್ಪ.... ಎದ್ದು ಬೀಡಿಯಾದರೂ ಹೊತ್ತಿಸಲಾ.... ಆಗಲೇ ಎಂಟು ಬೀಡಿ ಸೇದಾಯಿತಲ್ಲೋ... ಇದೊಂದು ರಾತ್ರಿ ಕಳೆಯಲಿ.... ಈ ಫಸಲು ನೋಡು.... ಅದು ಚಳಿಗೆ ಬೆವೆತು ಓಡಿಯಾತು.... ಇದೆಂಥ ಚಳಿನೋ... ಈ ದಪ್ಪ ಗಾದಿ ಹೊದಿಕೆ ಹತ್ತಿರ ಸುಳಿದೀತಾ... ಕಷ್ಟ ಪಡೋರು ಯಾರೋ ಖುಶಿ ಇನ್ನಾರೋ...'' ಎಂದು ಬಡಬಡಿಸುತ್ತಾ ಎದ್ದು ಕುಳಿತ. ಚಳಿ ಗೆಲ್ಲಲು ಯತ್ನಿಸಿದ. ಬೀಡಿ ತೆಗೆದು ಹೊತ್ತಿಸಿದ. ಜಬರಾ ಕೂಡಾ ಎದ್ದು ಕುಳಿತಿತು.

ಹಲ್ಕು ದಮ್ಮು ಎಳೆದು ಹೊಗೆ ಬಿಡುತ್ತಾ-

''ನೀನು ಸೇದುತ್ತೀಯೇನೋ ಜಬರಾ.... ಚಳಿ ಹೋಗೋದಂತು ಇಲ್ಲ ಬಿಡು. ಮನಸ್ಸಿಗೆ ಚೂರು ಖುಷಿಯಾಗಬಹುದೇ.....?'' ಎಂದ. ಜಬರಾ ಪ್ರೀತಿಯಿಂದ ಮುಖ ಅವನ ಹತ್ತಿರಕ್ಕೆ ತಂದಿತು. ಹಲ್ಕು ಕರುಣೆಯಿಂದ ತಲೆ ಸವರಿದ.

''ಇವತ್ತಿನ ಚಳಿಯನ್ನು ತಾಳಿಕೋ.... ನಾಳೆ ನಿನಗೆ ಗೋಣಿಚೀಲ ತರ್ತೀನಿ. ಅದರೊಳಗೆ ಮುದುಡಿಕೊಂಡರೆ ಚಳಿ ಆಗಲ್ಲ ಬಿಡು.....''

ಜಬರಾ ತನ್ನ ಮುಖವನ್ನು ಅವನ ಮುಖದ ಹತ್ತಿರ ತಂದು ಎದೆಗೆ ಕಾಲು ಚಾಚಿತು. ಅದರ ಬಿಸಿ ಉಸಿರು ಅವನ ಕತ್ತಿಗೆ ತಾಗಿತು.

ಬೀಡಿ ಸೇದಿ ಪುನಃ ಮಗ್ಗಲಾದ. ಈ ಸಾರೆ ಖಂಡಿತ ನಿದ್ದೆ ಮಾಡಿಯೇ ಮಾಡ್ತೀನಿ ಎಂದುಕೊಂಡ. ಆದರೆ ಮುಂದಿನ ಕ್ಷಣದಲ್ಲಿಯೇ ಹೃದಯ ನಡುಕ ಶುರುವಾಯಿತು. ಆ ಕಡೆ ಈ ಕಡ ಮಗ್ಗಲು ಬದಲಾಯಿಸಿದ. ನಿದ್ದೆ ಬರಲಿಲ್ಲ. ಪಿಶಾಚಿಯಂತೆ ಅಟ್ಟಿಸಿಕೊಂಡು ಬಂದೇ ಬಿಟ್ಟಿತು ಕುಳಿರ್ಗಾಳಿ....! ಎಷ್ಟೇ ಪ್ರಯತ್ನಪಟ್ಟರೂ ಚಳಿಯನ್ನು ಮೆಟ್ಟಿ ನಿಲ್ಲಲಾಗಲಿಲ್ಲ. ಅನ್ಯಮಾರ್ಗ ತೋಚದೆ ನಿಧಾನವಾಗಿ ಜಬರಾಗೆ ಕೂಗಿ ಎಚ್ಚರಿಸಿದ. ಅದನ್ನು ಎತ್ತಿಕೊಂಡು ತನ್ನ ತೊಡೆಯ ಮೇಲೆ ಮಲಗಿಸಿಕೊಂಡ. ಮೈಯ ಕೆಟ್ಟ ವಾಸನೆ ಮೂಗಿಗೆ ಹೊಡೆಯಿತು. ಜಬರಾ ಮಾತ್ರ ಅತಿ ಪ್ರಸನ್ನತೆಯಲ್ಲಿ ಅವನ ತೊಡೆಯನ್ನಾಕ್ರಮಿಸಿಕೊಂಡಿತು. ಸ್ವರ್ಗ ಅಂದರೆ ಇದೇ ಇರಬೇಕು ಎಂದುಕೊಂಡಿತು. ಆತ್ಮಸಂಬಂಧ ಅರಿವು ಅದಕ್ಕಿರಲಿಕ್ಕಿಲ್ಲ. ಯಾವ ನೆಂಟರಿಷ್ಟರನ್ನೂ ಅವನು ಈ ಪರಿ ಹಚ್ಚಿಕೊಂಡಿರಲಿಲ್ಲ, ತನ್ನ ಮಿತ್ರನನ್ನು ಆಲಂಗಿಸಿರಲಿಲ್ಲ. ಇಷ್ಟು ನೆಮ್ಮದಿ ಅವರಿಂದ ಸಿಗುತ್ತಿತ್ತೋ, ಇಲ್ಲವೋ.... ಈ ಅಮೂಲ್ಯ ಮೈತ್ರಿ ಅವನ ಅಂತರಾತ್ಮದ ಎಲ್ಲಾ ದ್ವಾರಗಳನ್ನು ತೆರೆದು ಕಣಕಣವು ಪ್ರಕಾಶಮಯಗೊಳಿಸಿತು. ಹಲ್ಕುನ ಸ್ನೇಹಬಂಧನವು ಅದರಲ್ಲಿ ಒಂದು ಹೊಸ ಸ್ಫೂರ್ತಿಯನ್ನೇ ಹುಟ್ಟುಹಾಕಿತು. ಅವನಿಗಾಗಿ ಈ ಚಳಿ ಯಾವ ಲೆಕ್ಕ....!

ಅಷ್ಟರಲ್ಲಿ ಜಬರಾ ಪ್ರಾಣಿಯೊಂದರ ಸದ್ದು ಕೇಳಿಸಿಕೊಂಡು, ಕೆಳಗೆ ಜಿಗಿದು ತೋಟದ ಕಡೆ ಓಡಿ ಬೊಗಳತೊಡಗಿತು. ಯಾಕೆಂದು ಹಲ್ಕು ಯೋಚಿಸದೆ ಹಿಂದಕ್ಕೆ ಕರೆದ. ಅದು ಬರಲಿಲ್ಲ. ಛತ್ರಿ ಮರದ ನಾಲ್ಕು ದಿಕ್ಕಿಗೂ ಓಡುತ್ತಾ ಬೊಗಳಿತು. ಅದರ ಕರ್ತವ್ಯಪ್ರಜ್ಞೆ ಹಾಗಿತ್ತು. ಒಂದು ಕ್ಷಣ ಸುಮ್ಮನಿದ್ದು, ಜ್ಞಾಪಿಸಿಕೊಂಡಂತೆ ಪುನಃ ಆ ದಿಕ್ಕಿನೆಡೆ ಓಡಿಹೋಗಿ ಬೊಗಳಿ ಮತ್ತೆ ಹಿಂದಿರುಗಿತು. ಸುಮಾರು ಹೊತ್ತು ಬೊಗಳಿ ತನ್ನ ಸ್ವಾಮಿನಿಷ್ಠೆ ತೋರ್ಪಡಿಸಿತು.

ಒಂದು ಘಂಟೆ ಕಳೆಯಿತು. ರಾತ್ರಿ ತನ್ನ ಶೀತಲ ಹಬೆಯಿಂದ ಇನ್ನೂ ಗಾಢವಾಯಿತು. ಹಲ್ಕು ಎದ್ದು ಕುಳಿತ. ಎರಡು ಮೊಳಕಾಲುಗಳನ್ನು ಎದೆ ಹತ್ತಿರ ತಂದು ಮುಖ ಒಳಗೆ ಹುದುಗಿಸಿ ಕೈಗಳಿಂದ ಒತ್ತಿಕೊಂಡ. ಆದರೂ ಚಳಿ ಬಿಡಲಿಲ್ಲ. ಶರೀರವೇ ಹಿಮವಾದಂತೆ ಕಂಡಿತು. ರಕ್ತದ ಬದಲು ಹಿಮವೇ ತುಂಬಿದಂತೆ ಅಸಾಧ್ಯ ಥಂಡಿ......! ರಕ್ತಚಲನೆಯೇ ನಿಂತು ಹೋದಂತೆ ಭಾಸ..... ನಡುಗುತ್ತಾ ಆಕಾಶದೆಡೆ ನೋಡಿದ. ಸಪ್ತರ್ಷಿ ಇನ್ನೂ ಆಕಾಶದ ಅರ್ಧಕ್ಕೂ ಬಂದಿರಲಿಲ್ಲ. ಮೇಲೆ ಬಂದಿದ್ದರೆ ದೂರದ ಉಷೆಯ ಲಕ್ಷಣ ಕಾಣಬಹುದಾಗಿತ್ತು. ಇನ್ನೂ ರಾತ್ರಿ ಬಹಳಷ್ಟಿದೆ ಎಂದುಕೊಂಡ.

ಏರಿ ಆಚೆ ಒಂದು ಮಾವಿನ ತೋಪು ಇತ್ತು. ಬರಗಾಲ ಶುರುವಾಗಿ ಅಲ್ಲಿ ತರಗೆಲೆಗಳ ರಾಶಿಯೇ ಬಿದ್ದಿತ್ತು. ಅವುಗಳನ್ನು ತಂದು ಬೆಂಕಿ ಹಚ್ಚಿ ಮೈ ಕಾಯಿಸಿಕೊಳ್ಳಬಹುದಲ್ಲಾ ಎಂದು ಯೋಚಿಸಿದ. ಈ ರಾತ್ರಿಯಲ್ಲಿ ಯಾರಾದರೂ ನೋಡಿದರೆ ಖಂಡಿತ ಭೂತ ಎಂದೇ ತಿಳಿದಾರು. ಆದರೆ ಅಲ್ಲಿ ಬೇರೆ ಪ್ರಾಣಿ ಅಡಗಿ ಕುಳಿತಿದ್ದರೆ ಏನು ಮಾಡುವುದು.....? ಈ

ಹಲ್ಕು ಬಂದು ಮುನ್ನಿಗೆ ಹೇಳಿದ :

''ಸಾಹುಕಾರ ಬಂದಿದ್ದಾನೆ. ಅಲ್ಲಿ ರೂಪಾಯಿ ಇಟ್ಟೀನಲ್ಲಾ ಕೊಡು. ಪೀಡೆ ತೊಲಗಿದರೆ ಸಾಕಾಗಿದೆ.....''

ಕಸ ಗುಡಿಸುತ್ತಿದ್ದವಳು ತಿರುಗಿ ನೋಡಿ-

''ಇರೋದು ಬರಿ ಮೂವತ್ತು ರೂಪಾಯಿ. ಕೊಟ್ಟು ಕಂಬಳಿಗೆ ಏನು ಮಾಡ್ತೀರಿ? ಪುಷ್ಯ - ಮಾಘದ ರಾತ್ರಿ ಹೇಗೆ ಕಳೀತೀರಿ.....? ಬೆಳೆ ಮೇಲೆ ಹಣ ಕೊಡ್ತೀವಂತ ಹೇಳಿ.... ಈಗ ಬೇಡ'' ಅಂದಳು.

ಹಲ್ಕು ಒಂದು ಕ್ಷಣ ಅನಿಶ್ಚಿತ ಸ್ಥಿತಿಯಲ್ಲಿ ಹಾಗೇ ನಿಂತುಕೊಂಡ. ಪುಷ್ಯವು ಬೆನ್ನು ಹಿಂದೆಯೇ ಬರುತ್ತಿದೆ. ಕಂಬಳಿ ಇಲ್ಲದೆ ರಾತ್ರಿ ಹೊಲದಲ್ಲಿ ಇರಲಿಕ್ಕಾಗಲ್ಲ. ಆದರೆ ಸಾವುಕಾರ ಈ ಸಲ ಒಪ್ಪಲ್ಲ. ಜೋರು ಮಾಡುತ್ತಾನೆ. ಬೈಯ್ಯುತ್ತಾನೆ. ಅವನ ಹಣ ವಾಪಸ್ಸು ಮಾಡಲೇಬೇಕು. ಚಳಿಯಲ್ಲಿ ಸತ್ತರೂ ಪರವಾಗಿಲ್ಲ. ಮನಸ್ಸಿಗೆ ನೆಮ್ಮದಿಯಾದರೂ ಇರತ್ತೆ ಎಂದುಕೊಂಡವನು ಅವಳ ಹತ್ತಿರ ಬಂದು ಮೃದುವಾಗಿ ನೇವರಿಸುತ್ತಾ-

''....ತಂದುಕೊಡು.... ಉಪದ್ರವ ತಪ್ಪುತ್ತೆ. ಕಂಬಳಿಗೆ ಬೇರೆ ಏನಾದರೂ ಉಪಾಯ ಮಾಡೋಣ....'' ಎಂದ.

ಮುನ್ನಿ ಬೇಸರಪಟ್ಟು ದೂರ ಸರಿದು ಕಣ್ಣು ತೇಲಿಸಿ-

''ಉಪಾಯ ಮಾಡೋಣ....? ಅದೆಂಥ ಉಪಾಯ ಮಾಡ್ತಿಯಾ...? ಯಾರಾದರೂ ಕಂಬಳಿ ಭಿಕ್ಷೆ ನೀಡ್ತಾರೇನು ನಿನಗೆ....? ಇಷ್ಟೊಂದು ಸಾಲ ಮಾಡ್ತಿಯಾ...... ತೀರಿಸೋದು ಯಾವಾಗ....? ಕೃಷಿಗೆ ಸಾಲ ಮಾಡೋದು ಮೊದಲು ನಿಲ್ಲಿಸು..... ಎಲ್ಲಿಯಾದರೂ ಕೂಲಿ ಕೆಲಸಕ್ಕೆ ಸೇರು.... ಬರೀ ಸಾಲ ತೀರಿಸಲಿಕ್ಕೆ ಈ ಜನ್ಮ ಆಯಿತು. ಹಾಕಿದ ಬೀಜಾನೂ ಬರಲಿಲ್ಲ. ಕೂಲಿಯಿಂದ ಹೊಟ್ಟೇನಾದರೂ ತುಂಬೀತು. ನೋಡು, ನಾನಂತು ಹಣ ಕೊಡಲ್ಲ....'' ಮುನಿದಳು.

''ಹಾಗಾದರೆ ನಾನು ಅವರಿಂದ ಬೈಯಿಸಿಕೊಳ್ಳಬೇಕಾ....?''

''ಬೈಯ್ಯುತ್ತಾನೇಕೆ....? ಅವನು ನಮಗೇನು ಸಾಕ್ತಾನಾ....'' ಎಂದು ಹೇಳಿದರೂ ತನ್ನ ನಿಸ್ಸಹಾಯಕತೆಗೆ ದವಡೆಯ ಮಾತು ತಗ್ಗಿತು. ಅವನ ಗಂಭೀರ ಸ್ಥಿತಿ ಊಹಿಸಿ, ಪರಿಸ್ಥಿತಿಗೆ ಸೋತು, ಎದ್ದು ಒಳಗೆಹೋಗಿ ಹಣ ತಂದು ಕೈಯಲ್ಲಿಟ್ಟಳು.

''ಸಾಲ ಮಾಡೋದು ಬಿಟ್ಟುಬಿಡಿ. ಕೂಲಿಯಲ್ಲಿ ಸುಖವಿದೆ. ಒಂದು ರೊಟ್ಟಿಯಾದರೂ ಸಿಕ್ಕಾತು. ಕೂಲಿಹಣದಲ್ಲಿ ಕೃಷಿ ಮಾಡಬಹುದಲ್ಲಾ....'' ಭಾರವಾದ ಹೃದಯದೊಂದಿಗೆ ಹಲ್ಕು ಹಣ ಪಡೆದು ಹೊರನಡೆದ. ಕಷ್ಟಪಟ್ಟು ಮೂವತ್ತು ರೂಪಾಯಿ ಕಂಬಳಿಗಾಗಿ ಜಮೆ ಮಾಡಿದ್ದ. ಈ ದಿನವೇ ಖರೀದಿಸಲು ಹೋಗುವವನಿದ್ದ. ಆದರೆ ಚಿಂತೆಯ ಹೊರೆ ಅವನ ತಲೆ ತಿನ್ನತೊಡಗಿತ್ತು.

* * *

ಪುಷ್ಯದ ಗಾಢ ರಾತ್ರಿ....! ಆಕಾಶವೇ ಅಂಜಿ ಕುಳಿತಂತಿತ್ತು. ಗಾಢಾಂಧಕಾರ. ಹುಲ್ಲಿನ ಹಾಸಿಗೆ ಮೇಲೆ ಹಳೆ ಗಾದಿ ಹಾಸಿ ಹೊದಿಕೆ ಹೊದ್ದುಕೊಂಡು ಹಲ್ಕು ತನ್ನ ಹೊಲದ ಮೂಲೆಯ ಛತ್ರಿ ಗಿಡದ ಕೆಳಗೆ ಮಲಗಿದ್ದ. ಚಳಿಗೆ ನಡುಗುತ್ತಿದ್ದ. ಪಕ್ಕದಲ್ಲಿ ನಾಯಿ 'ಜಬರಾ' ಮುಖವನ್ನು ಹೊಟ್ಟೆಯಲ್ಲಿಟ್ಟುಕೊಂಡು ಚಳಿಗೆ 'ಕುಂಯಿ....ಕೂ' ಎಂದು ಮುಲುಗುತ್ತಿತ್ತು. ಇಬ್ಬರಿಗೂ ನಿದ್ದೆ ಬಂದಿರಲಿಲ್ಲ.

ಹಲ್ಕು ಚಳಿಗೆ ನಡುಗುತ್ತಾ ನಾಯಿಗೆ ಹೇಳಿದ :

''ಏನಂತಿ ಜಬರಾ....? ನಿನಗೂ ಚಳಿ ತಾನೇ....? ಮನೆಯಲ್ಲಿ ಗೋಣಿಚೀಲದ ಮೇಲೆ ಬೆಚ್ಚಗೆ ಇದ್ದವನು ಯಾಕೋ ನನ್ನ ಹಿಂದೆ ಓಡೋಡಿ ಬಂದೆ, ನಾನೇನು ಹಲ್ವಾಪುರಿ ತಿನ್ನೋಕೆ ಬಂದಿದೇನಾ.....? ಚಳಿಯಲ್ಲಿ ಈಗ ಸಾಯಿ ನನ್ಮಗನೇ....''

ಜಬರಾ ಬಾಲ ಅಲ್ಲಾಡಿಸಿ - 'ಕುಂಯಿ ಕೂ...' ಎಂದು ಪ್ರತಿಕ್ರಿಯಿಸಿತು. ಹಾಗೂ ದೀರ್ಘವಾಗಿ ಆಕಳಿಸಿ ಸುಮ್ಮನಾಯಿತು. ನಿದ್ದೆಗೆ ಭಂಗವಾಗದಂತೆ ಮೌನವಹಿಸಿದ ಅದರ ಸ್ವಾಮಿನಿಷ್ಠೆಯನ್ನು ಮೆಚ್ಚಲೇಬೇಕು.

ಹಲ್ಕು ಹೊದಿಕೆಯಿಂದ ಕೈ ಹೊರತೆಗೆದು ಜಬರಾದ ಹೊಟ್ಟೆ ಸವರಿದ.

ಚಳಿ ಸಹನೆ ಆಗುತ್ತಿಲ್ಲವಲ್ಲಾ......

ಪಕ್ಕದ ಹೊಲದಿಂದ ಒಣಗಿದ ಪೊದೆ, ಹುಲ್ಲು ಕಿತ್ತುತಂದ. ಒಂದು ಉದ್ದನೆ ಕೋಲು ಮಾಡಿಕೊಂಡು ತೋಪಿನೆಡೆ ಹೆಜ್ಜೆ ಹಾಕಿದ. ಜಬರಾ ಹತ್ತಿರ ಬಂದು ಬಾಲ ಅಲ್ಲಾಡಿಸಿತು.

''ಈಗಂತು ಸಾಧ್ಯವಿಲ್ಲ ಜಬರಾ, ನಡೆ ತೋಪಿನೆಡೆ ಹೋಗಿ ಮೈ ಬಿಸಿ ಮಾಡಿಕೊಂಡು ಮಲಗೋಣ..... ರಾತ್ರಿ ಇನ್ನೂ ಬಹಳ ಇದೆ.....'' ಜಬರಾ 'ಕುಂಯಿ' ಎಂದು ಮುಲುಗಿ ತನ್ನ ಸಹಮತವನ್ನು ಪ್ರಕಟಿಸಿತು.

ತೋಪಿನಲ್ಲಿ ಅಂಧಕಾರ..... ನಿರ್ದಯಿ ಕುಳಿರ್ಗಾಳಿ ಕತ್ತಲೆಯಲ್ಲಿ ತರಗೆಲೆಗಳ ಮೈ ಸವರುತ್ತಾ ಹೊರಟಿತ್ತು. ಆ ನಿಶ್ಶಬ್ದ ರಾತ್ರಿಯಲ್ಲಿ ವೃಕ್ಷಗಳು ನಿಸ್ಸಹಾಯಕ ಸ್ಥಿತಿಯಲ್ಲಿ ನಿಂತಿದ್ದವು. ಇಬ್ಬನಿಯ ಹನಿಗಳು ಟಪ್ ಟಪ್ ಎಂದು ಕೆಳಗೆ ಉದುರುತ್ತಿದ್ದವು. ಬೀಸಿದ ಗಾಳಿಯಲ್ಲಿ ಇದ್ದಕ್ಕಿದ್ದಂತೆ ಎಲ್ಲಿಂದಲೋ ಮದರಂಗಿಯ ಮಧುರ ಸುವಾಸನೆ ತೇಲಿಬಂತು. ''ಇದೆಂಥ ಸುವಾಸನೆ ಜಬರೂ..... ನಿನ್ನ ಮೂಗಿಗೂ ನಾಟಿತೇನೋ....?'' ಅಲ್ಲಿ ಸಿಕ್ಕ ಮೂಳೆಯೊಂದು ಒಡೆದು ತಿನ್ನುವುದರಲ್ಲಿ ಮುಂದಾಯಿತು.



ಆರಿಸಿದ ನೆಲದ ಮೇಲೆ ಒಣಗಿದ ಹುಲ್ಲು ಹಾಕಿ ಬೆಂಕಿ ಹೊತ್ತಿಸಿದ. ಪೊದೆಯ ಕಟ್ಟಿಗೆ ಜೋಡಿಸಿದ. ಅದರ ಬೆಳಕಿನಲ್ಲಿ ತರಗೆಲೆಗಳ ರಾಶಿಯೇ ಕಂಡಿತು. ತೆಕ್ಕೆಯಲ್ಲಿ ಎತ್ತಿ ತಂದು ಬೆಂಕಿಗೆ ಸುರಿದ. ಈಗ ಚಳಿ ಓಡಿತು ಎಂದುಕೊಂಡ. ಬರಿಗಾಲಲ್ಲಿಯೇ ಅಲ್ಲಲ್ಲಿ ಸುತ್ತಿ ತರಗೆಲೆಗಳ ರಾಶಿ ಹಾಕಿದ. ಬೆಂಕಿಗೆ ಸುರಿದಂತೆ ಜ್ವಾಲೆ ಮರದ ಟೊಂಗೆವರೆಗೂ ಹಬ್ಬಿತು. ಆ ಅಂಧಕಾರದಲ್ಲಿ ಜ್ವಾಲೆಯು ನರ್ತಿಸುವ ಒಂದು ಸಣ್ಣ ನೌಕೆಯಂತೆ ಕಂಗೊಳಿಸಿತು. ಅದರ ಬಿಸಿ ಅನುಭವಿಸುತ್ತಾ ಹಲ್ಕು ಬೆಂಕಿ ಮುಂದೆ ಕುಳಿತ. ಒಳಗಿನ ಚಳಿಯನ್ನು ಹೊರಗಟ್ಟಲು ತನ್ನ ಕಾಲುಗಳನ್ನು ಮುಂದಕ್ಕೆ ಚಾಚಿದ. ಮೈಯನ್ನೂ ಒಡ್ಡಿದ.

''ಜಬರೂ ಏನಂತೀಯಾ....? ಚಳಿ ಹೋಯಿತಲ್ವಾ....?'' ಎಂದ. ಜಬರಾ 'ಕುಂಯಿ' ಎಂದು ಸದ್ದು ಮಾಡಿತು. ''ಅದೆಲ್ಲಿ ಹೋಗುತ್ತೆ.....? ಈ ಉಪಾಯ ಮೊದಲೇ ಹೊಳೆದಿದ್ದರೆ ಇಷ್ಟೊತ್ತು ಚಳಿ ತಿನ್ನೋದು ತಪ್ಪುತ್ತಿತ್ತು....'' ಜಬರಾ ಕತ್ತು ಅಲ್ಲಾಡಿಸಿತು.

''ಸರಿ ಬಾ, ಈ ಉರಿ ಮೇಲಿಂದ ಹಾರೋಣ.... ಯಾರು ಬಚಾವಾಗ್ತಾರೆ ನೋಡೋಣ. ಸುಟ್ಟುಕೊಂಡರೆ ನಾನಂತು ಮದ್ದು ಮಾಡೋನಲ್ಲ...'' ಜಬರಾ ಕೌತುಕದಿಂದ ಉರಿಯುತ್ತಿರುವ ಆ ಅಗ್ನಿಜ್ವಾಲೆಯನ್ನೇ ದಿಟ್ಟಿಸಿತು.

''ಮುನ್ನಿಗೆ ಹೇಳೀಯಾ ಮತ್ತೆ, ಜಗಳ ಮಾಡ್ತಾಳೆ....'' ಎಂದು ಹೇಳಿ ಉರಿಯ ಮೇಲಿಂದ ಜಿಗಿದ. ಹೇಗೋ ಪಾರಾದ. ಚೂರು ಕಾಲಿಗೆ ಬಿಸಿ ತಾಗಿತು. ಜಬರಾ ಜ್ವಾಲೆಯ ಸುತ್ತುಹಾಕಿ ಬಂದು ನಿಂತುಕೊಂಡಿತು.

''ಇದು ಸರಿಯಲ್ಲ, ಬಾ ಇದರ ಮೇಲಿಂದ ಜಿಗೀಬೇಕು. ನೋಡು ನನ್ನ ಹಾಗೆ....'' ಎಂದು ಪುನಃ ಜಿಗಿದ. ಉರಿಯ ಆಚೆಯಿಂದ ಕೂಗಿದ.

* * *

ತರಗೆಲೆಗಳು ಉರಿದು ಖಾಲಿಯಾದವು. ತೋಪಿನಲ್ಲಿ ಪುನಃ ಕತ್ತಲೆ ಕವಿಯಿತು. ಬೂದಿಯ ಕೆಳಗೆ ಸ್ವಲ್ಪ ಸ್ವಲ್ಪ ಬೆಂಕಿ ಇತ್ತು. ಜೋರಾಗಿ ಗಾಳಿ ಬೀಸಿದಾಗ ಅದು ಹೊತ್ತಿಕೊಂಡು ಸಣ್ಣಗೆ ಉರಿದು ಪುನಃ ನಂದಿಹೋಗುತ್ತಿತ್ತು. ಬೆಳಕಿನ ಕಣ್ಣು ಮುಚ್ಚಾಲೆ ನಡೆದಿತ್ತು.

ಹಲ್ಕು ಮತ್ತೆ ಹೊದಿಕೆ ಸರಿಯಾಗಿ ಸುತ್ತಿಕೊಂಡು ಬಿಸಿ ಬೂದಿಯ ಹತ್ತಿರಕ್ಕೆ ಬಂದ. ಈಗಾಗಲೇ ಮೈಕಾಸಿಕೊಂಡ ಖುಶಿಯಲ್ಲಿ ಹಾಡು ಗೊಣಗುಟ್ಟಿದ. ಈ ಬಿಸಿ ಬಹಳ ಹೊತ್ತು ಇರಲಿಲ್ಲ. ಬೆಂಕಿ ಆರಿದಂತೆ ಹೊರಗಿನ ಶೀತವು ನಿಧಾನಕ್ಕೆ ಪ್ರತ್ಯಕ್ಷವಾಯಿತು. ಮೊದಲಿನ ಬಿಸಿ ಕರಗಿ ಆಲಸ್ಯವು ಮೈತಳೆಯಿತು.

ಇದೇ ಹೊತ್ತಿಗೆ ಜಬರಾ ಜೋರಾಗಿ ಬೊಗಳುತ್ತಾ ಹೊಲದ ಕಡೆ ಓಡಿತು. ದನಗಳು ಹೊಲದಲ್ಲಿ ನುಗ್ಗಿರಬೇಕು ಎಂದುಕೊಂಡ. ಸರಿದಾಡುವ ಸದ್ದು ಅವನಿಗೆ ಸ್ಪಷ್ಟವಾಯಿತು. ಒಟ್ಟಿಗೆ ಬೆಳೆ ಮೇಯುತ್ತಾ ಜಿಗಿದಾಡುವುದು ತಿಳಿಯಿತು. ಮೆಲ್ಲುವ ಚರ್‌ಚರ್ ಸದ್ದು ಕೂಡಾ ಕೇಳಿಸತೊಡಗಿತು. ಜಬರಾ ಇದ್ದ ಮೇಲೆ ಯಾವ ದನ ಬರಲು ಸಾಧ್ಯ.... ಎಂದು ಯೋಚಿಸಿ ಸಮಾಧಾನಿಯಾದ. ಆದರೆ ಇದೇನು ಈಗ ಏನೂ ಕೇಳಿಸುತ್ತಿಲ್ಲವಲ್ಲಾ.... ನನಗೇನು ಭ್ರಮೆಯೋ.... ಕಿವಿಗೇನಾಯಿತು ? ಮನಸ್ಸಿನಲ್ಲಿಯೇ ಯೋಚಿಸಿ ಜೋರಾಗಿ ಕೂಗಿದ :

''ಜಬರಾ.... ಜಬರಾ.....''

ಜಬರಾ ಬೊಗಳುತ್ತಲೇ ಇತ್ತು. ಅದು ಅವನ ಹತ್ತಿರ ಬರಲಿಲ್ಲ. ಪುನಃ ಹೊಲ ಮೇಯುವ ಸದ್ದು..... ಅವನಿಗೆ ಅಲ್ಲಿಂದ ಅಲುಗಾಡುವುದು ಕಷ್ಟವೆನಿಸಿತು. ವಿಷ ಕುಡಿದವನಂತಾದ. ಎದ್ದು ದನಗಳನ್ನು ಓಡಿಸಲು ಈ ಥಂಡಿಯಲ್ಲಿ ಸಾಧ್ಯವಿಲ್ಲವೆಂದುಕೊಂಡ. ಆ ಸ್ಥಳದಿಂದ ಕದಲಲು ಯತ್ನಿಸಿದ. ಸಾಧ್ಯವಾಗಲಿಲ್ಲ. ''ಕದಲು...ಕದಲು...'' ತನ್ನಷ್ಟಕ್ಕೆ ಚೀರಿದ.

ಜಬರಾ ಪುನಃ ಬೊಗಳತೊಡಗಿತು. ಪೈರು ಬೆಳೆದುನಿಂತಿದೆ. ಆದರೆ ದುಷ್ಟ ಪಶುಗಳು ಎಲ್ಲಾ ಮೇಯುತ್ತಿವೆಯಲ್ಲಾ..... ಕೈಗೆ ಬಂದ ಪೈರು ಬಾಯಿಗೆ ಇಲ್ಲವಾಯಿತು. ಎಲ್ಲವೂ ಸರ್ವನಾಶವಾಯಿತು. ಏನು ಮಾಡಲಿ...? ಎಂದು ಯೋಚಿಸಿ ದೃಢ ನಿಲುವಿನೊಂದಿಗೆ ಎದ್ದುನಿಂತ. ಎರಡು ಹೆಜ್ಜೆ ಹಾಕಿದನಷ್ಟೆ, ಅಷ್ಟರಲ್ಲಿ ಬೀಸಿ ಬಂದ ಗಾಳಿ ಹಿಮದಂತೆ, ಚೇಳಿನ ಕೊಂಡಿ ಕುಟುಕಿದಂತೆ ಅನುಭವವಾಗಿ ತಕ್ಷಣ ಹಿಂದಕ್ಕೆ ಸರಿದ. ಬೆಂಕಿಯ ಹತ್ತಿರ ಬಂದು ಕುಳಿತ. ಬಿಸಿ ಕಾಯಿಸಿಕೊಳ್ಳಲು ಬೂದಿಯನ್ನು ಕೆದರಿದ. ರಾತ್ರಿಯ ಹೆಪ್ಪುಗಟ್ಟಿದ ಥಂಡಿಗೆ ಅದು ನಂದಿಹೋಗಿತ್ತು. ಬಿಸಿ ನೀಡಲಿಲ್ಲ. ಬೂದಿ ಸರಿಸಿ ಆ ನೆಲದ ಮೇಲೆ ಹೊದಿಕೆ ಹಾಸಿ ಮಲಗಿದ.

ಬೆಳಿಗ್ಗೆ ಎದ್ದಾಗ ಸೂರ್ಯ ಮೇಲೆ ಬಂದಿದ್ದ. ಬಿಸಿಲಾಗಿತ್ತು. ಮುನ್ನಿ ಬಂದು ಹುಡುಕಾಡಿ ಹಲ್ಕುನನ್ನು ಕಂಡು-

''ಇವತ್ತು ಇಡೀ ದಿನ ಮಲಗೋದೇ ಮಾಡ್ತೀರಾ...? ಹೇಗೆ.... ಮಜವಾಗಿ ಮಲಗಲಿಕ್ಕೆ ಮನಸ್ಸಾದರೂ ಹೇಗೆ ಬಂತು....? ಅಲ್ಲಿ ಹೊಲ ನೋಡಿದಿರಾ....? ಎಲ್ಲಾ ಸರ್ವನಾಶವಾಗಿ ಹೋಗಿದೆ.....'' ಎಂದು ಬಾಯಿ ಮಾಡಿದಳು. ಹಲ್ಕು ಎದ್ದು ಕುಳಿತ.

''ಹೊಲದ ಕಡೆ ಹೋಗಿ ಬಂದೆಯಾ...?'' ಎಂದ.

''ಅಲ್ಲಿ ಇನ್ನೇನಿದೆ.....? ಎಲ್ಲಾ ಸರ್ವನಾಶ..... ಎಚ್ಚರ ತಪ್ಪಿ ಹೀಗೆ ಬಿದ್ದುಕೊಳ್ಳಲಿಕ್ಕೆ ಏನಾಗಿತ್ತು...? ಹೀಗೆ ಪ್ರಜ್ಞೆತಪ್ಪಿ ಯಾರಾದರೂ ಮಲಗ್ತಾರಾ....?'' ಹಲ್ಕು ನೆವ ಹುಡುಕಿದ.

''ನಾನು ಸಾಯಿತಾ ಸಾಯಿತಾ ಬದುಕಿದ್ದೀನಿ ಗೊತ್ತಾ....? ನಿನಗೆ ಹೊಲದ ಚಿಂತೆ..... ಹೊಟ್ಟೆಯಲ್ಲಿ ಎಷ್ಟು ಭಯಂಕರ ನೋವು ಇತ್ತು ಅಂತ ನಿನಗೇನು ಗೊತ್ತು ?''

ಇಬ್ಬರೂ ಹೊಲದ ಕಡೆ ಬಂದು ನೋಡಿದರು. ಎಲ್ಲಾ ನೆಲಸಮವಾಗಿತ್ತು. ಹೊಲದ ಮಧ್ಯೆ ಜಬರಾ ಮಾತ್ರ ಅಂಗಾತ ಸತ್ತು ಬಿದ್ದಂತೆ ಮಲಗಿಕೊಂಡಿತ್ತು.

ಮುನ್ನಾಳ ಮುಖ ನಿರಾಶೆಯಲ್ಲಿ ಕುಗ್ಗಿಹೋಗಿತ್ತು. ಎಲ್ಲಿಲ್ಲದ ನಿರಾಶೆ.....! ಆದರೆ ಹಲ್ಕು ಮಾತ್ರ ಪ್ರಸನ್ನಚಿತ್ತನಾಗಿದ್ದ. ಯಾವುದರ ಚಿಂತೆಯೂ ಅವನ ಮುಖದಲ್ಲಿ ಇರಲಿಲ್ಲ. ಮುನ್ನಾ ಚಿಂತಿತಳಾಗಿ- ''ಇನ್ನಂತು ಕೂಲಿ ಮಾಡಿಯೇ ಸಾಲ ತೀರಿಸಬೇಕಾಯಿತು....'' ಎಂದಳು. ಹಲ್ಕು ಮಂದಹಾಸ ಬೀರಿದ. ಖುಷಿಯಲ್ಲಿ ಹೇಳಿದ :

''ರಾತ್ರಿ ಥಂಡಿಯಲ್ಲಿ ಇನ್ನು ಮುಂದೆ ಮಲಗುವುದು ತಪ್ಪಲ್ಲಾ ಬಿಡು....''

ಅನುವಾದ : ಬಸವರಾಜ್ ಮಠಪತಿ (ಕ್ಷಿತಿಜ ಬೀದರ್)
ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಉಪನಿರ್ದೇಶಕರ ಕಛೇರಿ, ರಾಜೇಂದ್ರ ನಗರ, ಶಿವಮೊಗ್ಗ - ೫೭೭ ೨೦೫

# ಸತ್ತಾಗ...?

ನಾನೊಬ್ಬ ಕೂಲಿ ಕಾರ್ಮಿಕ. ಆಸರೆಗೆ ಚಿಕ್ಕದೊಂದು ಮನೆ. ಈ ಆವಾಸ ಮತ್ತು ಸುತ್ತ ಮುತ್ತ ಕೂಡಿ, ಸುಮಾರು ಶ್ರೀಮಂತರ ಅಂಗಳದಷ್ಟು ನನ್ನ ಸ್ವಂತ ಸ್ಥಳ. ಕುಡಿಯಲು ಸದಾ ನೀರಿರುವ ಒಂದು ದೊಡ್ಡ ಗುಳಿ. ಮನೆಯ ಮುಂಭಾಗದಲ್ಲಿ ಐದು ತೆಂಗಿನ ಮರಗಳು.

ನಾನು ಚಿಕ್ಕವನಿರುವಾಗ ನೆರೆಕರೆಯ ಶ್ರೀಮಂತರ ದನ ಮೇಯಿಸುವ ಹೈದ. ಮುಂದೆ ?..... ಇತರ ಸಣ್ಣ ಪುಟ್ಟ ಕೆಲಸಗಳಲ್ಲಿಯೂ ಪರಿಶ್ರಮ ಪಡೆದೆ. ಹೀಗೆ....... ಕೆಲಸದಿಂದ ಕೆಲಸಕ್ಕೆ ಭಡ್ತಿ ಪಡೆದು ನಿಪುಣ ಕೆಲಸಗಾರನಾದೆ. ಈಗ ಯಾವ ಕೆಲಸಕ್ಕೂ..... ನನ್ನನ್ನೇ ಕರೆಯಲು ಪ್ರಾರಂಭಿಸಿದರು.

ನನ್ನಂತಹ ಬಡವರೆಂದರೆ ನನಗೆ ಎಲ್ಲಿಲ್ಲದ ಅನುಕಂಪ. ಬಡವರ ಮನೆಯ ಮಣ್ಣಿನ ಗೋಡೆಯ ಕೆಲಸ, ಕಾರ್ಪೆಂಟರಿ, ಗಾರೆ ಮುಂತಾದ ಎಲ್ಲಾ ಕೆಲಸಗಳನ್ನು ನಾನೇ ಮಾಡುತ್ತಿದ್ದೆ. ನಲವತ್ತೈದು ವರ್ಷ ಹೀಗೇ ಕಳೆಯಿತು. ಈಗ ಪ್ರಾಯ ಅರವತ್ತು ದಾಟಿದೆ. ಏನೋ ಎಲ್ಲಾ ಕಾಯಿಲೆಗಳಂತೆ ! ದುಡಿಯಲು ಆಗುತ್ತಿಲ್ಲ.

ನನಗೆ ಇಬ್ಬರು ಗಂಡು ಮಕ್ಕಳು. ನನ್ನನ್ನೇ ಅಚ್ಚು ಹೊಡೆದು ಹುಟ್ಟಿ ಬೆಳೆದವರು....... ಭೇಷ್ ಕೂಲಿ ಕಾರ್ಮಿಕರು. ಈಗ ನಾನು ಯಾರ ನೆನಪಿನಲ್ಲಿಯೂ ಇಲ್ಲ. ನನ್ನನ್ನು ಕಂಡಾಗ ''ಹೇಗಿದ್ದೀಯಾ ತಿಮ್ಮಣ್ಣ ?'' ಎಂದು ಕೇಳಿ ಮುಖ ತಿರುಗಿಸಿ ಅವರ ಪಾಡಿಗೆ ಹೋಗುತ್ತಿದ್ದರು. ಇದ್ದಕ್ಕಿದ್ದ ಹಾಗೆ ನನಗೆ ಪಾರ್ಶ್ವವಾಯು ಬಡಿದು ಮಲಗಿದಲ್ಲೆ ಆದೆ. ನನ್ನಿಂದ ಗೈಸಿಕೊಂಡವರೆಲ್ಲರೂ ಬಂದರು...... ನೋಡಿದರು...... ಹೋದರು. ನನ್ನ ಮಕ್ಕಳು..... ಅವರು ಹೊರುವಷ್ಟು ಭಾರ ಹೊತ್ತರು. ಆದರೆ...... ಸಾಸಿವೆ ಕಾಳಿನಷ್ಟು ರೋಗ ಗುಣ ಹೊಂದಿಲ್ಲ.

ನನ್ನ ಕೈ ಹಿಡಿದವಳು ನಾನು ರೋಗಕ್ಕೆ ಬಲಿಯಾದ ದಿನ ಅತ್ತು ರಂಪ ಮಾಡಿದ್ದಳು. ಈಗ ಅಷ್ಟಕಷ್ಟೆ ! ಔಷಧಿಯೂ ಈಗ ಕಡಿಮೆಯಾಗಿದೆ. ಈಗ ವೈದ್ಯರ ಫೀಜೂ ದುಬಾರಿಯಂತೆ ! ಗುಣವಾಗದ ಕಾಯಿಲೆ !..... ಸತ್ತ ಮರಕ್ಕೆ ಮಲ್ಲಿಗೆ ಮುಡಿಸಬೇಕೇ ?

ಊರವರ ಕಾಮಗಾರಿಗೆ ನನ್ನ ಮಕ್ಕಳೇ...... ಕೆಲಸಕ್ಕೆ ಕರೆ ಕೊಡಲು ಬಂದವರು ನನ್ನ ಮನೆ ಜಗಲಿ ದಾಟಿ ಒಳಗೆ ಬರುತ್ತಿದ್ದಿಲ್ಲ. ಅವರಿಗೆ ನಾನು ಮಲಗಿದಲ್ಲಿಗೆ ಬರಲು ಅದೇಕೋ.... ಸಂಕೋಚ !

ನನ್ನ ಮನೆಯವರು ಮತ್ತು ಅವರು ಮಾತಾಡುತ್ತಿದ್ದುದು ಕೇಳಿಸುತ್ತಿತ್ತು :

''ಅದೇ ದಿನ ಜೀವ ಹೋಗಿದ್ದರೆ ಕ್ಷೇಮವಿತ್ತು.''

ಕಾಯಿಲೆಯಲ್ಲಿ ಒದ್ದಾಡಿ ಒದ್ದಾಡಿ ದೇಹ ತ್ಯಾಗ ಮಾಡಿಬಿಟ್ಟೆ. ಶರೀರ ತ್ಯಾಗ ಮಾಡಿದ ನನಗೆ ಸುಖ ಸಿಕ್ಕಿತು. ದೇಹ ಬಿಟ್ಟವನು ಮನೆಯಲ್ಲಿಯೇ ಸುತ್ತಾಡುತ್ತಿದ್ದೆ. ಊರಿನ ಜನರೆಲ್ಲಾ ತಪ್ಪದೆ ಬಂದರು. ಕುಟುಂಬದವರು ನನ್ನ ದೇಹವನ್ನು ಮೀಯಿಸುವ ಕಣ್ಣು ಕಟ್ಟಿನ ಕೆಲಸ ಮಾಡಿ ಮುಗಿಸಿದರು. ಜೀವವಿದ್ದಾಗ ಗೇಣು ಬಟ್ಟೆಗೂ ತತ್ವಾರ ! ಬರೇ ಚಾಪೆಯಲ್ಲಿ ಮಲಗಿ ಅರೆ ಶರೀರ ಮುಚ್ಚುವ ಬಟ್ಟೆ ಹೊದ್ದು ಕಾಲ ಕಳೆದಿದ್ದೆ. ಈಗ ಬಂದಿದೆ ಬಟ್ಟೆಗಳ ಮಹಾಪೂರವೇ...... ಈ ನಶ್ವರ ದೇಹಕ್ಕೆ ಬಟ್ಟೆಗಳ ಆವಾರ.

ದೇಹ ತ್ಯಾಗ ಮಾಡುವ ಹೊತ್ತಿಗೆ - ಒಮ್ಮೆಲೆ ನಾಲ್ಕಾರು ಆನೆಗಳು ಎದೆಗೆ ತುಳಿದಂತಾಗಿತ್ತು ! ಗಂಟಲು ಕಟ್ಟಿದಂತಾಗಿ ನೀರಿಗಾಗಿ ಚಡಪಡಿಸಿದೆ. ಯಾರ ಗಮನಕ್ಕೂ ಬಾರದೆ ಹೋಯಿತು. ದಿನವಿಡೀ ದುಡಿದಿದ್ದ ನನ್ನವರು ನಿದ್ದೆ ಹೋಗಿರಬೇಕು...... ಪಾಪ !

ನಶ್ವರ ದೇಹದ ಮುಚ್ಚಿದ ಬಾಯಿಗೆ ಬಂದವರೆಲ್ಲಾ ನೀರು ಹನಿಸಿದರು. ಬಟ್ಟೆ ಹೊದಿಸಿದ ನನ್ನ ದೇಹವನ್ನು ನನ್ನ ಮಕ್ಕಳು ಮತ್ತು ಕುಟುಂಬದವರು ಹೊತ್ತರು. ಮೊದಲೇ ಒಪ್ಪವಾಗಿ ಜೋಡಿಸಿದ ಕಟ್ಟಿಗೆ ತುಂಡುಗಳ ರಾಶಿಯ ಮೇಲೆ ಮಲಗಿಸಿ, ಇಲ್ಲಿಯೂ ಮುಚ್ಚಿದ ಬಾಯಿಗೆ ನೀರು ಸುರಿಯಲು ಮರೆಯಲಿಲ್ಲಾ.



ನನ್ನ ಮಕ್ಕಳು ದೊಂದಿ ಹಿಡಿದು ತಲೆ ಮತ್ತು ಕಾಲಬುಡದಲ್ಲಿ ನಿಂತರು. ಬೆಂಕಿಗೆ ತುಂಬಾ ಭಯಗೊಂಡೆ. ಮಕ್ಕಳು ಬೆಂಕಿ ಕೊಟ್ಟೇಬಿಟ್ಟರು. ಆದರೆ ನನಗೆ ಬಿಸಿ ತಾಗಲೇ ಇಲ್ಲ. ಕೂಡಿದ ಜನರ ಮಧ್ಯೆ ನಾನು ನೋಡುತ್ತಲೇ ಇದ್ದೆ. ನನ್ನ ದೇಹ ಕಟ್ಟಿಗೆಯೊಂದಿಗೆ ಉರಿದು ಬೂದಿಯಾಯಿತು.

ಮೂರನೆಯ ದಿನ ಬೂದಿ ಮುಚ್ಚಿ, ಏಳನೆಯ ದಿನ ಶುದ್ಧದ ಕ್ರಮ ಮುಗಿಸಿದರು. ಹನ್ನೊಂದನೆಯ ದಿನ ಉತ್ತರ ಕ್ರಿಯೆಯ ಅಂಗವಾಗಿ ಭೋಜನದ ಗೌಜಿ.

ಊರವರಿಂದ ನೆಂಟರಿಷ್ಟರಿಂದ ಊಟದ ವ್ಯವಸ್ಥೆಗಾಗಿ ಸರಕು..... ಹೊರೆಹೊರೆಯಾಗಿ ಬಂತು. ನನ್ನ ಆತ್ಮ ತಣಿಪಿಗಾಗಿ ಎಳನೀರು... ಸರಕುಗಳ ಜೊತೆ ಕಳುಹಿಸದೆ ಹೋದರೆ ಸಂಬಂಧಪಟ್ಟವರ ಪ್ರತಿಷ್ಠೆಗೆ ಕಳಂಕವಂತೆ ! ಹಾಗೆ ಬಂದಿರಬಹುದು.

ನನ್ನ ಶರೀರ ಚಾಪೆಯಲ್ಲಿ ಮುದುಡಿ ಬಿದ್ದಿದ್ದಾಗ ತಿಂಡಿ ತಿನಿಸಿಗೆ- ಕುಡಿಯಲು ಎಳನೀರಿಗೆ, ಬಹಳ ಆಸೆ ಪಟ್ಟಿತು. ಈಗ ಎಲ್ಲವೂ ಬಂದಿದೆ. ಯಾರಿಗಾಗಿ ?

ಹದಿನಾರನೆಯ ದಿನ ಮತ್ತಷ್ಟು ಗೌಜಿ. ಹಲವಾರು ಕೋಳಿಗಳು ಸತ್ತು ಉರುಳಿದವು. ಬಾಟ್ಲಿಗಳ ಪೆಟ್ಟಿಗೆಗಳೇ ಹಾಜರಾದವು.

ಹಣವಿಲ್ಲದ ನನ್ನ ಮಕ್ಕಳಿಗೆ ನನ್ನ ಹಿತೈಷಿಗಳು ಸಾಲ ಕೊಟ್ಟಿರಬಹುದು.

ಕೂಡಿದ ಜನ.... ಕುಡಿದರು.... ಉಂಡರು..... ತಿಂದು ನರ್ತಿಸಿದರು. ನನ್ನ ಮಕ್ಕಳೂ ಅವರೊಂದಿಗೆ ಸೇರಿಕೊಂಡರು. ನನ್ನವಳು.... ಜಗಲಿಯ ಮೂಲೆಯಲ್ಲಿ ಕುಳಿತು ''ಮುಸು ಮುಸು'' ನಗುತ್ತಲೇ ಇದ್ದಳು.

ಇದನ್ನೆಲ್ಲ ನನ್ನ ಆತ್ಮವೂ ನೋಡಿ ನಗುತ್ತಿದ್ದಾಗ, ಒಬ್ಬ ಯಕ್ಷಗಾನದ ವೇಷದಲ್ಲಿ ಆಗಮಿಸಿದ. ಅಂದು ನಾನು ಶರೀರ ಬಿಟ್ಟಾಗ ಈತ ಬಂದದ್ದು ನೆನಪಾಯಿತು. ಈಗ ಯಮದೂತನೆಂದು ತಿಳಿದರೂ ''ನೀನೇಕೆ ಇಲ್ಲಿ'' ಎಂದು ಕೇಳಿದೆ.

ಆತ ನನ್ನನ್ನೇ ನೋಡಿ ಹೇಳಿದ ''ನಾನು ಯಮದೂತ.'' ಹಾಗೆ ಹೇಳಿ ನನ್ನ ಸೊಂಟ, ಎದೆ, ಕುತ್ತಿಗೆ ಬಳಸಿಕೊಂಡು ಪಾಶ ಬಿಗಿದು ''ಹುಂ, ಹೊರಡು'' ಎಂದು ಆಜ್ಞೆ ಮಾಡಿದ.

ಗಡಿಬಿಡಿಗೊಂಡು ''ನನಗೆ ನರಕವೋ ! ಅಲ್ಲ ಸ್ವರ್ಗವೋ !'' ಎಂದು ತಡವರಿಸಿಕೊಂಡು ಕೇಳಿಯೇಬಿಟ್ಟೆ.

ಯಮದೂತ ನಕ್ಕು ಹೇಳಿದ - ''ನಿನ್ನಲ್ಲಿ ಹಲವು ಪಾಪಗಳಿದ್ದರೂ, ನೀನು ನಿನಗಾಗಿ ಏನೂ ಮಾಡಿಲ್ಲ. ಇತರರಿಗೆ ಮಾಡಿದ ಸಣ್ಣ ಪುಟ್ಟ ಪಾಪಗಳನ್ನು ಈ ತನಕ ನಿನ್ನ ಹೆಸರಿನ ಧರ್ಮ ಕಾರ್ಯಗಳಲ್ಲಿ ಕಳೆದು, ಉಳಿದ ಪಾಪ.... ನಿನ್ನನ್ನು ದುಡಿಸಿದವರಿಗೇ..... ಬಿಡಲಾಗಿದೆ.''

ಅವನ ಆಜ್ಞೆಯಂತೆ ಉಲ್ಲಾಸ ಪಡೆದು ಅವನ ಹಿಂಬಾಲಿಸಿದೆ. ಅಂಗಳದ ಬದಿಯಲ್ಲಿ ಯಾರಿಗೂ ಕಾಣಿಸದ ವಿಮಾನ ನಿಂತಿತ್ತು. ನಾವಿಬ್ಬರೂ ವಿಮಾನವೇರಿ ಕುಳಿತೆವು. ನಾನು ಕೇಳಿದೆ. ''ನನಗೆ ಸ್ವರ್ಗ ಪದವಿಯಾದರೆ ಈ ಪಾಶವೇಕೆ ?''

ಇದು ಯಮಾಲಯದ ಶಿಸ್ತು. ಈ ವಿಮಾನ ಏರುವವರು ಸಿಗದೆ ಬಹಳ ಸಮಯವಾಗಿದೆ. ಕಡೆಗಾದರೂ..... ನೀನೊಬ್ಬ ದೊರಕಿದೆ. ಸದ್ದಿಲ್ಲದೆ ಹಾರಾಡಿದ ವಿಮಾನ ಯಮ ಕಛೇರಿಯ ಮುಂದೆ ನಿಂತಿತು.

ಕಛೇರಿಯ ಆಸನಗಳಲ್ಲಿ ಹಲವಾರು ಮಂದಿ ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿದ್ದರು. ಈ ಆಸನಗಳ ಮಧ್ಯ ಕುಳಿತಿದ್ದ ಯಮ ತನ್ನ ಆಸನದಿಂದ ಎದ್ದು ಬಂದ. ವಿಮಾನ ಇಳಿಯುತ್ತಿದ್ದ ನನ್ನ ಕೈ ಹಿಡಿದು ಸ್ವಾಗತಿಸಿದ.

ಅಲ್ಲೇ ಇಬ್ಬರು ಕುಳಿತಿದ್ದರು. ನನ್ನನ್ನು ನೋಡಿ ಎದ್ದುನಿಂತರು. ಅವರು ಹಿಡಿದಿದ್ದ ಹೂಮಾಲೆ ನನ್ನ ಕೊರಳಿಗೆ ಹಾಕಿ ವಂದಿಸಿದರು. ನಾನು ಅವರನ್ನೆ ನೋಡಿದೆ. ಅವರಲ್ಲೊಬ್ಬ ಚಲಾವಣೆಯಲ್ಲಿರುವ ನೋಟಿನ ಭಾವಚಿತ್ರದ ಮಹಾತ್ಮಾ ಗಾಂಧಿ. ಕೂಡಲೇ ಅವನಿಗೆ ಸಾಷ್ಟಾಂಗ ಅಡ್ಡ ಬಿದ್ದು ವಂದಿಸಿದೆ. ನನ್ನ ಕೈ ಹಿಡಿದಿದ್ದ ಯಮ, ಇನ್ನೊಬ್ಬನನ್ನು ತೋರಿಸಿ, ಈತನ ಪರಿಚಯವಿಲ್ಲವೇ ?...... ಇವನೇ ಕಾರ್ಲ್ ಮಾರ್ಕ್ಸ್. ಈ ಇಬ್ಬರ ನೀತಿ ನಿಯಮಗಳಲ್ಲಿ ವ್ಯತ್ಯಾಸ ಕಂಡರೂ ಇವರ ನಾಡಿಬಡಿತ ಒಂದೇ..... ಎಂದವನು ನನ್ನ ಕೈ ಕುಲುಕಿಸಿ ಆ ಇಬ್ಬರ ಮಧ್ಯೆ ಕುಳ್ಳಿರಿಸಿದ.

ಡಿ. ಜಿ. ನಕ್ಷ
ಪಡ್ಪಿನಂಗಡಿ, ಅಂಚೆ : ಕರಿಕಳ, ಸುಳ್ಯ, ದಕ್ಷಿಣ ಕನ್ನಡ

# ಮಾನವ ಜೀನೋಮ್ ಯೋಜನೆ

**ಜೀವ** ವಿಜ್ಞಾನಿಗಳು ಮಾನವ ತಳಿಗುಣದ (ಜೆನೆಟಿಕ್) ಸುಮಾರು ೯೭ ಪ್ರತಿಶತದಷ್ಟು ಭಾಗದ ಜೀನ್ ನಕ್ಷೆ ತಯಾರಿಸಿದ್ದಾರೆ. ಅದನ್ನು ಮಾನವ ಜೀವದ ಪುಸ್ತಕವೆನ್ನಲಾಗಿದೆ. ಈ ನಕ್ಷೆ ತಯಾರಿಸಿದ ಹ್ಯೂಮನ್ ಜೀನೋಮ್ ಪ್ರಾಜೆಕ್ಟ್ ಅನ್ನು ಅತಿ ಬೃಹತ್ತಾದ, ಅತ್ಯಧಿಕ ವೆಚ್ಚದ, ಅತ್ಯಂತ ಮಹತ್ವಾಕಾಂಕ್ಷೆಯ ಪ್ರಾಜೆಕ್ಟ್ ಎನ್ನಲಾಗಿದೆ. ''ಮಾನವ ಚಕ್ರ ಅಥವಾ ಗಾಲಿ ಕಂಡುಹಿಡಿದದ್ದಕ್ಕೆ ನೀಡಿದ ಮಹತ್ವವೇ ಈ ಪ್ರಾಜೆಕ್ಟ್‌ಗೂ ಸಲ್ಲಬೇಕು''. ''ಪರಮಾಣು ಶಕ್ತಿ, ಹಾಗೂ ಜೈವಿಕ ಪ್ರತಿರೋಧಕ (ಆ್ಯಂಟಿ ಬಯಾಟಿಕ್ಸ್) ಗಳ ಸಂಶೋಧನೆಯ ನಂತರ ಇದೊಂದು ಅತ್ಯಂತ ಮಹತ್ವಪೂರ್ಣ ಹೆಜ್ಜೆ''. ''ಈ ಅಪೂರ್ವ ಸಾಧನೆ ಕ್ಯಾನ್ಸರ್‌ನಿಂದ ಹಿಡಿದು ಭಿನ್ನತೆಯವರೆಗೆ, ಮತ್ತು ವೃದ್ಧಾಪ್ಯದ ಪರಿಸ್ಥಿತಿಗಳ ರೋಗನಿದಾನ, ರೋಗ ತಡೆಯುವಿಕೆ ಹಾಗೂ ಚಿಕಿತ್ಸಾವಿಧಾನಗಳಲ್ಲಿ ಕ್ರಾಂತಿಯನ್ನೇ ತರಲಿದೆ''. ಇತ್ಯಾದಿ ಹೇರಳ ಹೇಳಿಕೆಗಳೂ ಕೇಳಿಬರುತ್ತಿವೆ.

ಈ ಎಲ್ಲ ಕೋಲಾಹಲದ ಮಧ್ಯೆ, ತಮಾಷೆಗೆಂದು ಏನಿದು ಹ್ಯೂಮನ್ ಜೀನೋಮ್? ಏನಿದರ ಪ್ರಾಜೆಕ್ಟ್? ಯಾಕೆ ಇದನ್ನು ಅತಿದೊಡ್ಡ ವೈಜ್ಞಾನಿಕ ಸಾಧನೆ ಎನ್ನಲಾಗುತ್ತಿದೆ? ಈ ಪ್ರಶ್ನೆಗಳಿಗೆ ಉತ್ತರ ಹುಡುಕೋಣ.

ಈ ಸಾಧನೆಯ ಜಾಗತಿಕ ಘೋಷಣೆಯಾದದ್ದು ಇದೇ ವರ್ಷ ಜೂನ್ ೨೬ರಂದು. ಆ ದಿನ ಅಮೆರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್ ಮತ್ತು ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್ ಅಂತರ್ ಅಟ್ಲಾಂಟಿಕ್ ಪತ್ರಿಕಾಗೋಷ್ಠಿಯೊಂದನ್ನುದ್ದೇಶಿಸಿ ಮಾತನಾಡಿ, ಅಂತರ್‌ರಾಷ್ಟ್ರೀಯ ಸರಕಾರಿ ನಿಧಿಯಿಂದ ಘೋಷಿತ ಹ್ಯೂಮನ್ ಜೀನೋಮ್ ಪ್ರಾಜೆಕ್ಟ್ ಮತ್ತು ಅಮೆರಿಕದ ಖಾಸಗಿ ಕಂಪನಿ ಸೆಲೆರಾ ಜೀನೋಮಿಕ್ಸ್ ಜೊತೆಯಾಗಿ, ಮೂನ್ನೂರಿಪ್ಪತ್ತು ಕೋಟಿ ರಾಸಾಯನಿಕ 'ಅಕ್ಷರ'ಗಳಲ್ಲಿ ಶೇ ೯೭ರಷ್ಟಕ್ಕೆ 'ಕಾರ್ಯಕಾರಿ ಕರಡು ಪ್ರತಿ' ತಯಾರಿಸಿದೆಯೆಂದು ಘೋಷಿಸಿದರು. ಈ ಕರಡು ಪ್ರತಿಯಲ್ಲಿ ಮಾನವ ಜೀವದ ಎಲ್ಲ ಜೈವಿಕ ರಹಸ್ಯಗಳಿವೆ ಯೆಂದರು. ಇಡೀ ಮಾನವೀಯತೆ ಇದರಿಂದ ದಂಗಾಯಿತು.

## ಏನದು ಮಾನವ ಜೀನೋಮ್?

ಎಲ್ಲ ಜೀವಿಗಳಂತೆ ಮಾನವರೂ ಜೀವಕೋಶಗಳಿಂದ ಮಾಡಲ್ಪಟ್ಟಿದ್ದಾರೆ. ಪ್ರತಿಯೊಂದು ಜೀವಕೋಶದ ಕೇಂದ್ರಭಾಗದಲ್ಲಿನ ಕೋಶಕೇಂದ್ರ, ಅಥವಾ ನ್ಯೂಕ್ಲಿಯಸ್ ನೊಳಗೆ ಸೂಕ್ಷ್ಮವಾದ, ದಾರದಂಥ ೪೬ ಕ್ರೋಮೋಸೋಮ್ ಅಥವಾ ವರ್ಣ ತಂತುಗಳಿವೆ. ಇವುಗಳಲ್ಲಿರುವುದು ಆನುವಂಶಿಕತೆ. ಆನುವಂಶಿಕತೆಯನ್ನು ನಿರ್ಧರಿಸುವುದು ಡಿ ಆಕ್ಸಿ ರೈಬೋ ನ್ಯೂಕ್ಲಿಯಿಕ್ ಆ್ಯಸಿಡ್ (ಸಂಕ್ಷಿಪ್ತವಾಗಿ ಡಿ.ಎನ್.ಎ.). ವರ್ಣತಂತುಗಳಲ್ಲಿ ಡಿ.ಎನ್.ಎ. ಒತ್ತೊತ್ತಾಗಿ ಸುರುಳಿಯಾಕಾರದಲ್ಲಿ ನಿಂಬೆ ಸುತ್ತಿದಂತೆ ಜೋಡಿಸಲ್ಪಟ್ಟಿದೆ. ಇದರ ರಚನೆಯನ್ನು ಸುರುಳಿಯೊಳಗಣ ಸುರುಳಿ (ಡಬ್ಬಲ್ ಹೆಲಿಕ್ಸ್) ಎನ್ನುತ್ತಾರೆ. ಎರಡೆಳೆಯ, ತಿರುಚಿದ ಏಣಿಯ ಆಕಾರದಲ್ಲಿರುವ ಡಿ.ಎನ್.ಎ.ಯ ರಚನೆಯನ್ನು ೧೯೫೩ರಲ್ಲಿ ಕಂಡುಹಿಡಿದ ಜೇಮ್ಸ್ ವ್ಯಾಟ್ಸನ್ ಮತ್ತು ಫ್ರಾನ್ಸಿಸ್ ಕ್ರಿಕ್, ಡಿ.ಎನ್.ಎ. ಅಣುವಿನಲ್ಲಿ ಅಡೆನೀನ್, ಗ್ವಾನೀನ್, ಸೈಟೊಸಿನ್ ಮತ್ತು ಥೈಮಿನ್ ಹೆಸರಿನ ನಾಲ್ಕು ರಾಸಾಯನಿಕ ಪ್ರತ್ಯಾಮ್ಲಗಳಿವೆ ಯೆಂದರು. ಅವನ್ನು ಕಿರಿದಾಗಿ ಎ, ಜಿ, ಸಿ ಮತ್ತು ಟಿ ಎಂದು ಹೆಸರಿಸಲಾಯ್ತು. ಇವೇ ಡಿ.ಎನ್.ಎ. ನ ಮೂಲಾಕ್ಷರ ಗಳಾದವು. ಅವನ್ನು ರಾಸಾಯನಿಕ ಅಕ್ಷರಗಳೆನ್ನಬಹುದು. ಇಡೀ 'ಜೀವದ ಪುಸ್ತಕ'ವನ್ನು ಈ ನಾಲ್ಕು ರಾಸಾಯನಿಕ ಮೂಲಾಕ್ಷರ ಬಳಸಿ ಬರೆಯಲಾಗಿದೆ. ಈ ಅಕ್ಷರಗಳಿಂದ ರೂಪಿತ ಶಬ್ದ ಅಥವಾ ವಾಕ್ಯಗಳನ್ನೆ 'ಜೀನ್' (ಗುಣಾಣು) ಎನ್ನುವುದು. ಇವು ಸೂಚನೆ ಅಥವಾ ಮಾಹಿತಿಯ ಮೂಲ ಘಟಕಗಳಾಗಿದ್ದು, ವ್ಯಕ್ತಿ ಹೇಗಿರುತ್ತಾನೆ (ಳೆ) ಹಾಗೂ ಪಚನಕ್ರಿಯೆ, ಬೆಳವಣಿಗೆ, ರೋಗಗಳನ್ನೆದುರಿಸುವುದು ಇತ್ಯಾದಿ ಅಗತ್ಯ ಕಾರ್ಯಗಳನ್ನು ಹೇಗೆ ನಿರ್ವಹಿಸುತ್ತಾನೆ (ಳೆ) ಎಂಬುದನ್ನು ನಿರ್ಧರಿಸುತ್ತವೆ. ಈ ಎಲ್ಲ ಮಾಹಿತಿ ಮೂರು, ಮೂರು ಅಕ್ಷರಗಳ ಗುಂಪುಗಳಾಗಿ ವಿಂಗಡಿಸಿದ, ಕೋಡ್ ಅಥವಾ ಸಂಕೇತಾಕ್ಷರದ ರೂಪದಲ್ಲಿರುತ್ತದೆಯಾದ್ದರಿಂದ ಇದನ್ನು ಟ್ರಿಪ್ಲೇಟ್ ರೋಡ್ (ತ್ರಿವಳಿ ಸಂಕೇತಾಕ್ಷರ) ಎನ್ನುವುದು. ಹೀಗೆ ಮಾನವಕೋಶದ ೪೬ ವರ್ಣತಂತುಗಳಲ್ಲಿ ಆನುವಂಶಿಕ ತತ್ವ ಡಿ. ಎನ್. ಎ. ನ ಭಾಗವಾಗಿ ತ್ರಿವಳಿ ಸಂಕೇತಾಕ್ಷರಗಳಲ್ಲಿ ಬರೆಯಲ್ಪಟ್ಟು ಸಂಪೂರ್ಣ ಮಾಹಿತಿಯ ಮೊತ್ತವೇ 'ಜೀನೋಮ್'. ಪೂರ್ತಿ ಜೀನೋಮ್‌ನಲ್ಲಿರುವುದು ಸುಮಾರು ೩೨೦ ಕೋಟಿ ರಾಸಾಯನಿಕ ಅಕ್ಷರಗಳು; ಆದರೆ ಕೇವಲ ಸುಮಾರು ೫೦ ಸಾವಿರ ಗುಣಾಣುಗಳು (ಜೀನ್‌ಗಳು) ಅಂದರೆ ಒಟ್ಟು ಜೀನೋಮ್‌ನಲ್ಲಿ ಶೇಕಡಾ ೯೭ರಷ್ಟು ಭಾಗಕ್ಕೆ ನಿರ್ದಿಷ್ಟ ಕಾರ್ಯವಿಲ್ಲ. ಕೇವಲ ೩ ಪ್ರತಿಶತದಷ್ಟು ಭಾಗದಲ್ಲಿ ಮಾತ್ರ ನಿರ್ದಿಷ್ಟ ಗುಣಾಣುಗಳಿವೆ. ರಹಸ್ಯ ಸಂಕೇತಾಕ್ಷರಗಳಲ್ಲಿರುವ ಇವುಗಳ ರಹಸ್ಯ ಬಿಚ್ಚಿಟ್ಟು ಪ್ರತಿ ಗುಣಾಣುವನ್ನು ಗುರುತಿಸಿ, ಅದರ ಕಾರ್ಯವನ್ನು ಅರಿಯುವುದೇ 'ಜೀನೋಮ್ ಪ್ರಾಜೆಕ್ಟ್' ನ ಉದ್ದೇಶ.

ಹತ್ತು ವರ್ಷಗಳ ಹಿಂದೆ ಶುರುವಾದ ಈ ಪ್ರಾಜೆಕ್ಟ್‌ನಲ್ಲಿ ಭಾಗವಹಿಸಿದ್ದು ಆರು ದೇಶಗಳು. ಸುಮಾರು ೨೦ಕ್ಕಿಂತಲೂ ಹೆಚ್ಚು ಪ್ರಯೋಗಾಲಯಗಳಲ್ಲಿ ಇದಕ್ಕಾಗಿ ಶ್ರಮಿಸಿದ್ದು ಸಾವಿರಕ್ಕಿಂತ ಅಧಿಕ ಜೀವ ವಿಜ್ಞಾನಿಗಳು, ಕಂಪ್ಯೂಟರ್ ತಜ್ಞರು ಮತ್ತು ತಂತ್ರಜ್ಞರು. ಈವರೆಗೆ ಆದ ಖರ್ಚು ಸುಮಾರು ಒಂದು ಸಾವಿರದಾ ಐವತ್ತು ಕೋಟಿ ರೂಪಾಯಿ ಗಳು. ಇದಕ್ಕಾಗಿ ಬಳಸಿದ ವಿಧಾನವೂ ಹೊಸರೀತಿ ಯದಾಗಿತ್ತು. ಈ ಕಾರ್ಯ ಪೂರೈಸಲು, ನಾ ಮೊದಲು, ತಾ ಮೊದಲು ಎಂದು ಪೈಪೋಟಿಯಲ್ಲಿದ್ದ ಎರಡೂ ತಂಡಗಳು ಜೂನ್ ೨೬ರಂದು ತಾವು ಏಕಕಾಲಕ್ಕೆ ಕಾರ್ಯರೂಪಿ ಕರಡು ಪ್ರತಿ ತಯಾರಿಸಿದುದನ್ನು ಘೋಷಿಸಿದ್ದವು.

ಘೋಷಣೆಯ ಬೆನ್ನಲ್ಲೇ, ಇನ್ನು ಮುಂದೆ ಆನುವಂಶಿಕ ಕಾಯಿಲೆಗಳನ್ನು, ಗುಣಪಡಿಸಲಾಗದ (ಕ್ಯಾನ್ಸರ್, ಏಯ್ಡ್ಸ್ ಇತ್ಯಾದಿ) ರೋಗಗಳನ್ನು ಗುಣಪಡಿಸಬಹುದು, ಈ ಮಹತ್ವ ಪೂರ್ಣ ಮಾಹಿತಿಯನ್ನು ಆಧರಿಸಿ ಸುಧಾರಿತ ಔಷಧಿಗಳನ್ನು ವ್ಯಕ್ತೀಕೃತ ಚಿಕಿತ್ಸಾ ಕ್ರಮಗಳನ್ನು ರೂಪಿಸಬಹುದು. ಉತ್ತಮ ಗುಣಗಳುಳ್ಳ, ಸ್ಫುರದ್ರೂಪಿ ಸಂತಾನವನ್ನು ವಿನ್ಯಾಸ ಗೊಳಿಸಬಹುದು, ಹುಟ್ಟಲಿರುವ ಮಗುವಿಗೆ ಬರಬಹುದಾದ ಕಾಯಿಲೆಗಳನ್ನು ಮುಂದಾಗಿಯೇ ಅರಿತು ಅವನ್ನು ತಡೆಗಟ್ಟ ಬಹುದು ಎನ್ನುವ ಹಲವು ಸಾಧ್ಯತೆಗಳನ್ನು ಪಟ್ಟಿ ಮಾಡಲಾಯ್ತು. ಈ ಸಾಧ್ಯತೆಗಳನ್ನರಿಯಲು ಗುಣಾಣುಗಳ ಕಾರ್ಯ ವಿಧಾನವನ್ನು ತಿಳಿದುಕೊಳ್ಳುವುದಗತ್ಯ. ನಮ್ಮ ವಿವಿಧ ಅಂಗಗಳು ಹಾಗೂ ರಚನೆ ಪ್ರೋಟೀನು (ಸಸಾರಜನಕ) ಗಳಿಂದಾಗಿವೆ: ನಮ್ಮ ಚರ್ಮ ಕೆರಾಟಿನ್‌ನಿಂದ, ಸ್ನಾಯು ಹಾಗೂ ಮೃದ್ವಸ್ತಿಗಳು ಕೊಲ್ಯಾಜೆನ್‌ನಿಂದ ಮಾಡಲ್ಪಟ್ಟಿವೆ. ಕೆಲ ಪ್ರೋಟೀನ್‌ಗಳು ಎನ್‌ಜೈಮು ಅಥವಾ ಕಿಣ್ವ ರೂಪದಲ್ಲಿ ಉಪಾಪಚಯ ಕ್ರಿಯೆಗಳಲ್ಲಿ ನೆರವಾಗುತ್ತವೆ. ಪ್ರೋಟೀನುಗಳು ಅಮೈನೋ ಆಮ್ಲಗಳ ಸರಪಳಿಯಂತಿದ್ದು, ಪ್ರತಿ ಅಮೈನೋ ಆಮ್ಲ ಸರಪಳಿಯ ಕೊಂಡಿಯಾಗಿರುತ್ತದೆ. ಸರಪಳಿಯಲ್ಲಿ ಅಮೈನೋ ಆಮ್ಲದ ಸ್ಥಾನವನ್ನಾಧರಿಸಿ ಪ್ರೋಟೀನ್‌ನ ರಚನೆ ಮತ್ತು ಕಾರ್ಯಗಳು ವ್ಯತ್ಯಾಸ ಗೊಳ್ಳುತ್ತವೆ. ಈ ಮೊದಲೇ ವಿವರಿಸಿರುವಂತೆ ಪ್ರತಿ ಜೀನ್ ಅಥವಾ ಗುಣಾಣು ಹಲವಾರು ತ್ರಿವಳಿ ಕೋಡ್ (ಸಂಕೇತಾಕ್ಷರ)ಗಳ ಕ್ರಮಾನುಗತಿ. ಇದರಲ್ಲಿ ಪ್ರತಿಯೊಂದು ತ್ರಿವಳಿಯೂ ಒಂದು ಅಮೈನೋ ಆಮ್ಲದ ಜೋಡಿಸುವಿಕೆ ಯನ್ನು ನಿರ್ದೇಶಿಸುತ್ತದೆ. ಅರ್ಥಾತ್ ಪ್ರತಿ ಜೀನೂ ಒಂದು ನಿರ್ದಿಷ್ಟ ಉದ್ದೇಶದ ಪ್ರೋಟೀನ್ ತಯಾರಿಕೆಯ ಸಂಕೇತಾಕ್ಷರದ ಸೂಕ್ತ ಹಾಗೂ ಸೂಚನೆಗಳ ಸಮುಚ್ಚಯ. ಹೀಗೆ ಪ್ರತಿ ಜೀನೂ ಪ್ರೋಟೀನ್ ನಿರ್ಮಾಣವನ್ನು ನಿರ್ದೇಶಿಸಿ ಆ ಪ್ರೋಟೀನ್‌ನ ಮೂಲಕ ಕಾರ್ಯನಿರ್ವಹಿ ಸುತ್ತದೆ. ಜೀನೊಂದರ ಕೋಡ್‌ನ ತ್ರಿವಳಿ ಅಕ್ಷರಗಳಲ್ಲಿ ವ್ಯತ್ಯಾಸವಾದರೆ ಅದು ನಿಗದಿತ ಪ್ರೋಟೀನ್‌ನ ಬದಲಿಗೆ ದೋಷಯುಕ್ತ ಪ್ರೋಟೀನ್‌ನ್ನು ಉತ್ಪಾದಿಸುವುದರಿಂದ ಆ ಮೂಲ ಪ್ರೋಟೀನ್‌ನ ಕಾರ್ಯಕ್ಕೆ ಧಕ್ಕೆಯಾಗುತ್ತದೆ. ಪರಿಣಾಮ ಕಾಯಿಲೆ. ಇದು ವಂಶವಾಹಿ ಕಣದಲ್ಲಿನ ಬದಲಾವಣೆಯಾದ್ದರಿಂದ ಕಾಯಿಲೆ ವಂಶಗತವಾಗುತ್ತದೆ.

ಡಾ|| ಶರಣಬಸವೇಶ್ವರ ಅಂಗಡಿ

ಒಂದು ಆರೋಗ್ಯವಂತ ಗುಣಾಣು (ಜೀನ್)ವಿನ ಕೋಡ್‌ಗಳನ್ನು ಬಿಡಿಸಿ ನೋಡಿ ಅದರ ಕಾರ್ಯ ವೈಖರಿಯನ್ನರಿತರೆ, ಸಂಕೇತಗಳ ಬದಲಾವಣೆಗಳಿಂದುಂಟಾಗುವ ಕಾಯಿಲೆಗಳನ್ನು ವಾಸಿಮಾಡಬಹುದು. ದೋಷಮಯ ಸಂಕೇತವನ್ನು ಪುನಃ ಮೊದಲಿದ್ದ ಹಾಗೇ ತಿದ್ದುವುದೇ ಇಲ್ಲಿನ ಚಿಕಿತ್ಸಾವಿಧಾನ. ಇದು ಮಾನವ ಜೀನೋಮ್ ಪರಿಯೋಜನೆಯ ಮುಖ್ಯ ಉದ್ದೇಶಗಳಲ್ಲೊಂದು. ಆದರೆ ಈ ಉದ್ದೇಶ ಕೈಗೂಡುವುದು ಅಷ್ಟೊಂದು ಸುಲಭವಲ್ಲ, ಹಲವಾರು ಎಡರು ತೊಡರುಗಳಿವೆ.

ಮೊದಲನೆಯದಾಗಿ, ಪೂರ್ತಿ ಜೀನೋಮ್‌ನ ಮುನ್ನೂರಿಪ್ಪತ್ತು ಕೋಟಿ ಅಕ್ಷರಗಳೂ, ಎಟಿಜಿಸಿಸಿಜಿಸಿಜಿಜಿಟಿಸಿಸಿ....ಹೀಗೇ ಮುಂದುವರಿಯುತ್ತವೆ. ಎಲ್ಲಿಯೂ ಅರ್ಧವಿರಾಮ, ಪೂರ್ಣ ವಿರಾಮಗಳೇ ಇಲ್ಲ. ಯಾವುದು ಯಾವ ಸಂಕೇತ, ಎಷ್ಟು ಸಂಕೇತಗಳು ಸೇರಿ ಯಾವ ಜೀನ್ ಆಗಿದೆಯೆಂಬುದನ್ನರಿಯುವುದೇ ಕಷ್ಟ.

ಹೇಗೋ ಏನೋ ಮಾಡಿ ಗುಣಾಣುವನ್ನು ಗುರುತಿಸಿದರೂ ಅದರ ಕಾರ್ಯವೈಖರಿಯನ್ನು ಅರ್ಥ ಮಾಡಿಕೊಳ್ಳುವುದು ಇನ್ನೂ ಪ್ರಯಾಸದ ಕೆಲಸ. ಯಾಕೆಂದರೆ ಅದರ ಕಾರ್ಯ ಹಾಗೂ ಅಭಿವ್ಯಕ್ತಿಯನ್ನು ನಿಯಂತ್ರಿಸುವುದು ಪರಿಸರ. ಇದೇ ನೇಚರ್-ನರ್ಚರ್ (ಪ್ರಕೃತಿ-ಪೋಷಣೆ) ತತ್ವ. ಈ ಥಿಯರಿಯ ಪ್ರಕಾರ ಗುಣಾಣು ಮತ್ತು ಪರಿಸರದ ಪರಸ್ಪರ ಕ್ರಿಯೆ ಅಥವಾ ಅವುಗಳ ನಡುವಣ ಅಂತರ ಕ್ರಿಯೆಯಿಂದ ಗುಣ ರೂಪುಗೊಳ್ಳುತ್ತದೆ. ಇಲ್ಲಿ ಜೀನ್ ಒಂದು, ಸೂಚನೆಗಳ ಮೊತ್ತ ಅಷ್ಟೇ. ಆದರಲ್ಲಿನ ಸೂಚನೆಗಳು ಪ್ರಕಟಗೊಳ್ಳಬೇಕಾದರೆ ಪರಿಸರ ಬೇಕೇ ಬೇಕು. ಜೀನಿನ ತಕ್ಷಣದ ಪರಿಸರ (ಅದರ ಎಡಬಲದ ಜೀನಿ, ವರ್ಣತಂತು, ಇತರೆ ವರ್ಣ ತಂತುಗಳು, ಕೋಶಕೇಂದ್ರ, ಒಟ್ಟು ಜೀವಕೋಶ) ಹಾಗೂ ಸನಿಹದ ಪರಿಸರಗಳೆರಡೂ ಗುಣದ ಅಭಿವ್ಯಕ್ತಿಯನ್ನು ನಿಯಂತ್ರಿಸುತ್ತವೆ. ಇಲ್ಲಿ ಗುಣಾಣು ಪ್ರಕೃತಿಯ ಪಾತ್ರ ವಹಿಸಿದರೆ, ಪೋಷಣೆಯ ಹೊಣೆ ಪರಿಸರದ್ದು.

ಉದಾಹರಣೆಗೆ, ಬೆಂಕಿಕಡ್ಡಿ ಬೆಂಕಿ ಹುಟ್ಟಿಸಬಲ್ಲದು. ಆದರೆ ಅದನ್ನುರಿಸಲು ಬೆಂಕಿಪೆಟ್ಟಿಗೆಯ ಪಕ್ಕೆಯ ಘರ್ಷಣೆ ಅಗತ್ಯ. ಅದು ಹೊತ್ತಿಕೊಂಡು ಉರಿಯಲು ಗಾಳಿಯಲ್ಲಿ ಆಮ್ಲಜನಕವಿರಬೇಕು. ಅದು ಜ್ವಲಿಸಲು ಪ್ರತಿಕೂಲ ಪರಿಸ್ಥಿತಿಗಳಿರಕೂಡದು. ಗುಣಾಣುಗಳೂ ಹೀಗೇ ತಮ್ಮ ಪ್ರಭಾವ ತೋರಲು ಅನುಕೂಲಕರ ಪರಿಸ್ಥಿತಿ ಹಾಗೂ ಚಟುವಟಿಕೆ ಮುಂದುವರಿಸಲು ಪ್ರಶಸ್ತ ಪರಿಸರ ಎರಡೂ ಅವಕ್ಕೆ ಬೇಕು. ಅಹಿತಕರ ವಾತಾವರಣದಲ್ಲಿ ಅವು ಯದ್ವಾತದ್ವಾ ವರ್ತಿಸುತ್ತವೆ. ಕ್ಯಾನ್ಸರ್ ಇಂಥ ವರ್ತನೆಗೆ ಒಂದು ನಿದರ್ಶನ. ಸುಮಾರು ೨೦೦ ಬಗೆಯ ಕ್ಯಾನ್ಸರ್‌ಗಳನ್ನು ಗುರುತಿಸಲಾಗಿದೆ.

ನಮ್ಮ ಸೃಷ್ಟಿಯ ಮೂಲವನ್ನರಿಯಲು ನೆರವಾಗಬಲ್ಲ ಜೀನೋಮ್‌ನ ಮಾಹಿತಿ ನಮಗೆ ಬರಬಹುದಾದ ಕಾಯಿಲೆಗಳನ್ನೂ ಮುಂದಾಗಿಯೇ ತಿಳಿಯಲೂ ಸಹಾಯಕ. ಆದರೆ ಇದರಿಂದ ಅನುಕೂಲಗಳಿಗಿಂತಲೂ ಅನಾಹುತಗಳೇ ಹೆಚ್ಚಾಗಬಹುದು. ಒಬ್ಬ ವ್ಯಕ್ತಿಗೆ ತಾನು ಮುಂದೆ ಮಾರಕ ಕಾಯಿಲೆಗೆ ಬಲಿಯಾಗಲಿದ್ದೇನೆ, ಅದಕ್ಕೆ ಚಿಕಿತ್ಸೆಯೇ ಇಲ್ಲವೆಂಬುದು ಮುಂದಾಗಿಯೇ ತಿಳಿದರೆ ಏನಾದೀತು ಯೋಚಿಸಿ.

ಪರಿಪೂರ್ಣ ಮಕ್ಕಳನ್ನು ಪಡೆಯುವ ಆಸೆಯಿಂದ ದಂಪತಿಗಳು ವಿನ್ಯಾಸಗೊಳಿಸಿದ ಸಂತಾನಕ್ಕಾಗಿ ಪ್ರಯತ್ನಿಸಿದರೆ ಆಗ ತಳಿಸೂತ್ರ ತಿದ್ದಿದ ಹೊಸ ಜನಾಂಗವೇ ಸೃಷ್ಟಿಯಾಗಬಹುದು. ಇದು ಪ್ರಾಕೃತಿಕ ಜನಾಂಗದ ಮೇಲೆ ತನ್ನ ಪರಮಾಧಿಕಾರ ಸ್ಥಾಪಿಸಲು ಯತ್ನಿಸಬಹುದು. ಹೊಸದೊಂದು ವರ್ಣಭೇದಕ್ಕೆ ಇದು ನಾಂದಿಯಾಗಬಹುದು.

ತಳಿನಕ್ಷೆಯಿಂದ, ಮುಂದೆಂದೋ ಬರುವ ಕಾಯಿಲೆಯನ್ನು ನೆವವಾಗಿರಿಸಿಕೊಂಡು ಇಂದೇ ಉದ್ಯೋಗ




ನೀಡದಿದ್ದರೆ ಅಥವಾ ಉದ್ಯೋಗದಿಂದ ತೆಗೆದುಹಾಕಿದರೆ ಹೊಸ ಸಮಸ್ಯೆಗಳುದ್ಭವಿಸುತ್ತವೆ. ತಳಿಸೂತ್ರದ ಪಕ್ಷಪಾತವನ್ನು ತಡೆಯುವ ಯತ್ನಗಳು ಅಮೆರಿಕಾದಲ್ಲಿ ಆರಂಭವಾಗಿವೆ. ಅಲ್ಲಿನ ೩೯ ರಾಜ್ಯಗಳು ಆರೋಗ್ಯ ವಿಮೆ ಮಾಡುವಾಗ ತಳಿಸೂತ್ರದ ಪರೀಕ್ಷೆ ಮಾಡುವುದನ್ನು ನಿಷೇಧಿಸಿವೆ, ಹಾಗೂ ಹದಿನೈದು ರಾಜ್ಯಗಳು ಉದ್ಯೋಗ ನೇಮಕಾತಿಗಳಲ್ಲಿ ತಳಿಸೂತ್ರಾಧರಿತ ಪಕ್ಷಪಾತದ ಮೇಲೆ ನಿಷೇಧ ಹೇರಿವೆ.

ಮಾನವ ಜೀನೋಮ್ ಪರಿಯೋಜನೆಯ ಈ ಹಂತ ಆರಂಭದ ಆರಂಭ. ಇದು ಕೇವಲ ಅಕ್ಷರಗಳ ಸರಣಿಯಷ್ಟೇ. ಇನ್ನೂ ಅವನ್ನು ತ್ರಿವಳಿ ಕೋಡ್‌ಗಳಾಗಿ ವಿಂಗಡಿಸಿ ಅವಕ್ಕೆ ಟಿಪ್ಪಣಿ ಬರೆಯಬೇಕಿದೆ. ಈಗಿರುವ ಮಾಹಿತಿ ಬರೀ ಅಂಕಗಳಿರುವ ಆದರೆ ಹೆಸರುಗಳೇ ಇಲ್ಲದ ಟೆಲಿಫೋನ್ ಡೈರೆಕ್ಟರಿಯಂತಿದೆ. ಟಿಪ್ಪಣಿ ಬರೆದ ಮೇಲೆ ಅದಕ್ಕೆ ಅರ್ಥ ಬರುವುದು ಎನ್ನುತ್ತಿದ್ದಾರೆ ಜೀನಿ ತಜ್ಞರು. ಆದರೂ ಈ ಪ್ರಾಥಮಿಕ ಹಂತದಲ್ಲಿಯೇ ಲಾಭಸಾಧ್ಯತೆಗಳನ್ನು ಊಹಿಸಿ ತಾವು ಕಂಡುಹಿಡಿದ ಕ್ರಮಾನುಗತಿ ಅಥವಾ ಸೀಕ್ವೆನ್ಸ್‌ಗಳನ್ನು ಸೆಲೆರಾ ಜೀನೋಮಿಕ್ಸ್‌ನಂಥ ಖಾಸಗಿ ಕಂಪೆನಿಗಳು ಪೇಟೆಂಟ್ ಮಾಡುತ್ತಲಿವೆ.

ಔಷಧಿ ಕಂಪೆನಿಗಳು ಹೊಸ ವಿಶೇಷ ಔಷಧಿ ತಯಾರಿಕೆಗೆ ಜೀನೋಮ್ ಮಾಹಿತಿ ಬಳಸಲು ಸ್ಪರ್ಧಿಸುತ್ತಲಿವೆ. ಅದಕ್ಕೆಂದು ಅಪಾರ ಹಣ ತೆರಲು ಮುಂದಾಗುತ್ತಲಿವೆ. ಈ ಎಲ್ಲ ಗೊಂದಲದಲ್ಲಿ 'ಮಾನವ ಜೀನೋಮ್' ಮಾಹಿತಿ ಎಲ್ಲ ರಾಷ್ಟ್ರಗಳಿಗೂ ಮುಕ್ತವಾಗಿ, ಉಚಿತವಾಗಿ ದೊರೆಯಬೇಕು. ಎಲ್ಲರೂ ಅದರಿಂದ ಪ್ರಯೋಜನ ಪಡೆಯುವಂತಾಗಬೇಕು ಎನ್ನುವ ಹೇಳಿಕೆ ಅರ್ಥ ಕಳೆದುಕೊಳ್ಳುತ್ತಿದೆ.

ಈ ಮಾಹಿತಿಯ ಶೋಷಣೆಯಿಂದಾಗಬಹುದಾದ ಪರಿಣಾಮಗಳು ನಿಚ್ಚಳವಾಗುತ್ತಿವೆ. ಖಾಸಗಿ ಹಾಗೂ ಸಾರ್ವಜನಿಕ ಸಂಸ್ಥೆಗಳ, ಸಿಕ್ವೆನ್ಸಿಂಗ್‌ನ ಸ್ಪರ್ಧೆಯಲ್ಲಿ, ಬೌದ್ಧಿಕ ಆಸ್ತಿಯ ಹಕ್ಕು ಸಾಧನೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಔಷಧಿ ಕಂಪೆನಿಗಳು ಈ ಮಾಹಿತಿಯನ್ನು (ಔಷಧಿ ಅಭಿವೃದ್ಧಿಯ ವಿಧಾನ ಸುಧಾರಣೆಗೆ) ಬಳಸಲು ಉತ್ಸುಕವಾಗಿವೆ. ಇವೆಲ್ಲವೂ ಭಾರತದಂಥ ಅಭಿವೃದ್ಧಿಶೀಲ ದೇಶಗಳ ಹಿತಾಸಕ್ತಿಗಳನ್ನು ಕಡೆಗಣಿಸುವ ಸಾಧ್ಯತೆಗಳು ಅಧಿಕ.

ತಳಿಸೂತ್ರದ ಮಾಹಿತಿಯಿಂದ ಮೌಲ್ಯವೃದ್ಧಿ ಅಧಿಕವಾದಂತೆಲ್ಲ ಮುಂದುವರಿದ ರಾಷ್ಟ್ರಗಳ ಹಾಗೂ ಅಭಿವೃದ್ಧಿಶೀಲ ದೇಶಗಳ ಔಷಧಿ ಅಭಿವೃದ್ಧಿ ವಿಧಾನಗಳ ನಡುವಣ ವ್ಯತ್ಯಾಸ ಹೆಚ್ಚುತ್ತಲೇ ಹೋಗುತ್ತದೆ. ಶ್ರೀಮಂತ ರಾಷ್ಟ್ರಗಳಲ್ಲಿನ ಜೀನೋಮ್ ಸಂಶೋಧನೆ ಸಿರಿವಂತ ಸಮಾಜದ ಕಾಯಿಲೆಗಳಿಗೇ ಗಮನ ನೀಡುತ್ತದೆ. ಅಲ್ಲಿ ಬೊಜ್ಜು, ಸ್ಥೂಲಕಾಯ, ಅತಿ ರಕ್ತದೊತ್ತಡ, ಮನೋಕ್ಲೇಶ ಮುಖ್ಯ. ಬಡರಾಷ್ಟ್ರಗಳ ನ್ಯೂನ ಪೋಷಣೆ ಮತ್ತಿತರ ಅನಾರೋಗ್ಯಕರ ಪರಿಸರ ತರುವ ಕಾಯಿಲೆಗಳು ಅವರಿಗೆ ಅಮುಖ್ಯ. ಈ ಕೊರತೆ ತುಂಬಲು ಅಭಿವೃದ್ಧಿ ಶೀಲ ದೇಶಗಳು ತಮ್ಮದೇ ಜೀನೋಮ್ ಸಂಶೋಧನೆ ಆರಂಭಿಸಬೇಕು. ಅದಕ್ಕೆ ತಗಲುವ ಅಪಾರ ವೆಚ್ಚವನ್ನು ಬಡರಾಷ್ಟ್ರಗಳು ಭರಿಸಲಾರವು. ಆಗ ಈ ಮಾಹಿತಿಗೆ ಮುಂದುವರಿದ ರಾಷ್ಟ್ರಗಳನ್ನು ಅವಲಂಬಿಸುವುದು ಅನಿವಾರ್ಯ. ಇದು ಹೊಸದೊಂದು ಶೋಷಣೆಗೆಡೆಮಾಡಬಹುದು.

ಭಾರತದಲ್ಲಿ ಬಯೋಟೆಕ್ನಾಲಜಿ ತಂತ್ರಜ್ಞಾನ ಪಾಶ್ಚಿಮಾತ್ಯ ರಾಷ್ಟ್ರಗಳಿಗಿಂತ ಒಂದು ದಶಕದಷ್ಟು ಹಿಂದುಳಿದಿದೆ. ಅಪಾರ ವೆಚ್ಚದ ಈ ತಂತ್ರಜ್ಞಾನದಲ್ಲಿ ಕ್ಷಿಪ್ರ ಪ್ರಗತಿಯನ್ನೂ ಸಾಧಿಸಲಾಗದ ಸ್ಥಿತಿಯಲ್ಲಿರುವ ನಾವು ಇನ್ನೂ ಜೀನೋಮ್ ಸಂಶೋಧನೆಗೆ ಸಜ್ಜಾಗಿಲ್ಲ.

ಮಾನವ ಜೀನೋಮ್ ಪರಿಯೋಜನೆಯಲ್ಲಿ ಭಾರತದ ಪಾತ್ರವಿಲ್ಲವಾದರೂ ನಮ್ಮ ವಿಜ್ಞಾನಿಗಳು ಅದಕ್ಕೆ ಸಂಬಂಧಿತ ಕಾರ್ಯಕ್ರಮವೊಂದರಲ್ಲಿ ಭಾಗಿಯಾಗಿದ್ದಾರೆ. ಇದು 'ಕರಡುಪ್ರತಿ'ಯನ್ನು ಮತ್ತಷ್ಟು ಶ್ರೀಮಂತಗೊಳಿಸಲಿದೆ. ನಮ್ಮ ವಿಜ್ಞಾನಿಗಳು ಭಾರತೀಯ ಜನಾಂಗಗಳ ಜೀನೋಮ್ ವೈವಿಧ್ಯತೆಯನ್ನು ದಾಖಲಿಸುತ್ತಲಿದ್ದಾರೆ. ಈ ಕಾರ್ಯವನ್ನು ಕಲಕತ್ತಾ ಕನ್‌ಸೋರ್ಟಿಯಂ ಆನ್ ಹ್ಯೂಮನ್ ಜೆನೆಟಿಕ್ಸ್ ಮಾಡುತ್ತಲಿದೆ. ಇದರಲ್ಲಿ ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆ, ಭಾರತೀಯ ರಾಸಾಯನಿಕ ಜೀವ ವಿಜ್ಞಾನ ಸಂಸ್ಥೆ, ಹಾಗೂ ಸಾಹಾ ನಾಭಿ ಭೌತ ವಿಜ್ಞಾನ ಸಂಸ್ಥೆ ಭಾಗಿಯಾಗಿವೆ. ಇದರ ಗುರಿ

ಭಾರತದ ವಿವಿಧ ಜನಾಂಗಗಳ ಜೀವ ವಿಕಾಸದ ಪೀಳಿಗೆ ಅಥವಾ ವಂಶ ಪರಂಪರೆಯ ಪುನರ್ ರಚನೆ.

ಗುಣಾಣುಗಳ ಅಗ್ರಗಣ್ಯತೆಯಿಂದಾಗಿ ಅವು ತಮ್ಮಷ್ಟಕ್ಕೆ ತಾವೇ ವರ್ತಿಸುವುವೆನ್ನುವ ಭಾವನೆಯಿದೆ. ಅವು ಯಾವಾಗ ಪ್ರೋಟೀನ್ ತಯಾರಿಕೆಯನ್ನಾರಂಭಿಸಬೇಕು, ಎಷ್ಟು ಪ್ರಮಾಣ ತಯಾರಿಸಬೇಕು, ಯಾವಾಗ ನಿಲ್ಲಿಸಬೇಕೆಂಬುದನ್ನು ಹೇಗೆ ತಿಳಿದುಕೊಳ್ಳುತ್ತವೆ? ನಾವು ಜೀನಿಗಳನ್ನು ಸ್ವಾಯತ್ತ ಘಟಕಗಳಾಗಿ ನೋಡಿದರೆ ಮೇಲಿನ ಪ್ರಶ್ನೆಗೆ ಉತ್ತರ: ಅದೆಲ್ಲವೂ ಅವಕ್ಕೆ ಗೊತ್ತಿದೆ ಅಷ್ಟೇ. ಯಾರೂ ಅವಕ್ಕೆ ಏನು ಮಾಡಬೇಕೆಂದು ಹೇಳುವುದಿಲ್ಲ.

ಆದರೆ ಆ ದೃಷ್ಟಿಯೂ ಸರಿಯಲ್ಲ. ಬೆರಗು ಬಡಿಸುವಷ್ಟು ಉದ್ದದ ಡಿ.ಎನ್.ಎ. ಕ್ರಮಾನುಗತಿ (ಸಿಕ್ವೆನ್ಸ್) ಗಳಲ್ಲಿ ಕೇವಲ ಒಂದು ಕಿರಿದಾದ ಭಾಗದ ಅಕ್ಷರಗಳು ಮಾತ್ರ ಗುಣಾಣುಗಳನ್ನಾಗಿಸುವ ಶಬ್ದಗಳನ್ನು ರೂಪಿಸುತ್ತವೆ. ಈ ಗುಣಾಣುಗಳು ಪ್ರೋಟೀನ್‌ಗಳಿಗೆ ಸಂಕೇತ ನೀಡುತ್ತವೆ. ಡಿ.ಎನ್.ಎ.ಯ 95 ಪ್ರತಿಶತಕ್ಕಿಂತಲೂ ಅಧಿಕ ಭಾಗ 'ಅಸಂಕೇತ'ದ ಕ್ಷೇತ್ರ. ಡಿ.ಎನ್.ಎ.ನ ಬಹ್ವಂಶ ಭಾಗ ಗುಣಾಣುಗಳ ಕಾರ್ಯವನ್ನು ನಿಯಂತ್ರಿಸುತ್ತದೆ. ಇಡೀ ಡಿ.ಎನ್.ಎ. ಸಿಕ್ವೆನ್ಸನ್ನು ನೂರು ಪುಟಗಳ ಪುಸ್ತಕವೆನ್ನುವುದಾದರೆ ಅದರ 95 ಪುಟಗಳಲ್ಲಿ ಇತರ ಐದು ಪುಟಗಳನ್ನು ಹೇಗೆ ಓದಬೇಕೆಂಬ ಸೂಚನೆಗಳು ಮತ್ತು ಸಲಹೆಗಳಿವೆಯೆನ್ನಬಹುದು. ಹೀಗೆ ಜೀನಿಗಳು, ಪ್ರೋಟೀನ್ ಯಾವಾಗ ತಯಾರಾಗಬೇಕೆಂಬುದನ್ನು ಸ್ವತಃ ನಿರ್ಧರಿಸುವುದಿಲ್ಲ. ಇನ್ನೊಂದೆಡೆ ಉಗಮಿಸುವ ಸೂಚನೆಗಳನ್ನು ಅವು ಪಾಲಿಸುತ್ತವೆ.

ಆ ಸೂಚನೆಗಳ ಸ್ವಿಚ್ಚುಗಳ ನಿಯಂತ್ರಣ ಹೇಗೆ? ಕೆಲಬಾರಿ ಅದೇ ಜೀವಕೋಶದ ಇತರ ಭಾಗಗಳಲ್ಲಿರುವ ರಾಸಾಯನಿಕ ದೂತರು ಅಥವಾ ಶರೀರದ ಇತರೆ ಜೀವಕೋಶಗಳಲ್ಲಿನ ದೂತರು ಸ್ವಿಚ್ಚನ್ನು ನಿಯಂತ್ರಿಸುತ್ತವೆ. ಹೀಗೆ ಗುಣಾಣುಗಳನ್ನು ಆನ್ ಮತ್ತು ಆಫ್ ಮಾಡುವ ಪರಿಸರವನ್ನು ಅವುಗಳಿಂದ ಬೇರ್ಪಡಿಸಲಾಗದು. ಹಾಗೇ ಅವುಗಳ ಪರಿಣಾಮಗಳನ್ನು ಪರಿಸರದ ಪರಿಣಾಮದಿಂದಲೂ ಪ್ರತ್ಯೇಕಿಸಲಾಗದು.

ಜ್ಞಾನವೇ ಶಕ್ತಿಯೆಂಬುದು ಹಳೆಯ ನಾಣ್ಣುಡಿ. ಎಲ್ಲ ಬಲಿಷ್ಠ ಜ್ಞಾನಗಳಂತೆಯೇ ಜೀನೋಮ್ ಜ್ಞಾನವನ್ನೂ ನಾವು ಎಷ್ಟು ಎಚ್ಚರಿಕೆಯಿಂದ ಬಳಸುತ್ತೇವೆಂಬುದನ್ನಾಧರಿಸಿ ಒಳಿತಾದ ಅಥವಾ ಕೆಡುಕಾದ ಪರಿಣಾಮಗಳಾಗಬಹುದು.

ಜೀನೋಮ್‌ನ ನಿಯಂತ್ರಣ ಕೆಲ ಮಟ್ಟಿಗೆ ಮಾನವ ನಿರ್ದೇಶನದ ವ್ಯಾಪ್ತಿಗೊಳಪಟ್ಟರೆ ಆರೋಗ್ಯ ಹಾಗೂ ದೀರ್ಘಾಯುಸ್ಸುಗಳಿಗೆ ಲಾಭವಾಗುತ್ತದೆ ನಿಜ. ಆದರೆ ಅದರಿಂದ ಮಾನವ ಸ್ವಭಾವವನ್ನು ಅನಿಷ್ಟಕರ ಹಾಗೂ ಅನಿರೀಕ್ಷಿತ ರೀತಿಯಲ್ಲಿ ಮಾರ್ಪಡಿಸುವ ತೊಂದರೆಯೂ ಹೆಚ್ಚುತ್ತದೆ.

ಈಗ ನಮ್ಮ ಮುಂದಿರುವ ಕಾರ್ಯ ಸರಳವಾಗಿದೆ. ವಿಜ್ಞಾನದ ಈ ಅದ್ಭುತ ಸಾಧನೆಯ ಪ್ರಶಂಸೆಯಲ್ಲಿ ಒಂದು ಸಂಗತಿಯನ್ನು ನಾವು ಸ್ಪಷ್ಟವಾಗಿ ಗ್ರಹಿಸಬೇಕು. ತಳಿನಕ್ಷೆಯನ್ನು ಪ್ರಯೋಗಿಸುವುದು ಒಂದು ವಿಶೇಷ ಕಲೆಯ ಸ್ವರೂಪ. ಇದಕ್ಕೆ ವಿಜ್ಞಾನ ಪ್ರಾಯಶಃ ಅತ್ಯುತ್ತಮ ಉತ್ತರವಾಗಲಾರದು. ಈಗ ನಮಗೆ ಜೀನೋಮ್ ಪರಿಯೋಜನೆಗಳ ದುರುಪಯೋಗ ಕುರಿತ ಸಾರ್ವಜನಿಕ ದೂರುಗಳನ್ನು ಪರಿಶೋಧಿಸುವ ಓಮ್‌ಬುಡ್ಸ್‌ಮನ್‌ಗಳು ಬೇಕು. ಪ್ರಚಾರನಿರ್ಧಾರ (ರೆಫರೆಂಡಮ್)ಗಳನ್ನು ಸಾಂಸ್ಥೀಕರಿಸಲು ಹಾಗೂ ಪರಿಯೋಜನೆಗಳನ್ನು ಹಿಂತೆಗೆದುಕೊಳ್ಳಲು ಸಾರ್ವಜನಿಕ ಹಕ್ಕುಗಳ ತಂಡಗಳು ಬೇಕು. ನಾವು ಜನಾಂಗಗಳ ಪರೀಕ್ಷಣೆಯನ್ನು ಪರಿವೀಕ್ಷಿಸಲು ಚಿಕ್ಕ ತಂಡಗಳನ್ನು ಸಾಂಸ್ಥೀಕರಿಸಬೇಕು.

ಜೀನೋಮ್‌ನ ಮಾಹಿತಿಗೆ ದೈವಿಕ ಹಾಗೂ ದಾನವಿಕ ಸಾಧ್ಯತೆಗಳೆರಡೂ ಇವೆ. ಆದ್ದರಿಂದ ಇದರ ಬಳಕೆಯಲ್ಲಿ ಕಟ್ಟೆಚ್ಚರ ಅತ್ಯಗತ್ಯ.

ಡಾ|| ಶರಣಬಸವೇಶ್ವರ ಅಂಗಡಿ
ಸಿ.೪೪, ಕೃಷಿ ವಿಶ್ವವಿದ್ಯಾಲಯ ನೌಕರರ ವಸತಿಗೃಹಗಳು
ಹೆಬ್ಬಾಳ, ಬೆಂಗಳೂರು - ೫೬೦ ೦೨೪

BOOKS FOR YOU
*from*
FULL CIRCLE



Rs. 125



Rs. 50



Rs. 75


Rs. 75



Rs. 125

*Contact your nearest bookshop or write to*




18-19, Dilshad Garden
G. T. Road
Delhi - 110 095
Tel : 228 2467, 229 7792
Fax : 228 2332

# ಸ್ಲಿಂ ಅಂಡ್ ಟ್ರಿಂ

ಎಸ್. ಜಿ. ರಘುರಾಂ

ಅಲ್ಲ ಸ್ವಾಮಿ, ಮಾತಿಗ್ಹೇಳ್ತೀನಿ, ಯಾರಿಗೆ ತಾನೆ ದಪ್ಪಗೆ ಆನೆ ತರಹ ಇರಬೇಕು ಅಂತ ಆಸೆ ಹೇಳಿ. ಆದರೆ ಇದು ಪುಟ್ಟ ಮಕ್ಕಳಿಗೆ ಅನ್ವಯಿಸಲ್ಲ. ಮಕ್ಕಳನ್ನು ಇನಾಮು ಮಗು ಅಂತ ಕರೀತೀವಿ. ಎಲ್ಲರಿಗೂ ಬಳಕೋ ಬಳ್ಳಿ ತರಹ ಇರಬೇಕು ಅಂತ ಆಸೆ. ಆದ್ರೆ ಆಗಬೇಕಲ್ಲ. ಅದು ಹೇಗೋ ಏನೋ ಹಾಳಾದ್ದು ಕೊಬ್ಬು ಬಂದು ಸೇರಬಾರದ ಜಾಗದಲ್ಲಿ ಸೇರ್ಕೊಂಡುಬಿಡುತ್ತೆ. ಎಪ್ಪತ್ತಾಗಿದ್ರೂ ಇಪ್ಪತ್ತರ ತರಹ ಕಾಣಬೇಕು ಅಂತ ಆಸೆ. ಒಳ್ಳೆ ರಾಜಕುಮಾರ್ ತರಹ ಮೈ ಕಟ್ಟು ಇರಬೇಕು. ಅದು ಹೇಗೆ ಸಾಧ್ಯ ? ಹಾಗಿರಬೇಕಾದ್ರೆ ಎಷ್ಟು ಕಷ್ಟ ಪಡಬೇಕು, ಮೈ ಬಗ್ಗಿಸಿ ವ್ಯಾಯಾಮ ಮಾಡ್ಲೇಬೇಕು. ಏನು ಹುಡುಗಾಟವೇ ! ದಪ್ಪಗಿರೋರ ಕತೆ ದೇವರೇ ಗತಿ. ಆದರೆ ಹೀಗೂ ಉಂಟೆ. ಅಲ್ಲ ದಪ್ಪಗಿದ್ರೆ ಏನಾಯ್ತು.......

ನೋಡಿ, ನಮ್ಮ ಹುಡುಗಿ ಎಲ್ಲ ಪರೀಕ್ಷೇಲೂ ಮೊದಲಿಗಳೇ. ಸಂಗೀತ ಹಾಡ್ತಾಳೆ, ಮನೆ ಕೆಲಸ ಎಲ್ಲ ಕಣ್ಣು ಮಿಟುಕಿಸಿ ಕಣ್ಣು ತೆಗೆಯೋದ್ರಲ್ಲಿ ಮಾಡಿ ಮುಗಿಸಿ ಹಾಡು ಹೇಳ್ತಾ ಕೂತ್ಕೋಳ್ತಾಳೆ. ಆದರೆ.......

ನಮ್ಮ ಹುಡುಗಿ ಸ್ವಲ್ಪ......

ಸ್ವಲ್ಪ ದಪ್ಪ ಅಷ್ಟೆ, ಮೂಗೆಳಿತಾರೆ.

ನಾನಂತು ದಪ್ಪಗಿರೋರ ಪಾರ್ಟಿ. ಯಾಕೆ ?

ಉತ್ತರ ಸಿಂಪಲ್ :

ನಾನು ದಪ್ಪಗಿದ್ದೇನೆ. ಮೈ ಕೈ ತುಂಬ್ಕೊಂಡು. ಜನ ಏನೇ ಹೇಳ್ಲಿ, ನನ್ನಂತಹ ದಪ್ಪಗಿರೋರಿಗೆ ಬೇಕಾದಷ್ಟು ಅನಾನುಕೂಲಗಳೂ ಇವೆ ಅನ್ನಿ. ಬಸ್‌ನಲ್ಲಿ ಕಿಟಕಿ ಹತ್ತಿರ ನಾವು ಕೂತಿದ್ರೆ ೧/೪ ಸೀಟು ಉಳಿದಿರುತ್ತೆ. ಜನ ಯಾರೂ ನಮ್ಮ ಪಕ್ಕದಲ್ಲಿ ಕೂತ್ಕೊಳೋಕೆ ಇಷ್ಟ ಪಡಲ್ಲ. ದಪ್ಪಗಿರೋರು ಅಂತೂ ನಮ್ಮ ಕಡೆ ಕೂಡ ಸುಳಿಯೋಲ್ಲ. ಕೂತ್ಕೊಳ್ಳೇ ಬೇಕಾದ ಪರಿಸ್ಥಿತಿ ಬಂದರೆ ತತ್ಕಾಲಕ್ಕೆ ಬಂದು ಕೂತ್ಕೊಳ್ತಾರೆ, ಅಕ್ಕ ಪಕ್ಕದಲ್ಲಿ ಏನಾದ್ರೂ ಮುಂದೆ ಒಂದು ಸೀಟು ಖಾಲಿ ಆದ್ರೆ ಜಿಂಕೆ ತರಹ ಜಂಪ್ ಮಾಡಿ ಆ ಸೀಟಿಗೆ ಪಕ್ಷಾಂತರ ಮಾಡ್ತಾರೆ. ನಾವೇನಾದ್ರು ಬಸ್ ಹತ್ತಿ ಒಂದು ಸೀಟು ಖಾಲಿ ಇದ್ದು ಅಲ್ಲಿ ಕೂತ್ರೆ ಪಕ್ಕದೋರ ಹಿಡಿಶಾಪ. ಬೆಂಗಳೂರಿನಲ್ಲೋ ನಡೆಯೋಕೆ ಆಗಲ್ಲ. ತುಂಬ ದೂರ. ಹೆಜ್ಜೆಗೆ ಹತ್ತು ಆಟೋ ಇರೋವಾಗ ನಡೀಬೇಕಾದ್ದು ಇಲ್ಲ ಬಿಡಿ. ಇಷ್ಟಕ್ಕೂ ನಡೆಯೋಕೆ ಫುಟ್‌ಪಾತ್ ಎಲ್ಲಿದೆ ! ನೀವು ನಡೆದಿರೋ, ತರಕಾರಿ ಮೇಲೋ ಸೀಬೇ ಹಣ್ಣಿನ ಮೇಲೋ ನಡೀಬೇಕು. ಅವರ ಕೈಲಿ ತಮಿಳಿನಲ್ಲಿ ಬಾಯಿಗೆ ಬಂದ್ಹಾಗೆ ಬೈಸಿಕೊಳ್ಳಬೇಕು. ಡಾಕ್ಟ್ರು ಹೇಳೋದು ಏನಪ್ಪಾ ಅಂದ್ರೆ, ದಪ್ಪಗಿದ್ರೆ, ಅಂದ್ರೆ ಓವರ್‌ವೇಯಿಟ್ ಇದ್ರೆ, ಹೃದಯದ ಸಮಸ್ಯೆ, ಕಿಡ್ನಿ ಸೋಲುವಿಕೆ, ರಕ್ತದೊತ್ತಡ, ಮಧುಮೇಹ, ಇನ್ನೂ ಏನೇನೋ ಒಂದು ದೊಡ್ಡ ಪಟ್ಟೀನೇ ನಿಮ್ಮ ಮುಂದಿಟ್ಟು ಹೆದರಿಸಿಬಿಡ್ತಾರೆ. ಸಣ್ಣಗಿರೋರ್ಗೆ ಇವೆಲ್ಲ ಆಗೋಲ್ವೇ ? ಹಾಗೇನೂ ಆಗಲ್ಲ ಅಂತ ಸ್ಟಾಂಪ್ ಪೇಪರಿನ ಮೇಲೆ ಬರೆದುಕೊಡ್ತಾರೆಯೇ ಈ ದೊಡ್ಡ ಡಾಕ್ಟರುಗಳು ? ಸಿಕ್ಕಾಪಟ್ಟೇ ದಪ್ಪ ಇರೋ ಹೃದಯ ಶಸ್ತ್ರ ಚಿಕಿತ್ಸಕರನ್ನ ನಾನು ಬೆಂಗಳೂರಿನಲ್ಲಿ ನೋಡಿದೀನಿ. ಅವರ ಹೆಸರು ಬೇಡ ಅನ್ನಿ. ಏನಾದ್ರೂ ಆಗಲಿ ಸಣ್ಣಗಾಗೇ ಬಿಡೋಣ, ಅದು ಹ್ಯಾಗಿರುತ್ತೆ ಆ ಮಜಾನೂ ನೋಡೋಣ ಅಂತ ತೀರ್ಮಾನ ಮಾಡೇ ಬಿಟ್ಟೆ.... ಶುರು ಮಾಡ್ದೆ ತನಿಖೆ.

ಯಾವ ಡಯಟ್ಟೂ ಇಲ್ಲ..... ಎಂತಹ ಕಟ್ಟುಪಾಡುಗಳೂ ಇಲ್ಲ.... ನಿಮ್ಮ ನಾರ್ಮಲ್ ಜೀವನಕ್ಕೆ ಅಡ್ಡಿ ಉಂಟು ಮಾಡುವುದಿಲ್ಲ. ಪ್ರತಿ ತಿಂಗಳಿಗೆ ೫ ಕೆ.ಜಿ. ತೂಕ ಇಳಿಸಲಾಗುತ್ತೆ. ನಿಮ್ಮದೇ ತೂಕದ ಮಿಷಿನ್. ಹೀಗೆ ಒಂದು ಜಾಹಿರಾತು ದಪ್ಪಕ್ಷರಗಳಲ್ಲಿ. ಅವರಿಗೆ ಫೋನ್ ಮಾಡಿದೆ. ಅವರೆಂದರು : "ನಾವು ಬರೆದಿರುವುದೆಲ್ಲಾ ಸರಿ. ಆದರೆ ಒಂದು ವಿಷಯ ಬೇಕಂತಲೇ ಬಿಟ್ಟಿದ್ದೇವೆ. ಅದು ಏನಿಲ್ಲ, ತುಂಬ ಸಿಂಪಲ್. ಬೆಳಿಗ್ಗೆ ಕೇವಲ ೪ ಘಂಟೆಗಳ ಕಾಲ ತೀವ್ರವಾದ ವ್ಯಾಯಾಮ ಇರುತ್ತೆ." ಇಷ್ಟೇನಾ ? ಬಿಡಿ ಇದೇನ್ ಮಹಾ ? ನನ್ನ



ಜನ್ಮದಲ್ಲೂ ಬೆಳಿಗ್ಗೆ ೪ ಘಂಟೆಗೆ ಎದ್ದು ಅಭ್ಯಾಸವೇ ಇಲ್ಲ ಎಂದು ಕೈ ಬಿಟ್ಟೆ. ಯಾವ ಡಯಟ್ ನಿರ್ಬಂಧವೂ ಇಲ್ಲ. ಎಲ್ಲ ಮಾಮೂಲು ಊಟ, ಆಟ, ಪಾಟ. ವಿದೇಶದ ಫಾರ್ಮುಲಾ. ಬರೀ ಗುಳಿಗೆಗಳು. ಬೆಳಿಗ್ಗೆ ೮, ಮಧ್ಯಾಹ್ನ ೮, ರಾತ್ರಿ ಹದಿನಾರು. ಎಲ್ಲ ಸೂಚನೆಗಳೂ ಸೀಲಾದ ಔಷಧಿ ಡಬ್ಬಿಯಲ್ಲಿದೆ. ಹಣಕೊಟ್ಟು ಅದನ್ನು ತೆಗೆದು ಓದಿದರೆ ಡಂಗಾಗುತ್ತೀರಿ. ಇದು ಇನ್ನೊಂದು ಜಾಹಿರಾತು. ಊಟದ ಜೊತೆಗೆ ಮಾತ್ರೆಗಳು. ಸುಲಭವಾಗಿ ನುಂಗಿ ನೀರು ಕುಡಿಯೋದು, ಮೂರೇ ತಿಂಗಳಲ್ಲಿ ಸಣ್ಣಗಾಗೋದು. ಅವರಿಗೆ ಬರೆದೆ. ಹದಿನೈದು ದಿನಗಳ ಮೇಲೆ ಉತ್ತರ ಬಂತು. ರೂ. ೮೦೦೦/- ಮಾತ್ರ ಕಳುಹಿಸಿ ಸದ್ಯಕ್ಕೆ. ಆಮೇಲೆ ಪೂರ್ತಿ ಎಷ್ಟೆಂದು ತಿಳಿಸುತ್ತೇವೆ. ನೀವು ಸಣ್ಣಗಾಗದಿದ್ರೆ ನಿಮ್ಮ ಹಣ ಕಂತುಗಳಲ್ಲಿ ವಾಪಸ್ ಎಂದು ಬರೆದಿತ್ತು. ರೂ ೮೦೦೦-೦೦ !

ಇದನ್ನೋದಿದ ಮೇಲೆ ಯಾವ ಮಗ ಸಣ್ಣಗಾಗಲ್ಲ. ಮಾತ್ರೇನೂ ಬೇಡ ಗೀತ್ರೇನೂ ಬೇಡ. ಈ ಸಣ್ಣತನದ ಆಸೆ ಬಿಟ್ಟೆ. ಆದ್ರೆ ಮನಸ್ಸು ಮುಂಡೇದು ಸುಮ್ಮನಿರಬೇಕಲ್ಲ. ಪಕ್ಕದ ಮನೆ ಹಿಪ್ಪೋ ಹರಿಣಾಕ್ಷಿ ನನ್ನ ಹೆಂಡತಿ ಮುಖಾಂತರ ಒಂದು ಜಾಹಿರಾತು ಕಳುಹಿಸಿ ನಾನು ಬಹಳ ಆಸ್ಥೆಯಿಂದ ಓದುತ್ತಿರುವುದನ್ನು ಕಿಟಕಿಯಿಂದ ನೋಡಿ ಕಿಸಕ್ ಅಂತ ನಕ್ಕಳು. ಅದೂ ಎಲ್ಲದರ ಹಾಗೆ ಯಾವ ನಿರ್ಬಂಧವೂ ಇಲ್ಲ, ಡಯಟ್ ಇಲ್ಲ, ವ್ಯಾಯಾಮವಿಲ್ಲ. ಊಟ ಮಾಮೂಲು, ನಿದ್ರೆ ಮಾಮೂಲು. ಆದರೆ ಇದರಲ್ಲೂ ಒಂದು ನಿಯಮ : ಇದು ರೆಸಿಡೆನ್ಷಿಯಲ್. ಅಂದರೆ ೪೮ ದಿನ ಅಲ್ಲೇ ಇರಬೇಕು. ಅದು ದಕ್ಷಿಣ ಕನ್ನಡ ಜಿಲ್ಲೆಯ ಒಂದು ಹಳ್ಳಿಯಲ್ಲಿ. ಗುರುಕುಲವಾಸ ಇದ್ದಹಾಗೆ. ಸದ್ಯಕ್ಕೆ ೪೮ದಿನ, ಅಗತ್ಯ ಬಿದ್ದರೆ ೬೦ ದಿನಕ್ಕೆ ಏರಿಸಬಹುದು. ಯಾವ ಕಾರಣಕ್ಕೂ ೬೦ ದಿನಕ್ಕೆ ಮೀರಿದ ಚಿಕಿತ್ಸೆ ಇಲ್ಲ ಎಂದು ಬರೆದಿದ್ದರು. ಪ್ರಪಂಚದ ಅತಿ ದಪ್ಪ ಮನುಷ್ಯನಿಂದ ಹಿಡಿದು ಭಾರತದ ಅತಿ ದಪ್ಪ ಮನುಷ್ಯನವರೆಗೆ ಹಾಗೂ ಚಲನಚಿತ್ರ ತಾರೆಯರು, ಕ್ರೀಡಾಪಟುಗಳು, ರಾಜಕಾರಣಿಗಳು ಒಬ್ಬರೇ ಇಬ್ಬರೇ ಎಲ್ಲರೂ ಈ ಚಿಕಿತ್ಸೆಯ ಬಗ್ಗೆ ಮೆಚ್ಚುಗೆಯ ನುಡಿಗಳು. ಅವರು ಇಳಿಸಿದ ತೂಕ, ಹೀಗೆ ಎಲ್ಲದರ ವಿವರ ಇತ್ತು.

ಇದಕ್ಕೆ ಛಾರ್ಜು ? ಅದು ನೀವು ಇಳಿಸುವ ತೂಕವನ್ನು ಅವಲಂಬಿಸಿ ಒಂದು ಕೆ.ಜಿ.ಗೆ ಇಷ್ಟು ಎಂದು ವಸೂಲು ಮಾಡಲಾಗುವುದು. ಏನಾದರೂ ನಿಮ್ಮ ಪರ್ಸ್ ಪೂರ್ತಿ ತೂತಾಗಲಿಕ್ಕೆ ಬಿಡುವುದಿಲ್ಲ ಎಂದೂ ಬರೆದಿತ್ತು. ನಾನು ಹೋಗೇಬಿಡಬೇಕೆಂದು ತೀರ್ಮಾನಿಸಿಬಿಟ್ಟೆ. ಒಂದು ಶುಭದಿನ ನೋಡಿ ಹೊರಟೂಬಿಟ್ಟೆ. ಆ ಹಳ್ಳಿಯ ಹೆಸರು ಸಣ್ಣಪ್ಪೂರ್. ಸಂಜೆ ೬ ಘಂಟೆಗೆ ಸೇರಿದೆ. ೨೦-೩೦ ಜನಕ್ಕೂ ಹೆಚ್ಚು ಸಣ್ಣಗಿದ್ದವರು ಇದ್ದರು. ದಪ್ಪಗಿದ್ದವರು ಅಲ್ಲೊಬ್ಬರು ಇಲ್ಲೊಬ್ಬರು. ಮನಸ್ಸಿಗೆ ಬಹಳ ಸಂತೋಷ ಆಯ್ತು. ಇವರೇನು ಸಣ್ಣಗಿದ್ದವರೇ, ಅಥವಾ ಸ್ಯಾಂಪಲ್‌ಗಾಗಿ ಇಲ್ಲಿಗೆ ಬಂದಿದ್ದಾರೆಯೇ ? ಅಥವಾ ದಪ್ಪಗಿದ್ದವರು ಸಣ್ಣಗಾಗಿ ಗೋಡೆ ಹಿಡಿದು ನಡೆಯುತ್ತಿದ್ದಾರೋ ಗೊತ್ತಾಗಲಿಲ್ಲ. ಯಾಕೀ ಆತುರ ? ಸ್ವಾಗತಕೋಣೆಗೆ ಹೋದೆ. ಎಲ್ಲ ನಿಯಮಗಳನ್ನು ತಿಳಿಸಿ ಉಳಿಯಲು ನನಗೊಂದು ಜಾಗ ಕೊಟ್ಟರು. ರಾತ್ರಿ ಊಟಕ್ಕೆ ಒಂದು ಟೋಕನ್ ಕೊಟ್ಟರು. ಊಟ ಎಂದು ಬರೆದಿತ್ತು. ಶುರುವಾಯಿತು ನನ್ನ ಟ್ರೀಟ್‌ಮೆಂಟು ಅಂದುಕೊಂಡೆ. ೭.ಘಂಟೆಗೆ ಸರಿಯಾಗಿ ಹೋದೆ. ಕ್ಯಾಂಟೀನ್ ಇದ್ದದ್ದು ೪ ಕಿ.ಮೀ. ಆಚೆ. ವ್ಯವಸ್ಥಾಪಕರಿಗೆ ಕೇಳಿದೆ. ವಾಹನ ಸೌಕರ್ಯ ಇದೆಯೇ ಎಂದು. "ಎಂತದು ಮಾರಾಯ್ರೆ, ನೀವು ನಡೆದು ಹೋಗುವುದು ಟ್ರೀಟ್‌ಮೆಂಟ್‌ನಲ್ಲಿ ಉಂಟು. ಹಾ...." ಸುಮ್ಮನಾದೆ. ಹೊರಟೆ ಕ್ಯಾಂಟೀನ್ ಕಡೆಗೆ. ನನ್ನೊಂದಿಗೆ

(೨೭ನೇ ಪುಟ ನೋಡಿ)

# ಸಾಂಬಯ್ಯನ ಸಿಡುಮೋರೆ

ಸಂಗಮೇಶ ಬಯಸಿ ಬೆಂಗಳೂರಿಗೆ ಬಂದವನಲ್ಲ. ಚಿತ್ರದುರ್ಗದಿಂದ ಅವನನ್ನು ಬೆಂಗಳೂರು ಆಫೀಸಿಗೆ ವರ್ಗಾಯಿಸಲಾಗಿತ್ತು. ಹುಟ್ಟಿನಿಂದಲೇ ಪುಕ್ಕಲು ಮನುಷ್ಯನಾದ ಸಂಗಮೇಶ ಬೆಂಗಳೂರಿಗೆ ಬಂದು ಅಲ್ಲಿನ ಜನಾರಣ್ಯದಲ್ಲಿ ಬೆರೆತುಹೋಗಿದ್ದ. ಆಫೀಸಿನಿಂದ ದೂರದ ಬಡಾವಣೆಯೊಂದರಲ್ಲಿ ಒಂದು 'ಔಟ್ ಹೌಸ'ನ್ನು ತಿಂಗಳಿಗೆ ೧೫೦೦ ರೂಪಾಯಿಯಂತೆ ಬಾಡಿಗೆಗೆ ಹಿಡಿದಿದ್ದ.

'ಕುರಿ'ಯಂತೆ ಸಾಧು ಸ್ವಭಾವದ ಸಂಗಮೇಶನಿಗೆ ಆಫೀಸಿನಲ್ಲಿ ಯಾವ ಸಮಸ್ಯೆಯೂ ಇರಲಿಲ್ಲ. ಚಿಕ್ಕವರು, ದೊಡ್ಡವರು ಎಲ್ಲರ ಹತ್ತಿರವೂ 'ಒಳ್ಳೆಯವ'ನೆನಿಸಿಕೊಂಡಿದ್ದ ಅವನು. ಮನೆಯಲ್ಲಿ ಚೇಷ್ಟೆಗಳನ್ನೇ ಮಾಡಲರಿಯದ ಅವನ ಪುಟ್ಟ ಮಗಳು, ಮಗ 'ಮರಿಕುರಿ'ಗಳಂತೆಯೇ ಬೆಳೆಯುತ್ತಿದ್ದರು. ಅವನ ಮಡದಿ ಸೀತಾಲಕ್ಷ್ಮಿ ಅವನಿಗೆ ತಕ್ಕಂತೆ 'ಹಸು'ವಿನಂತಹ ಸಾಧು ಸ್ವಭಾವದವಳು. ಗಂಡನನ್ನು ನೋಡಿದರೆ ''ಅಯ್ಯೋ, ಪಾಪ'' ಎನ್ನುವ ಭಾವನೆಯನ್ನೇ ಯಾವಾಗಲೂ ಹೊಂದಿದ್ದಳು.

ಮನೆ, ಆಫೀಸುಗಳಲ್ಲಿ ಶಾಂತಿ ನೆಲೆಸಿದ್ದರೂ, ಒಂದು ಸಮಸ್ಯೆ ತೀವ್ರವಾಗಿ ಸಂಗಮೇಶನನ್ನು ಕಾಡಲು ಶುರುಮಾಡಿದ್ದು, ಆ ಮನೆಗೆ ಬಂದ ಐದಾರು ತಿಂಗಳ ಮೇಲೆ. ಇದಕ್ಕೆ ಕಾರಣ, ಮನೆ ಮಾಲಿಕ ಸಾಂಬಯ್ಯನ 'ಸಿಡುಮೋರೆ'. ಸಾಂಬಯ್ಯ ನಕ್ಕಿದ್ದನ್ನು ಸಂಗಮೇಶ ಎಂದೂ ಕಂಡಿರಲಿಲ್ಲ. 'ಮೇನ್ ಹೌಸಿ'ನಲ್ಲಿ ಸಾಂಬಯ್ಯನ ವಾಸ. ಹನ್ನೊಂದು ತಿಂಗಳಿಗೆ ಕರಾರುಪತ್ರ ಬರೆಯಿಸಿಕೊಂಡು, ಸಂಗಮೇಶನಿಗೆ ಔಟ್‌ಹೌಸನ್ನು ಬಾಡಿಗೆಗೆ ಕೊಟ್ಟಿದ್ದ. ಆಗ ಮಾತನಾಡಿದ್ದವನು ಪುನಃ ಮಾತನ್ನೇ ಆಡಿರಲಿಲ್ಲ. ಈ ಮೌನವಷ್ಟೇ ಆಗಿದ್ದರೆ, ಸಂಗಮೇಶನಿಗೆ ಸಮಸ್ಯೆಯೇನೂ ಬರುತ್ತಿರಲಿಲ್ಲ. ಸಮಸ್ಯೆ ಬಂದದ್ದು ಸಾಂಬಯ್ಯನ ಗಂಟಿಕ್ಕಿದ ಮುಖ ಮತ್ತು ಸಂಗಮೇಶನನ್ನು ನುಂಗುವಂತೆ ನೋಡುತ್ತಿದ್ದ 'ತೋಳ'ನ ಕಣ್ಣುಗಳಿಂದ.



ಎರಡು ಮನೆಗಳಿಗೂ ಒಂದೇ ಗೇಟ್ ಇದ್ದುದರಿಂದ ಸಂಗಮೇಶ ಸಾಂಬಯ್ಯನ ಮನೆ ದಾಟಿಕೊಂಡೇ ಓಡಾಡಬೇಕಿತ್ತು. ಹಾಗೆ ಓಡಾಡಿದಾಗಲೆಲ್ಲಾ ತಪ್ಪದೆ ಅವನಿಗೆ ವರಾಂಡಾದಲ್ಲಿ ಕೂತಿರುತ್ತಿದ್ದ ಸಾಂಬಯ್ಯನ 'ಸಿಡುಮೋರೆ'ಯ ದರ್ಶನವಾಗುತ್ತಿತ್ತು. ಒಂದು ದಿನ ಭಾನುವಾರ ಮಧ್ಯಾಹ್ನ ಮನೆಯಲ್ಲಿ ಮಲಗಿದ್ದ ಅವನಿಗೆ ಇದ್ದಕ್ಕಿದ್ದಂತೆ ಸಾಂಬಯ್ಯನ 'ಕ್ರೂರ ನೋಟ'ಕ್ಕೆ ಕಾರಣ ಹೊಳೆದಂತಾಯಿತು. ಸಾಂಬಯ್ಯನೊಡನೆ ತಾನು ಮಾಡಿಕೊಂಡಿದ್ದ 'ಅಗ್ರಿಮೆಂಟ್' ಪ್ರಕಾರ ಇನ್ನೊಂದೇ ತಿಂಗಳು ಬಾಕಿ ಇದ್ದುದು; ಈ ತಿಂಗಳಾದ ಮೇಲೆ ತನ್ನನ್ನು ಖಾಲಿ ಮಾಡಿಸಿ, ಬೇರೆಯವರಿಗೆ ಮನೆಯನ್ನು ಹೆಚ್ಚಿನ ಬಾಡಿಗೆಗೆ ಕೊಡಬೇಕೆಂಬ ದುರುದ್ದೇಶ ಸಾಂಬಯ್ಯನಿಗೆ ಇರಬೇಕೆಂದು ತರ್ಕಿಸಿದ ಅವನು. ತನ್ನ ತರ್ಕದಲ್ಲಿ ಅಪಾರ ನಂಬಿಕೆ ಅವನಿಗೆ. ತನ್ನಷ್ಟಕ್ಕೆ ತಾನೇ ಹೋಗಿ, ಸಾಂಬಯ್ಯನಿಗೆ ಹೆಚ್ಚಿಗೆ ಬಾಡಿಗೆ ಕೊಡುತ್ತೇನೆಂದು ಹೇಳುವುದಕ್ಕೆ ಸ್ವಾಭಿಮಾನ ಅಡ್ಡಬರುತ್ತಿತ್ತು. ಹೀಗಾಗಿ, 'ಶೀತಲ ಯುದ್ಧ' ಮುಂದುವರಿದೇ ಇತ್ತು.

ಇದರಲ್ಲಿ ಅಸಹಾಯಕ ಸ್ಥಿತಿಯಲ್ಲಿದ್ದವನು ಸಂಗಮೇಶನೇ. ಒಂದೆರಡು ಬಾರಿ ಹೆಂಡತಿಗೆ ಹೇಳಿಯಾಗಿತ್ತು. ಅದಕ್ಕಾಕೆ, ''ಎಲ್ಲಾ ನಿಮ್ಮ ಹುಚ್ಚು ಕಲ್ಪನೆ. ಸಾಂಬಯ್ಯನ 'ಸಿಡುಮೋರೆ'ಗೂ ನಮ್ಮನ್ನು ಮನೆ ಖಾಲಿ ಮಾಡಿಸುವುದಕ್ಕೂ ಏನು ಸಂಬಂಧವೋ ನಾ ಕಾಣೆ'', ಎಂದು ಸಮಾಧಾನ ಹೇಳಿದ್ದಳು. ಆದರೆ ಸಂಗಮೇಶ ತನ್ನ ಊಹೆ ಎಂದಿಗೂ ತಪ್ಪಾಗಲಾರದೆಂದು ವಾದಿಸಿದಾಗ, ಬೇಜಾರಿನಿಂದ ''ಸುಮ್ಮನೆ ಯಾಕೆ ನನ್ನ ತಲೆ ತಿಂತೀರಿ ? ಬೇಕಾದ್ರೆ ಬೇರೆ ಮನೆ ನೋಡಿ, ಹೊರಟುಹೋಗೋಣ'' ಎಂದುಬಿಟ್ಟಿದ್ದಳು.

ಅದೇ ಸರಿಯೆಂದು ತೀರ್ಮಾನಿಸಿದ ಸಂಗಮೇಶ. ಹನ್ನೊಂದು ತಿಂಗಳಾಗುವುದಕ್ಕೆ ಏಳೆಂಟು ದಿನಗಳ ಮುಂಚೆಯೇ ಒಂದು ಶನಿವಾರ ಸಾಯಂಕಾಲ ೬ ಗಂಟೆ ಸಮಯದಲ್ಲಿ ಹೊಸ ಬಾಡಿಗೆ ಮನೆ ತಲಾಶಿಗೆ ಹೊರಟ. ಮನೆ ಬ್ರೋಕರ್‌ಗಳು ಹೆಚ್ಚಾಗಿರುತ್ತಿದ್ದ ಒಂದು ಮುಖ್ಯ ಬೀದಿಯಲ್ಲಿ ಬೋರ್ಡುಗಳನ್ನು ನೋಡುತ್ತಾ ಹೋಗುತ್ತಲಿದ್ದ. ಒಂದು ಬೋರ್ಡಿನ ಪಕ್ಕದ ಜಗಲಿಯ ಮೇಲೆ ಕೂತಿದ್ದ ನಡುಪ್ರಾಯದ ಒಬ್ಬ ಬಡಕಲು ಆಸಾಮಿ ಸಂಗಮೇಶನನ್ನು ನೋಡಿ ಥಟ್ಟನೆ ಎದ್ದು ನಿಂತು, ''ಏನ್ಸಾರ್, ಮನೆ ಬೇಕಾ ? ಬಾಡಿಗೆಗೋ ? ಲೀಸ್‌ಗೋ ?'' ಎಂದು ಕೇಳಿದ. ಹೆಸರು ಬಸಪ್ಪನಂತೆ; ವೃತ್ತಿ ಮನೆ ತೋರಿಸುವುದು. 'ಬ್ರೋಕರ್ ಬಸಪ್ಪ'ನೆಂದರೆ ಎಲ್ಲರಿಗೂ ಗೊತ್ತಂತೆ. ಇದು ಆ ವ್ಯಕ್ತಿ ಪರಿಚಯ ಮಾಡಿಕೊಂಡ ರೀತಿ.

''ನೋಡಿ ಸಾರ್, ಇಲ್ಲೇ ಸಿಂಗಲ್ ಬೆಡ್‌ರೂಮಿನ ತಾರ್ಸಿ ಮನೆ ಒಂದಿದೆ. ಬಾಡಿಗೆ ತಿಂಗಳಿಗೆ ೧೫೦೦ ರೂಪಾಯಿ. ಆದರೆ 'ಔಟ್‌ಹೌಸ್'. ಪರವಾಗಿಲ್ವೆ ?'' ಎಂದು ಕೇಳಿದ ಬಸಪ್ಪ.

ತಕ್ಷಣವೇ ಮನೆ ತೋರಿಸೆಂದು ಹೇಳಿದ ಬಸಪ್ಪನಿಗೆ. ಬಸಪ್ಪ ಎಡಕೈಯನ್ನು ಸೊಂಟದ ಮೇಲಿರಿಸಿ, ಬಲಗೈಯಿಂದ ತಲೆ ಕೆರೆಯುತ್ತಾ ನಿಂತ. ಆಫೀಸಿನಲ್ಲಿ ಅನೇಕ 'ಪೀವನ್'ಗಳನ್ನು ನೋಡಿದ್ದ ಸಂಗಮೇಶನಿಗೆ ಆ ಭಂಗಿ ಅರ್ಥವಾಯಿತು. ಜೇಬಿನಿಂದ ಹತ್ತು ರೂಪಾಯಿ ತೆಗೆದುಕೊಟ್ಟ. ಆ ಕ್ಷಣವೇ ಬಂತು, ತೆಳ್ಳನೆಯ ಬಸಪ್ಪನ ಕಾಲುಗಳಿಗೆ ಚಲನೆ.''ಬನ್ನಿ, ಸಾರ್'' ಎನ್ನುತ್ತಾ ಮುಂದೆ ನಡೆದ ಅವನು.

ಸ್ಥೂಲಕಾಯನಾದ ಸಂಗಮೇಶನಿಗೆ ಅವನ ಸಮನಾಗಿ ನಡೆಯಲಾಗಲಿಲ್ಲ. ಬಸಪ್ಪ ಸರಸರನೆ ನಡೆಯುತ್ತಾ, ಕೆಲವು ಸಂದಿಗಳಲ್ಲಿ ನಡೆದ. ಅಲ್ಲಲ್ಲಿ ಏನೋ ಜ್ಞಾಪಿಸಿಕೊಳ್ಳುವಂತೆ ನಿಂತು, ದಿಕ್ಕು ಬದಲಾಯಿಸಿ ನಡೆಯುತ್ತಿದ್ದ. ಹೀಗೆ ಅನೇಕ ಗಲ್ಲಿಗಳಲ್ಲಿ ತಿರುಗಿ, ಕೆಲವು ವೇಳೆ ಹೋದ ದಾರಿಯಲ್ಲೇ ಹಿಂದಕ್ಕೆ ಹೋಗುತ್ತಾ, ಕೊನೆಗೊಮ್ಮೆ ಒಂದು ಬೀದಿಯನ್ನು ಪ್ರವೇಶಿಸಿದ ಬಸಪ್ಪ ''ಬನ್ನಿ ಸಾರ್, ಸಿಕ್ಕಿತು'' ಎಂದು ಹಿಂದಕ್ಕೆ ನೋಡುತ್ತಾ ಕೂಗಿದ. ಸಂಗಮೇಶ ಅವನ ಬಳಿ ಹೋಗುವುದರೊಳಗೇ ಅವನು ಮುಂದಕ್ಕೆ ನಡೆದು, ಒಂದು ಮನೆಯ ಮುಂದೆ ನಿಂತ. ತಾನಿದ್ದ ಮನೆಯೇ ಅದು !

''ನೋಡಿ, ಸಾರ್. ಇದೇ ಮನೆ. ಇದರ 'ಔಟ್‌ಹೌಸ್' ಖಾಲಿ. ನೋಡ್ತೀರಾ, ಸಾರ್ ?'' ಎಂದು ಕೇಳಿದ ಬಸಪ್ಪ. ''ನಿನಗೆ ಈ ಮನೆ ಖಾಲಿ ಎಂದು ಯಾರು ಹೇಳಿದರು?'' ಎಂದು ಕೇಳಿದ ಸಂಗಮೇಶ. ತಡವರಿಸದೆ ಉತ್ತರಿಸಿದ ಬಸಪ್ಪ : ''ನಮಗೆ ಹೆಂಗೆಂಗೋ ಸಮಾಚಾರ ಬರುತ್ತೆ, ಸಾರ್. ಅದೆಲ್ಲಾ ನಿಮಗ್ಯಾಕೆ ? ನಿಮಗೆ ಈ ಮನೆ ಬೇಕೋ, ಬೇಡವೋ ? ಅದು ಹೇಳಿ'' ಅಂದ.

''ನನಗೆ ಯಾವ ಮನೆಯೂ ಬೇಡ. ನಿನ್ನ ತಮಾಷೆಯೂ ಬೇಡ. ನನ್ನ ಮನೆಗೇ ನನ್ನನ್ನು ಕರಕೊಂಡು ಬಂದಿದ್ದೀಯಲ್ಲಾ! ಇದು ಖಾಲಿಯಾಗುವುದೆಂದು ಯಾರು ಹೇಳಿದರು ? ನಾನು ಇದನ್ನು ಖಾಲಿ ಮಾಡುವುದಿಲ್ಲ. ದಯವಿಟ್ಟು ಈ ಮನೆ ಖಾಲಿ ಎಂದು ಯಾರಿಗೂ ಹೇಳಬೇಡ'' ಎಂದು ಉದ್ವೇಗದಿಂದ ಗಟ್ಟಿಯಾಗಿ ಬಡಬಡಿಸಿದ ಸಂಗಮೇಶ.

ಅವನ ಧ್ವನಿಯಲ್ಲಿ ಉದ್ವೇಗವನ್ನು ಗುರುತಿಸಿದ ಬಸಪ್ಪ ''ಕೋಪ ಯಾಕೆ ಸಾರ್ ಮಾಡ್ಕೊಳ್ತೀರಿ ? ಇದು ನಿಮ್ಮ ಮನೆ ಅಂತ ನನಗೇನು ಗೊತ್ತು ? ಬೇಕಾದ್ರೆ, ಈ ಮನೆಯಲ್ಲೇ ಇರಿ. ಬೇಡಾಂದ್ರೆ, ಬೇರೆ ಮನೆ ಹೇಳೋಣ'' ಎಂದ, ತಾನು ಏನೂ ತಪ್ಪು ಮಾಡದವನಂತೆ. ಸಂಗಮೇಶನ ಹಿತವನ್ನೇ ತಾನು ಯಾವಾಗಲೂ ಕೋರುವಂತೆ ಇನ್ನೂ ನಾಲ್ಕು ಮಾತನಾಡಿ ಹೊರಟ.

ಈ ಪ್ರಸಂಗದಿಂದ ಬೇಸತ್ತ ಸಂಗಮೇಶ ಗೇಟಿನ ಒಳಹೊಕ್ಕು ಅದನ್ನು ಮುಚ್ಚುವಾಗ ದೂರದಲ್ಲಿ ಸಾಂಬಯ್ಯ ತನ್ನ ಸಿಡುಮೋರೆಯನ್ನು ಹೊತ್ತು ಬರುತ್ತಿರುವುದನ್ನು ನೋಡಿದ. ಅವನಿಗೆ ಎದುರು ಬಿದ್ದ ಬಸಪ್ಪ. ಪರಸ್ಪರ ಪರಿಚಯದವರಂತೆ ಮಾತನಾಡತೊಡಗಿದರು. ಸಂಗಮೇಶನಿಗೆ ಅದೇನೂ ಕೇಳಿಸುತ್ತಿರಲಿಲ್ಲ. ಅಲ್ಲಿಯೇ ನಿಂತಿದ್ದರೆ ಸಾಂಬಯ್ಯನಿಗೆ ತನ್ನ ಮೇಲೆ ಸಿಟ್ಟು ಬರಬಹುದೆಂದು ಹೆದರಿ, ತನ್ನ ಮನೆ ಹೊಕ್ಕು, ರೂಮಿನಲ್ಲಿದ್ದ ಮಂಚದ ಮೇಲೆ ಬಿದ್ದುಕೊಂಡ. ಆ ಬಸಪ್ಪನಿಂದ ಸಾಂಬಯ್ಯನಿಗೆ ತಾನು ಬೇರೆ ಮನೆ ಹುಡುಕುತ್ತಾ ಇರುವ ವಿಷಯ ಗೊತ್ತಾಗಿಬಿಡ್ತಲ್ಲಾ? ಇದರಿಂದ ಈ ಮನೆಯಲ್ಲಿ ತನ್ನ ಪರಿಸ್ಥಿತಿ ಮತ್ತಷ್ಟು ಹದಗೆಡುವುದು ಖಂಡಿತ. ಮೊದಲೇ ಅವನನ್ನು ಹೊಕ್ಕಿದ್ದ 'ಅನುಮಾನ ಪಿಶಾಚಿ' ಈಗ

ಹುಚ್ಚೆದ್ದು ಕುಣಿಯತೊಡಗಿತು. ಮುಂಗೋಪಿಯಾದ ಸಾಂಬಯ್ಯ ನಾಳೆಯೇ ಬಂದು ಮನೆ ಖಾಲಿ ಮಾಡೆಂದು ಹೇಳುವುದು ಖಚಿತ. ಆಗ ತಾನೇನು ಮಾಡುವುದು ? ಎಲ್ಲಿಗೆ ಹೋಗುವುದು ?

ಇದಕ್ಕೆಲ್ಲಾ ಮೂಲಕಾರಣ, ಬಸಪ್ಪನಿಗೆ ತನ್ನ ಮನೆ ಖಾಲಿಯಾಗುವುದೆನ್ನುವ ಸಮಾಚಾರ ಮುಂಚೆಯೇ ಗೊತ್ತಾಗಿದ್ದುದು. ಇದು ಅವನಿಗೆ ಹೇಗೆ ಗೊತ್ತಾಯಿತು ? ಬಸಪ್ಪ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಿರಲಿಲ್ಲ. ತಾನು ಅವನಿಗೆ ಮುಂಚೆ ಯಾವಾಗಲೂ ಹೇಳಿರಲಿಲ್ಲ. ಸಾಂಬಯ್ಯನೇ ಏನಾದರೂ ಅವನಿಗೆ ಹೇಳಿರಬಹುದೆ ? ಅಥವಾ ತನ್ನ ಹೆಂಡತಿಯೇನಾದರೂ ಬೇರೆಯವರ ಹತ್ತಿರ ಹೇಳಿ, ಆ 'ಬೇರೆ'ಯವರು ಬಸಪ್ಪನಿಗೆ ಹೇಳಿರಬಹುದೆ ? ತನ್ನ ಹೆಂಡತಿಯಿಂದ ವಿಷಯ ಹೊರಗಡೆ ಹೋಗಿಲ್ಲವೆಂದು ಸ್ಥಿರಪಡಿಸಿಕೊಂಡರೆ, ಸಾಂಬಯ್ಯನೇ ಬಸಪ್ಪನಿಗೆ ವಿಷಯ ಹೇಳಿರಬೇಕೆಂದೂ, ಅವನು ತನ್ನನ್ನು ಮನೆಯಿಂದ ಖಾಲಿ ಮಾಡಿಸುವುದು ಖಂಡಿತವೆಂದೂ ನಿಸ್ಸಂಶಯವಾಗಿಬಿಡುತ್ತದೆ. ಇಷ್ಟು ತಾರ್ಕಿಕವಾಗಿ ಯೋಚಿಸಿದ ಸಂಗಮೇಶ ಅಧಿಕಾರಯುತವಾಗಿ ಹೆಂಡತಿಯನ್ನು ಕರೆದು ''ನಾವು ಬೇರೆ ಮನೆಗೆ ಹೋಗಬೇಕೆಂದಿರುವ ವಿಷಯ ನೀನು ಯಾರಿಗಾದರೂ ಹೇಳಿದೆಯಾ ?'' ಎಂದು ಕೇಳಿದ.

''ಯಾರಿಗಾದರೂ ಯಾಕೆ ಹೇಳಲಿ ? ನನಗೆ ಯಾರೂ ಅಷ್ಟು ಪರಿಚಯವೇ ಇಲ್ಲ. ಏನೋ ಮಾತಿನಲ್ಲಿ ಒಂದು ದಿನ ಕೆಲಸದವಳ ಹತ್ತಿರ ಹೇಳಿದ್ದುಂಟು, ಅಷ್ಟೆ'' ಎಂದಳಾಕೆ.

ಅಂದು ಭಾನುವಾರ. ಅವನಿಗೆ ರಜ. ಆದರೆ ಮನಸ್ಸನ್ನು ಚಿಂತೆ ಆವರಿಸಿತ್ತು. ಕೆಲಸದ ಹೆಂಗಸು ನಿಂಗಮ್ಮ ಬರುವುದನ್ನೇ ಕಾದು ಕುಳಿತ. ಅವಳು ಬಂದೊಡನೆ, ''ಏನಮ್ಮಾ, ನಿಮ್ಮೆಜಮಾನ್ರು ಏನು ಕೆಲಸ ಮಾಡ್ತಾರೆ ?'' ಎಂದು ವಿಚಾರಿಸಿದ. ಎಂದೂ ತನ್ನೊಡನೆ ಮಾತನಾಡದ ಸಂಗಮೇಶ ಈ ರೀತಿ ಕೇಳಿದ್ದರಿಂದ ಆಶ್ಚರ್ಯವಾದರೂ, ಅದನ್ನು ತೋರ್ಪಡಿಸಿಕೊಳ್ಳದೆ ''ಬ್ರೋಕರ್ ಕೆಲಸ, ಸ್ವಾಮಿ'' ಎಂದಳು ನಿಂಗಮ್ಮ.

ಸಂಗಮೇಶ ಗಲಿಬಿಲಿಗೊಂಡ. ''ಅವರ ಹೆಸರೇನು ?'' ಎಂದು ಕೇಳಿದ.

''ಬಸಪ್ಪ ಸ್ವಾಮಿ. ಬ್ರೋಕರ್ ಬಸಪ್ಪ ಅಂದ್ರೆ ಎಲ್ಲರಿಗೂ ಗೊತ್ತು'' ಎಂದಳು ಅಭಿಮಾನದಿಂದ ಆ ಹೆಣ್ಣು. 'ಸತ್ತೆ' ಎಂದುಕೊಂಡ ಸಂಗಮೇಶ. ಆ 'ಅನಿಷ್ಟ'ನ ಹೆಸರು ಈಗ ತನಗೇ ಗೊತ್ತಿತ್ತು. ಅವನ ಮನಸ್ಸು ಪೂರ್ಣವಾಗಿ ಕುಗ್ಗಿ, ಕಂಗಾಲಾಯಿತು. ತನ್ನ ತರ್ಕದಲ್ಲಿ 'ಅ-ದೃಶ್ಯ'ವಾಗಿ ಉಳಿದುಕೊಂಡಿದ್ದ ಕೊಂಡಿ ಅವನಿಗೆ ಈಗ ಗೋಚರಿಸಿತ್ತು.

ಆದರೆ ಅದನ್ನೆಲ್ಲಾ ಈಗ ಯೋಚಿಸಿ ಪ್ರಯೋಜನವಿಲ್ಲ. ವಿಷಯ ಸಾಂಬಯ್ಯನಿಗೆ ಬಸಪ್ಪನಿಂದ 'ಆಕಸ್ಮಿಕ'ವಾಗಿ ತಿಳಿದುಹೋಯಿತಲ್ಲಾ! ಇನ್ನು ತನಗೆ 'ಗೇಟ್‌ಪಾಸ್' ಖಂಡಿತ. ಬೇರೆ ಮನೆ ಹುಡುಕಲೇಬೇಕು. ಸಾಮಾನುಗಳನ್ನು ಸಾಗಿಸಲೇಬೇಕು. ಅಬ್ಬಾ, ಅದೆಲ್ಲಾ ನೆನೆಸಿಕೊಂಡರೇನೆ ಹೇಗಪ್ಪಾ ಎಂದು ಮನಸ್ಸಿಗೆ ಭಯವಾಗುತ್ತೆ. ಸಂಗಮೇಶ ಪುನಃ ಮನೆಯ ಬೇಟೆಗೆ ಬೆಳಿಗ್ಗೆಯೇ ಹೋಗಬೇಕೆಂದೂ, ಬಸಪ್ಪನಂತಹ 'ಬ್ರೋಕರ್'ಗಳನ್ನು ನೋಡದೆ, ಒಳ್ಳೆಯ ದೊಡ್ಡ 'ಬ್ರೋಕರ್'ಗಳನ್ನು ನೋಡಬೇಕೆಂದೂ, ದೃಢ ನಿರ್ಧಾರಕ್ಕೆ ಬಂದು ಸ್ನಾನದ ಮನೆಗೆ ಹೋದ.

ಸ್ನಾನ ಮುಗಿಸುತ್ತಿರುವಂತೆಯೇ ಯಾರೋ ಹೊರಗಡೆ ಬಾಗಿಲು ತಟ್ಟಿದ ಶಬ್ದವಾಯಿತು. ಸೀತಾಲಕ್ಷ್ಮಿ ನೋಡಿ ಬಂದು, ಮೆತ್ತಗೆ ಸಾಂಬಯ್ಯ ಬಂದಿರುವುದಾಗಿ ಹೇಳಿದಳು. ಸಂಗಮೇಶನ ಹೃದಯ ಡವಡವನೆ ಹೊಡೆದುಕೊಂಡಿತು. ಸಾಂಬಯ್ಯನ ಅಂತಿಮ ಪ್ರಹಾರಕ್ಕೆ ಸಿದ್ಧನಾಗುವವನಂತೆ ಆತುರಾತುರವಾಗಿ ಬಟ್ಟೆ ಹಾಕಿಕೊಂಡು, ಸಾಂಬಯ್ಯನ ಮುಂದೆ ಹಲ್ಲುಕಿರಿಯುತ್ತಾ ನಿಂತು, ''ಬನ್ನಿ, ಬನ್ನಿ'' ಎಂದ.

ಅವನ ಆಹ್ವಾನ 'ಸಿಡುಮೋರೆ'ಯ ಸಾಂಬಯ್ಯನಿಗೆ ಬೇಕೆನಿಸಲಿಲ್ಲ. ''ಕೂತುಕೊಳ್ಳುವುದಕ್ಕೆ ನನಗೆ ಟೈಮಿಲ್ಲ. ತೆಗೆದುಕೊಳ್ಳಿ. ಇದು ಮುಂದಿನ ಹನ್ನೊಂದು ತಿಂಗಳಿಗೆ ಡ್ರಾಫ್ಟ್ ಅಗ್ರಿಮೆಂಟ್. ಇದನ್ನು ಸ್ಟಾಂಪ್ ಪೇಪರ್ ಮೇಲೆ ಟೈಪ್ ಮಾಡಿಸಿಕೊಂಡು ಬನ್ನಿ. ಸೈನ್ ಮಾಡುತ್ತೇನೆ'' ಎಂದು ಹೇಳಿ ಕಾಗದವನ್ನು ಕೊಟ್ಟು ಹೊರಟುಹೋದ.

ಆ ಕಾಗದವನ್ನು ಕೈಯಲ್ಲಿ ಹಿಡಿದ ಅವನಿಗೆ ೧೨ ವರ್ಷಗಳ ಹಿಂದೆ ಫಸ್ಟ್‌ಕ್ಲಾಸ್ ಬಿ.ಎ. ಡಿಗ್ರಿ ಸರ್ಟಿಫಿಕೇಟನ್ನು ತೆಗೆದುಕೊಂಡಾಗ್ಗಿಂತಲೂ ಅಧಿಕ ಸಂತೋಷವಾಯಿತು. 'ಉಸ್ಸಪ್ಪಾ' ಎಂದು ಮಂಚದ ಮೇಲೆ ಕೂತು ಗಟ್ಟಿಯಾಗಿ ನಗಲು ಶುರು ಮಾಡಿದ.

ಗಾಬರಿಗೊಂಡ ಸೀತಾಲಕ್ಷ್ಮಿ ''ಇದೇನ್ರೀ, ನಿಮ್ಮಷ್ಟಕ್ಕೆ ನೀವೇ ನಗ್ತಾ ಇದ್ದೀರಿ. ಹುಚ್ಚುಗಿಚ್ಚು ಹಿಡೀತೇನು ?'' ಎಂದು ಪ್ರಶ್ನಿಸಿದಳು.

''ನಿನಗೆ ಫ್ರಾಯ್ಡ್ ಗೊತ್ತಾ ?'' ಎಂದು ಕೇಳಿದ ಸಂಗಮೇಶ.

''ಅಯ್ಯೋ, ನನಗೇನು ಗೊತ್ತು? ನನಗೆ ಸಂಗಮೇಶ ಗೊತ್ತು ಅಷ್ಟೆ'' ಎಂದಳು ಸೀತಾಲಕ್ಷ್ಮಿ ನಗುತ್ತಾ.

''ಫ್ರಾಯ್ಡ್ ಒಬ್ಬ ಪ್ರಸಿದ್ಧ ಮನಶ್ಶಾಸ್ತ್ರಜ್ಞ. ಅವನ ಪ್ರಕಾರ ಮನಸ್ಸಿನಲ್ಲಿ ಯಾವುದೇ ಕಾರಣಕ್ಕೆ ಶೇಖರವಾಗಿರುವ ದುಗುಡದ ಒತ್ತಡವು ಒಮ್ಮೆಗೇ ಬಿಡುಗಡೆಯಾಗಿಬಿಟ್ಟರೆ, ಹೀಗೆ ನಗುವಿನಲ್ಲಿ ಪ್ರಕಟವಾಗುವುದಂತೆ'' ಎಂದು ತಾನು ಅಲ್ಪ ಸ್ವಲ್ಪ ಓದಿದ್ದ ಫ್ರಾಯ್ಡ್‌ನ ನಗುವಿನ ಸಿದ್ಧಾಂತವನ್ನು ವಿವರಿಸಿ ಹೇಳಿದ.

ಸಾಂಬಯ್ಯ ಬಾಡಿಗೆಯನ್ನು ಜಾಸ್ತಿ ಮಾಡಿರಲಿಲ್ಲ! ತಾರೀಕುಗಳ ವಿನಃ ಅದರಲ್ಲಿ ಬೇರೇನೂ ವ್ಯತ್ಯಾಸವಿರಲಿಲ್ಲ. ಸಾಂಬಯ್ಯನ 'ಸಿಡುಮೋರೆ'ಯನ್ನು ನೋಡಿ ತಾನು ಊಹಿಸಿದ್ದೆಲ್ಲವೂ ಎಷ್ಟು ತಪ್ಪು! ಅನಾವಶ್ಯಕವಾಗಿ ಬಸಪ್ಪನನ್ನು ಮನಸ್ಸಿನಲ್ಲಿ ಬೈದುಕೊಂಡಿದ್ದೂ ಆಗಿದ್ದಿತು. ಆದರೆ, ಈಗ ನೋಡಿದರೆ, ಬಸಪ್ಪನಿಂದ ವಿಷಯ ತಿಳಿದಿದ್ದರಿಂದಲ್ಲವೆ, ಸಾಂಬಯ್ಯ ಅವಧಿ ಮುಗಿಯುವುದಕ್ಕಿಂತ ಮುಂಚೆಯೇ ಹೊಸ ಅಗ್ರಿಮೆಂಟ್ ಸಿದ್ಧಪಡಿಸಿ ಕೊಡುತ್ತಿರುವುದು. ತನ್ನ ಮನೆಗೆ ತನ್ನನ್ನೇ ಕರೆದುಕೊಂಡುಬಂದು ಉಪಕಾರವನ್ನೇ ಮಾಡಿದ್ದನಲ್ಲವೆ ಅವನು ? ಬೇರೆ ಮನೆಯನ್ನು ತೋರಿಸುವುದಕ್ಕಿಂತಲೂ ಇದೇನು ಕಡಿಮೆ ಉಪಕಾರವೆ ? ಇದಕ್ಕಾಗಿ ಕೃತಜ್ಞತೆಯಿಂದ ಸ್ಮರಿಸಿದ ಸಂಗಮೇಶ ಬಸಪ್ಪನನ್ನು.

**ಪ್ರೊ॥ ಜಿ. ಶ್ರೀನಿವಾಸನ್**
೨೩೬೪, ೧ನೇ ಮಹಡಿ, ೧೨ನೇ ಮುಖ್ಯರಸ್ತೆ, 'ಎ' ಬ್ಲಾಕ್, ಎರಡನೇ ಹಂತ
ಸುಬ್ರಹ್ಮಣ್ಯನಗರ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

(೨೫ ನೇ ಪುಟದಿಂದ)

ಇನ್ನಿಬ್ಬರು. ಅವರ ಕಷ್ಟ ಸುಖಗಳ ಕೇಳಿಕೊಂಡು ೬ ಕಿ.ಮೀ. ಮುಗಿಯುವ ಹೊತ್ತಿಗೆ ರಾತ್ರಿ ೯ ಆಗಿತ್ತು.

ಊಟಕ್ಕೆ ಕೂತೆ.

ಪಾನಿಪೂರಿಗೂ ಸ್ವಲ್ಪ ದೊಡ್ಡದಾದ ಎರಡು ರೊಟ್ಟಿ. ಅದಕ್ಕೆ ೪ ಚಮಚ ಪಲ್ಯ. ನಲ್ಲಿ ನೀರಿಗೂ ತೆಳ್ಳಗಿರುವ ಒಂದು ಸಣ್ಣ ಲೋಟ ಮಜ್ಜಿಗೆ.

ಈ ಕಾಲದಲ್ಲಿ ದಪ್ಪಗಿರೋರ ನಾರ್ಮಲ್ ಡಯಟ್ ಇದು. ಸಾಧಾರಣ ಎಲ್ಲರೂ ೨ ಸುಖಾ ರೊಟ್ಟಿ, ಒಂದಿಷ್ಟು ಪಲ್ಯ ಮತ್ತೆ ಮಜ್ಜಿಗೆ, ಇಷ್ಟೇ ನಮ್ಮ ಊಟ ಅಂತ ಹೇಳೋದನ್ನ ನಾನು ಎಷ್ಟೋ ಸಲ ಕೇಳಿದೀನಿ. ನಾನು ತಿನ್ನೋದೂ ಅಷ್ಟೆ. ಆದ್ರೆ ಇಲ್ಲಿ ಒಂದು ಸಣ್ಣ ರೌಂಡ್ ಚಪಾತಿ ಕಡಿಮೆ ಇತ್ತು. ಅಷ್ಟೆ. ಪರವಾಗಿಲ್ಲ ಅಂದುಕೊಂಡು ನನ್ನ ವಾಸ್ತವ್ಯಕ್ಕೆ ವಾಪಸಾದೆ. ಕೈಕಾಲು ಪದ ಹೇಳುತ್ತಿತ್ತು. ತಲೆ ಇಟ್ಟದ್ದೇ ದಿಂಬಿಗೆ ಎಚ್ಚರ ಆದಾಗ ೬ ಘಂಟೆ. ಪ್ರಾತರ್ವಿಧಿ ಮುಗಿಸಿ ತಿಂಡಿಗೆ ಸಿದ್ಧನಾದೆ. ತಿಂಡಿಯೇನೋ ನಾವಿದ್ದ ಜಾಗಕ್ಕೆ ಬಂದು ಸಿದ್ಧವಾಗಿತ್ತು. ಟೋಕನ್ ಕೊಟ್ಟೆ. ಇಡ್ಲಿವಡೆ ಸಾಂಬಾರ್ ಮತ್ತು ಕಾಫಿ. ಖುಷಿ ಆಯ್ತು. ರೂಪಾಯಿ ನಾಣ್ಯದ ಒಂದುವರೆ ಅಷ್ಟಿತ್ತು ಇಡ್ಲಿ. ಉದ್ದಿನ ವಡೆಗೆ ತೂತೇ ದೊಡ್ಡದು. ವಡೆಯೂ ಅದೇ ಸೈಜಿತ್ತು. ಆದರೆ ಬಹಳ ರುಚಿಯಾಗಿತ್ತು. ಇನ್ನೊಂದು ಕೇಳಿದೆ.

'ಇದೆ, ಆದರೆ ಕೊಡುವ ಹಾಗಿಲ್ಲ...... ಟ್ರೀಟ್‌ಮೆಂಟ್...' ಜೊಳ ಜೊಳ ಜೊಳ ಅಂತ ಸಣ್ಣ ಲೋಟ ಕಾಫಿ ಕೊಟ್ರು.

ನೀವು ಕೇಳಬಹುದು, ಇದು ಮಾಮೂಲು ಊಟವೇ ಅಂತ. ಖಂಡಿತ ಇಲ್ಲ. ಆದರೆ ಇಡ್ಲಿ, ವಡೆ, ಸಾಂಬಾರ್, ಕಾಫಿ, ರೊಟ್ಟಿ, ಪಲ್ಯ - ಒಂದು ತರಹ ಮನಸ್ಸಿಗೆ ಸಮಾಧಾನ. ಇದನ್ನು ತಿಂದು, ನೀರನ್ನು ಧಾರಾಳವಾಗಿ ಕುಡಿಯಬಹುದಿತ್ತಲ್ಲ. ಮಧ್ಯಾಹ್ನದ ಊಟವೂ ಮಜ. ಅಂಗೈ ಅಗಲದ ಫ್ಲಾಟ್ ತಟ್ಟೆಯಲ್ಲಿ ಬಿಸಿಬಿಸಿ ಅನ್ನ ಉದುರಿಸಿದ ಹಾಗೆ. ಅದಕ್ಕೆ ರಸಂ (ನೀರಿಗೆ ಉಪ್ಪು ಖಾರ), ಪಲ್ಯ ಸೊಪ್ಪಿನದು, ಮತ್ತೆ ಮಜ್ಜಿಗೆ ಎಂಬ ಕಣ್ಣೀರು. ಎಲ್ಲವೂ ಇಲ್ಲ - ಎಲ್ಲವೂ ಇದೆ ಅನ್ನುವ ಮನೋಭಾವ ಮನಸ್ಥೈರ್ಯಕ್ಕೆ ಸವಾಲು. ೪೮ ದಿನ ಇದ್ದೆ. ತೂಕ ಇಳಿದಿತ್ತು. ೬ ಕೆ.ಜಿ. ಹೊರಡಲು ಅನುವಾದೆ. ಪ್ಯಾಂಟ್ ತುಂಬ ಲೂಸ್ ಆಗಿ ಬಿದ್ದು ಹೋಗುವ ಸ್ಥಿತಿಯಲ್ಲಿತ್ತು. ಪಂಚೆ ಉಟ್ಟು ಹೊರಟೆ. ನಿಮ್ಮ ಒಂದು ಕೆ.ಜಿ. ತೂಕದ ಬೆಲೆ ೧೫೦೦ರೂ. ಮಾತ್ರ. ರೂ. ೯೦೦೦ ತುಂಬಿ ರಸೀತಿ ಪಡೆಯಿರಿ, ಧನ್ಯವಾದಗಳು. ಮತ್ತೊಮ್ಮೆ ಬನ್ನಿ. ನೀವು ವಾಪಸ್ ಆದ ಮೇಲೆ ಊಟ ಮಾಮೂಲು ಎಂದು ಬರೆದಿತ್ತು. ಇದನ್ನು ಓದಿದ ತಕ್ಷಣ ಕುಸಿದು ಬಿದ್ದೆ. ವಾಪಸಾದೆ ಊರಿಗೆ. ಊಟದ ಬರ, ತಿಂಡಿ ಬರ, ಕಾಫಿ ಬರ, ಐಸ್‌ಕ್ರೀಂ ಬರ ಎಲ್ಲವನ್ನೂ ತೃಪ್ತಿಪಡಿಸಿದೆ. ಇಳಿದ ತೂಕಕ್ಕೆ ಮತ್ತೆ ೪ ಕೆ.ಜಿ. ತೂಕ ಈಗ ಸೇರಿಕೊಂಡು ದೊಡ್ಡ ಮನುಷ್ಯನಾಗಿದ್ದೇನೆ. ಹೀಗೆ ಇರ್ತೀನಿ ಇರೋ ಅಷ್ಟು ದಿನ, ದೇವರಿಗೆ ಎಳ್ಳು ದೀಪ ಹಚ್ತ.

**ಎಸ್. ಜಿ. ರಘುರಾಂ**
ನಂ. ೭೬, ಮಾರುತಿ ದೇವಸ್ಥಾನ, ೪ನೇ ಮುಖ್ಯರಸ್ತೆ, ಕುವೆಂಪುನಗರ, ಮೈಸೂರು-೨೩

## ಅವಳು.....

ಅವಳು,
ತವರ ಬಿಟ್ಟು ನನ್ನಪ್ಪನ ಮನೆಗೆ......
ಮೈತುಂಬ ಬಯಕೆಗಳ ಅರಿಶಿಣ ಬಳಿದುಕೊಂಡು,
ಕಣ್ತುಂಬ ಕನಸ ನಕ್ಷತ್ರಗಳ ಮಿಂಚು ತುಂಬಿಕೊಂಡು,
ಒಡಲ ತುಂಬ ಹೊಸತನದ ಹಸಿವು ತುಂಬಿಕೊಂಡು,
ಮೈಯೆಲ್ಲ ಹಾಡಾಗಿ ನಲಿದು ಬಂದಾಕೆ.

ಕತ್ತಲೆಯ ಚಾದರ ಹೊದ್ದು ಬಿದ್ದಲ್ಲೇ ಮುದುಕನಂತೆ
ಬಿದ್ದುಕೊಂಡಂತಿದ್ದ ಮನೆಯ
ಮೂಲೆಮೂಲೆಯಲ್ಲೂ, ಜಡ್ಡಿನ ಜೇಡ ಕೊಡವಿ
ಸಡಗರದ ದೀಪ ಮುಡಿಸಿ
ತನ್ನ ನಗೆಯ ಬೆಳಕಲ್ಲಿ ಮನೆಯೆಲ್ಲ
ಮುಗುಳು ನಗುವಂತೆ ಮಾಡಿದಾಕೆ.



ಬಿಸುಗೆಯ ಬಿಸಿ ಆರಿದ ಮೇಲಿನ
ಅಪ್ಪನ ಅಪರೂಪದ ಮುದ್ದುಗಳಿಗೆ,
ಅದನಂತರದ ಅಸಹನೆಗಳಿಗೆ,
ಸುಮ್ಮ ಸುಮ್ಮನೆ ಉಕ್ಕಿ ಬಂದ ಸಿಟ್ಟುಗಳಿಗೆ,
ಮೈಗಿಂತ ಮನಸ ನೋಯಿಸಿದ ಪೆಟ್ಟುಗಳಿಗೆ,
ಆಟಿಕೆಯಾದಾಕೆ.....

ಅಪ್ಪನ ಸಿಟ್ಟಿನ ಕುಲುಮೆಯೊಳಗೆ
ಅವಳೆಲ್ಲ ಕನಸುಗಳು
ಕರಗಿಹೋಗತೊಡಗಿದಂತೆಲ್ಲ,
ತನ್ನ ಕರುಳ ಬಳ್ಳಿಯಿಂದರಳಿ ಬಂದ
ಕುಸುಮಗಳ ತುಂಬ ಕನಸುಗಳ
ಜೇನ ತುಂಬಿದಾಕೆ.....

ಕಣ್ಣ ಕೆಳಗೆ ಕಪ್ಪುಗೆರೆಗಳು ಕಾಣುವತನಕ
ಉಸಿರುಗೊಳವೆಯ ಊದಿ
ಒಲೆಯ ಉರಿಸಿ,
ತನ್ನೊಡಲಿಗೇ ಬೇಗೆ ತಾಗಿಸಿಕೊಂಡಾಕೆ....
ಮೈಯೆಲ್ಲ ಭಾರ, ಮನಸೆಲ್ಲ ಖಾಲಿಖಾಲಿ
ಆಸೊಂದು ನೋವ ನಡುವೆಯೂ
ಮೌನವಾಗಿ ಬಿಕ್ಕುತ್ತಲೇ
ಬೆಳಕ ಹರಿಸಿದಾಕೆ,
ನಕ್ಕು,
ಪ್ರೀತಿ ಸುರಿಸಿದಾಕೆ....

ಮೂಗ ಮುತ್ತಿನ ಮಿಂಚು
ಕಿವಿಯ ಓಲೆಯ ಹೊಳಪು
ಕರಿಮಣಿಯ ಸ್ಪರ್ಶವಾದಂತೆಲ್ಲ
ಮೊದಲ ರಾತ್ರಿಯ ನೆನೆದು
ನಾಚಿ ನೀರಾದಾಕೆ.....

ಅವಳ ಮಮತೆಯ ಸೆರಗಿನೊಳಗೇ
ಅರಳುತ್ತಿದ್ದ ನಮ್ಮ ಬೆಳಗುಗಳು
ಸಂಜೆಯ ದೀಪ ಮಾಸಿದಂತೆಲ್ಲ
ಮಗ್ಗಿಗಳೊಪ್ಪಿಸುತ್ತ,
ತೂಕಡಿಕೆಯ ನಡು ತುತ್ತನುಂಗುತ್ತ
ಮುದುಡುತ್ತಿದ್ದ ರಾತ್ರಿಗಳು.....

ಅವಳು.......,
ಈಗಲೂ ಅವಳಾಗಿಯೇ ಇದ್ದಾಳೆ,
ತನ್ನ ಕರುಳ ಬಳ್ಳಿಯ ಮೊಗ್ಗುಗಳರಳುವುದ
ಖುಷಿಯಿಂದ ನೋಡುತ್ತ,
ಬಣ್ಣ ಬಣ್ಣದ ಕನಸುಗಳ ಕೌದಿಯ ಹೊಲಿಯುತ್ತ,
ಅವನ ಹಲ್ಲಿಲ್ಲದ ಬಾಯಿಗೆ, ಅಡಿಕೆ ಕುಟ್ಟುತ್ತ
ಎದೆಯೊಳಗಿನ ಪತ್ತಲದಾಸೆಯಂಚಿಗೆ
ಮೆರುಗಿನ ಮಿಂಚ ಕಟ್ಟುತ್ತ,
ಮತ್ತಾರದೋ ದಾರಿ ಕಾಯುತ್ತ......

**ಛಾಯಾ ಭಗವತಿ**
ನಂ. ೧೪, ಶುಭಾರಾಮ್ ವರ್ಕಿಂಗ್ ವುಮೆನ್ಸ್ ಹಾಸ್ಟೆಲ್
೧೫ನೇ ಕ್ರಾಸ್, ಮೂರನೇ ಟೆಂಪಲ್ ಸ್ಟ್ರೀಟ್
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩.

## ನನ್ನ ದೇವರು



ದೇವರು ಅಂದರೆ ಮೂಡುವ
ಸೂರ್ಯನ ಕೆಂಪು
ಹೃದಯಾಂತರಾಳದಿಂದ
ಹೊರಹೊಮ್ಮುವ
ಕರುಣೆಯ ಹಾಡು ದೇವರು
ದೇವರು ಅಂದರೆ ಬೀಳುವ ಮಳೆ
ಹರಿಯುವ ಹೊಳೆ
ಬೇಲಿಯ ಮೇಲಿನ ನೀಲಿ ಹೂ
ದೇವರು.
ಹಂಚಿಕೊಳ್ಳುವ ರೊಟ್ಟಿ ದೇವರು ಕೆಂಡ ಸಂಪಿಗೆಯ ಕಂಪು ದೇವರು
ದೇವರು ಅಂದರೆ ಮಗುವಿನ ನಗು
ಧ್ಯಾನ, ಚಲಿಸುವ ಮೋಡ, ಹಾರುವ ಹಕ್ಕಿ
ತಂಗಾಳಿಗೆ ತಲೆದೂಗುವ ತೆಂಗು ದೇವರು.
ದೇವರು ಅಂದರೆ ಎತ್ತರ ಬೆಟ್ಟದ ತುಟ್ಟ ತುದಿಯ
ಮೇಲಿಂದ ಸುತ್ತಲೂ ಕಾಣುವ ಕಾನನದ ಹಸಿರು
ಮರದಿಂದ ಉದುರಿ ನಿರಾಮಯವಾಗಿ
ವಿರಮಿಸುವ ಹಳದಿ ಎಲೆ ದೇವರು
ದೇವರು ಅಂದರೆ ಸಂಭೋಗದ ಶಿಖರ ಸುಖ
ಬಾನಂಚಿನ ಕೋಲ್ಮಿಂಚು ದೇವರು ಹೆರಿಗೆಯ ನೋವು ದೇವರು
ಮುಚ್ಚಿದ ಕಣ್ಣುಗಳಿಗೆ ಕಾಣುವ ಕೊನೆಯಿಲ್ಲದ ಬಯಲು ದೇವರು
ದೇವರು ಅಂದರೆ ಉಸಿರಾಟ, ಬಂಡೆಗಲ್ಲು ದೇವರು
ದುಡಿಮೆ ದೇವರು ದುಡಿಮೆಯ ಬೆವರು ದೇವರು
ನಾನು ದೇವರು ನೀನು ದೇವರು
ನಮ್ಮ ನಡುವಿನ ಇಂದಿನ ಈಗಿನ ಈ ಗಳಿಗೆ
ಈ ಗಳಿಗೆ ದೇವರು.

**ಸಂಕುಲಜೀವ**
ಮಲ್ಲಿಗೆ, ೧೯/೨, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ - ೫೮೦ ೦೦೭

## ಅರ್ಥಕಳಕೊಳ್ಳುವ ಹೊತ್ತು

ಲಕ್ಷ ಜ್ಯೋತಿಯ
ಬೆಳಕ ಬೀರಿದರೂ ಕನಸುಗಳು
ಬುರ್ಖಾದೊಳಗಿನ ಕತ್ತಲು
ಬೆಳಕ ಕಾಣಲಿಲ್ಲ
ದಿಟ್ಟಿಗೇ ಬಿದ್ದಿತ್ತು ಪೊರೆ
ಕಿವಿ ತೆರೆದರೆ ಅದೇ ಕತ್ತಲ ಸದ್ದು

ವಸಂತ ಬಂತೆಂದು ;
ಗಿಡಮರ ಚಿಗುರಿದವು
ರಾತ್ರಿ ನಕ್ಷತ್ರಗಳು ಹೊಳೆದವು
ಹಗಲು ಸೂರ್ಯ ಸುಡುತ್ತಿದ್ದ
ಕನಸ್ಯಾರಿಗೆ ಬೇಕು ?
ನೆನಪೇ ಸಾಕೆಂದಿತು ಬುರ್ಖಾ



ಹೃದಯದಲ್ಲಿ ಈಟಿ ಮೀಟಿದ
ವೇದನೆ ;

ಕಣ್ಣು ಹನಿಗೂಡಿದರೆ ಕಾಣುವುದಿಲ್ಲ
ಹಾಸಿಗೆ ಮೇಲಷ್ಟೇ ಬೆತ್ತಲೆ ಮೈ
ಆಗಲೂ ಬೆಳಕು ಸಹನೀಯವಲ್ಲ
ತೆರೆದ ತೋಳೊಳಗೆ ಕೊಂಕಿದ
ಕೂದಲು,
ಕಪ್ಪು ಖಂಡದೊಳಗದುವೇ ಬೆಳಕು
'ಬೆಳಕು
ಬೆಳಕ ಅರ್ಥ ಕಳಕೊಳ್ಳುವ
ಹೊತ್ತು'

**ಶಿ. ಜು. ಪಾಶ**
ಇ/ಮ, ಅಮೀರ್, ಮೂರನೇ ತಿರುವು,
ಕರೆ ಅಂಗಳ, ಮಿಳಘ ಘಟ್ಟ, ಶಿವಮೊಗ್ಗ

# ಹೋರಾಟಗಾರ ಜಗನ್ನಾಥನ್



ತಮಿಳುನಾಡಿನಲ್ಲಿ ಗ್ರಾಮಸ್ವರಾಜ್ಯ ಚಳುವಳಿ ಬಿರುಸಾಗಿ ನಡೆಯುತ್ತಿದೆ. ಅದಕ್ಕೆ ಆಧಾರಸ್ತಂಭವಾಗಿ ನಿಂತಿರುವವರು ೯೦ ವಯಸ್ಸಿನ ನಿಸ್ಸೀಮ ಹೋರಾಟಗಾರ ಜಗನ್ನಾಥನ್ ಮತ್ತು ಅವರ ಪತ್ನಿ ಕೃಷ್ಣಮ್ಮ (ಜಗನ್ನಾಥನ್ ಹುಟ್ಟಾ ಬ್ರಾಹ್ಮಣರು, ಕೃಷ್ಣಮ್ಮ ಹರಿಜನ). ಬಡವರ ಪರವಾಗಿ ಅವರು ನಡೆಸುತ್ತಿರುವ ಸತ್ಯಾಗ್ರಹಗಳಿಗೆ ಪೂರ್ಣ ವಿರಾಮ ಇಲ್ಲವೇ ಇಲ್ಲ. ಈ ಇಳಿವಯಸ್ಸಿನಲ್ಲಿಯೂ ಜಗನ್ನಾಥನ್ ದಂಪತಿಗಳು ಬಿಡುವಿಲ್ಲದೆ ಹಳ್ಳಿಗರಿಗಾಗಿ, ದೀನರಿಗಾಗಿ, ದರಿದ್ರರಿಗಾಗಿ ದುಡಿಯುತ್ತಿದ್ದಾರೆ. ದೀನದಲಿತರ ಸೈನ್ಯವನ್ನೇ ಕಟ್ಟಿ ನಿಮ್ಮ ಉದ್ಧಾರ ನಿಮ್ಮ ಕೈಲೇ ಇದೆ, ಯಾವ ಸರ್ಕಾರವೂ, ಯಾವ ಹೊಟ್ಟೆತುಂಬಿದವರೂ ನಿಮ್ಮ ಸಹಾಯಕ್ಕೆ ಬರುವುದಿಲ್ಲ, ನಿಮ್ಮನ್ನು ನೀವು ಸಂಘಟನೆ ಮಾಡಿಕೊಂಡು ಹೋರಾಡುವುದೊಂದೇ ಇರುವ ಏಕೈಕ ಮಾರ್ಗ ಎಂದು ಬೋಧಿಸಿ ಅವರನ್ನು ಹೋರಾಟಕ್ಕೆ ಜಗನ್ನಾಥನ್ ಇಳಿಸುತ್ತಾರೆ. ಅವರು ಇದುವರೆಗೆ ನಡೆಸಿರುವ ೨-೩ ಹೋರಾಟಗಳನ್ನು ಕುರಿತು ವಿವರಿಸಲು ಇಚ್ಛಿಸುತ್ತೇನೆ.

**ದೇವಾಲಯದ ಭೂಮಿಗಾಗಿ ಸತ್ಯಾಗ್ರಹ**

ಮಧುರೆ ಜಿಲ್ಲೆಯ ಶ್ರೀ ಮೀನಾಕ್ಷಿ ದೇವಾಲಯದ ಹಾಗೂ ತಂಜಾವೂರು ಜಿಲ್ಲೆಯ ವಲಿವಾಳಂ ದೇವಾಲಯ ಭೂಮಿಯ ಸಲುವಾಗಿ ಸತ್ಯಾಗ್ರಹಗಳು ನಡೆದುವು. ಈ ದೇವಾಲಯಗಳ ಮಾನ್ಯದ ಜಮೀನುಗಳನ್ನು ಶ್ರೀಮಂತ ಜಮೀನುದಾರರು ಬಹುಕಾಲದಿಂದಲೂ ದುರುಪಯೋಗಪಡಿಸಿಕೊಳ್ಳುತ್ತಿದ್ದರು. ಟೆನನ್ಸಿ ಕಾಯಿದೆ ಜಾರಿಗೆ ಬಂದ ಮೇಲೆ ದೇವಾಲಯಗಳ ಹಾಗೂ ಟ್ರಸ್ಟ್‌ಗಳ ಜಮೀನನ್ನೆಲ್ಲ ಅದನ್ನು ಅನೇಕ ಕಾಲದಿಂದ ಸಾಗು ಮಾಡುತ್ತಿದ್ದ ರೈತರಿಗೇ (ಅವರು ಸ್ವತಃ ಭೂಮಿ ಹೊಂದಿರದಿದ್ದರೆ) ಕೊಡಬೇಕು ಎಂಬ ಕಾನೂನು ಜಾರಿಗೆ ಬಂತು. ಆದರೆ ಅದು ಹಾಗಾಗಲಿಲ್ಲ. ಬೇನಾಮಿ ಹೆಸರುಗಳಲ್ಲಿ ದೇವಾಲಯದ ಆ ಜಮೀನುಗಳನ್ನೆಲ್ಲ ಶ್ರೀಮಂತ ವರ್ಗದ ಭೂಮಾಲೀಕರೇ ಅನುಭವಿಸುತ್ತಿದ್ದರು.

ಮೀನಾಕ್ಷಿ ದೇವಾಲಯಕ್ಕೆ ಸೇರಿದ ಜಮೀನಿನ ಸತ್ಯಾಗ್ರಹವನ್ನು ಜಗನ್ನಾಥನ್, ರೆವರೆಂಡ್ ಖೈತಾನ್ ಹಾಗೂ ಆಂಧ್ರದ ಗೋರಾ ಇವರ ನೇತೃತ್ವದಲ್ಲಿ ಆರಂಭಿಸಲಾಯಿತು. ರೈತರೂ ಸೇರಿದಂತೆ ೨೫೦ ಜನರನ್ನು ಪೊಲೀಸರು ಅರೆಸ್ಟ್ ಮಾಡಿ, ಮಧುರೆ ಸೆರೆಮನೆಗೆ ದೂಡಿದರು. ಆಗ ಕಾಮರಾಜರು ತಮಿಳುನಾಡಿನ ಮುಖ್ಯಮಂತ್ರಿಯಾಗಿದ್ದರು. ಅವರು ಕಂದಾಯ ಸಚಿವ ಕಕ್ಕನ್‌ರವರನ್ನು ಈ ವಿವಾದ ಬಗೆಹರಿಸಲು ಕಳಿಸಿಕೊಟ್ಟರು. ವಿವಾದದ ಜಮೀನು ಇದ್ದ ನೀಲಂಪಟ್ಟಿ ಗ್ರಾಮಕ್ಕೆ ಭೇಟಿ ನೀಡಿ ಅವರು ಅಲ್ಲಿದ್ದ ಮೀನಾಕ್ಷಿ ದೇವಾಲಯಕ್ಕೆ ಸೇರಿದ್ದ ೩೨೦ ಎಕರೆ ಜಮೀನನ್ನೂ ೩೨ ಭೂಹೀನ ರೈತರಿಗೆ ಹಂಚಿಕೊಟ್ಟರು. ಆ ನಂತರ ಅವರು ಸೆರೆಮನೆಯಲ್ಲಿದ್ದ ಈ ಸತ್ಯಾಗ್ರಹಿಗಳನ್ನು ಭೇಟಿಮಾಡಿದ್ದರಲ್ಲದೆ ಅವರನ್ನೆಲ್ಲ ಬಿಡುಗಡೆ ಮಾಡಿಸಿದರು. ಕಾಮರಾಜರು ಮುಖ್ಯಮಂತ್ರಿಯಾಗಿರುವಾಗ, ರೆವರೆಂಡ್ ಖೈತಾನರಂತಹ ದೈವಭಕ್ತರನ್ನೂ, ಗೋರಾ ಮತ್ತು ಜಗನ್ನಾಥನ್ ಅವರಂತಹ ಸಜ್ಜನರನ್ನೂ ಸೆರೆಮನೆಯಲ್ಲಿಟ್ಟುದಕ್ಕೆ ತಮ್ಮ ವ್ಯಥೆ ವ್ಯಕ್ತಪಡಿಸಿದರು.

ವಲಿವಾಳಂ ದೇವಾಲಯ ಭೂಮಿಯ ಸತ್ಯಾಗ್ರಹ ೧೯೭೨ರಿಂದ ೭೪ರವರೆಗೆ ಎರಡು ವರ್ಷ ಕಾಲ ಅವ್ಯಾಹತವಾಗಿ ನಡೆಯಿತು. ಅಲ್ಲಿ ಸಾವಿರ ಎಕರೆಗೆ ಮೇಲ್ಪಟ್ಟು ದೇವಾಲಯದ ಜಮೀನುಗಳು ಒಬ್ಬ ಮಿರಾಸ್‌ದಾರರಿಂದ ದುರುಪಯೋಗಕ್ಕೊಳಗಾಗಿತ್ತು. ಸತ್ಯಾಗ್ರಹಿಗಳು ಜಮೀನಿನ ವಶ ಮಾಡಿಕೊಳ್ಳಲು, ಜಮೀನಿನ ಒಳಕ್ಕೆ ನುಗ್ಗಿ ಅಲ್ಲಿ ಸತ್ಯಾಗ್ರಹ ಆರಂಭಿಸಿದರು. ಈ ಹೋರಾಟದಲ್ಲಿ ಸರ್ವೋದಯದವರೊಡನೆ ಸಿ.ಪಿ.ಐ., ಸಿ.ಪಿ.ಎಂ. ಸದಸ್ಯರೂ ಕೂಡಿಕೊಂಡರು. ಆ ಜಮೀನ್ದಾರರು ಅನೇಕ ಸುಳ್ಳು ಕೇಸುಗಳನ್ನು ಸತ್ಯಾಗ್ರಹಿಗಳ ವಿರುದ್ಧ ದಾಖಲು ಮಾಡಿದರು. ತಮ್ಮ ತೋಟದಿಂದ ತೆಂಗಿನಕಾಯಿ, ಬಾಳೆಗೊನೆ ಕದ್ದರೆಂದು ಆರೋಪ ಮಾಡಿದರು. ಪೊಲೀಸರು ಜಮೀನ್ದಾರರ ಪರ ವಹಿಸಿದರು. ಆ ಸಮಯದಲ್ಲಿ ಜಗನ್ನಾಥನ್ ೧೪ ದಿನ ಉಪವಾಸ ಸತ್ಯಾಗ್ರಹ ಆಚರಿಸಿದರು. ಆಗ ಕರುಣಾನಿಧಿ ಮುಖ್ಯಮಂತ್ರಿಗಳಾಗಿದ್ದರು. ಅವರು ಸ್ಥಳೀಯ ಸಂಸ್ಥೆಗಳ ಸಚಿವ ನಾರಾಯಣ ಸ್ವಾಮಿಯವರನ್ನು ಈ ಪ್ರಕರಣದ ಇತ್ಯರ್ಥಕ್ಕಾಗಿ ಕಳಿಸಿದರು. ಒಂದು ಸಾರ್ವಜನಿಕ ಬಹಿರಂಗ ವಿಚಾರಣೆ ನಡೆಯಿತು. ಆ ಊರಿನ ಜನರೆಲ್ಲ ದೇವಾಲಯದ ಈ ಎಲ್ಲ ಜಮೀನೂ ಒಬ್ಬ ಭೂಮಾಲೀಕರ ವಶದಲ್ಲಿದೆ ಎಂದು ಸಾಕ್ಷ್ಯ ನುಡಿದರು. ಮಂತ್ರಿಗಳು ಆ ೧೦೦೦ ಎಕರೆ ಜಮೀನನ್ನೂ ೧೦೦೦ ಜನ ಭೂಹೀನ ರೈತರಿಗೆ ಹಂಚಿಸಿದರು.

ಎಚ್. ಎಸ್. ದೊರೆಸ್ವಾಮಿ

ತಮಿಳುನಾಡಿನಲ್ಲಾದ ಅನೇಕ ಸರ್ವೋದಯ ಸಮ್ಮೇಳನಗಳಿಗೆ ಜಯಪ್ರಕಾಶರು ಆಹ್ವಾನಿತರಾಗಿ ಬರುತ್ತಿದ್ದರು. ಈ ಮೇಲಿನ ಪ್ರಕರಣಗಳು ನಡೆದ ಮೇಲೆ ಬಂದಿದ್ದ ಜಯಪ್ರಕಾಶರು ಕರುಣಾನಿಧಿಯವರನ್ನು ಭೇಟಿ ಮಾಡಿ ಸತ್ಯಾಗ್ರಹಿಗಳ ಮೇಲೆ ಹಾಕಿರುವ ೩೨ ಸುಳ್ಳು ಕೇಸುಗಳನ್ನು ವಜಾಮಾಡಿಸಿದರು. ಟೆನನ್ಸಿ ಕಾಯಿದೆಯನ್ನು ಕಟ್ಟುನಿಟ್ಟಾಗಿ ಅನುಷ್ಠಾನಕ್ಕೆ ತನ್ನಿರೆಂದು ವಿನಂತಿ ಮಾಡಿಕೊಂಡರು.

ಜಗನ್ನಾಥನ್‌ರವರಿಂದ ಪ್ರೇರಣೆ ಪಡೆದ ಜಯಪ್ರಕಾಶ್ ನಾರಾಯಣರು ಬಿಹಾರದ ಬೋಧಗಯಾದಲ್ಲಿ ಬೌದ್ಧ ದೇವಾಲಯದ ಮಹಂತನಿಗೆ ಸೇರಿದ ೩೦,೦೦೦ ಎಕರೆ ಜಮೀನನ್ನು ಮಠದವರು ಭೂಮಿಹೀನರಿಗೆ ಹಂಚಬೇಕೆಂದು ಸತ್ಯಾಗ್ರಹ ನಡೆಸಿದರು. ಶ್ರೀ ಜಗನ್ನಾಥನ್ ದಂಪತಿಗಳು ಎರಡು ವರ್ಷಗಳ ದೀರ್ಘಕಾಲ ಜಯಪ್ರಕಾಶರೊಡನಿದ್ದು ಆ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಆ ೩೦,೦೦೦ ಎಕರೆ ಜಮೀನು ೬೦ ಗ್ರಾಮಗಳಲ್ಲಿ ಹರಡಿಹೋಗಿತ್ತು. ಈ ಹೋರಾಟ ನಡೆಯುತ್ತಿದ್ದ ಕಾಲದಲ್ಲಿಯೇ ಇಂದಿರಾ ಗಾಂಧಿಯವರು ೧೯೭೫ರಲ್ಲಿ ತುರ್ತು ಪರಿಸ್ಥಿತಿ ಘೋಷಿಸಿದರಾಗಿ, ಜಯಪ್ರಕಾಶರು ಹಾಗೂ ಜಗನ್ನಾಥನ್ ಇಬ್ಬರೂ ಬಂಧಿತರಾದರು. ಆ ನಂತರ ಸಂಘರ್ಷ ವಾಹಿನಿಯ ಯುವಕರು ಭೋಧ್‌ಗಯಾ ಸತ್ಯಾಗ್ರಹವನ್ನು ಮುಂದುವರೆಸಿದರು. ಅವರು ಪಾಟ್ನಾ ಉಚ್ಚನ್ಯಾಯಾಲಯದಲ್ಲಿ ಮಹಂತರ ವಿರುದ್ಧವಾಗಿ ಒಂದು ಖಟ್ಲೆಯನ್ನೂ ನಡೆಸಿದರು. ಆ ಪೈಕಿ ೨೫,೦೦೦ ಎಕರೆ ಜಮೀನನ್ನು ಸರ್ಕಾರ ಮಹಂತರಿಂದ ತನ್ನ ವಶಕ್ಕೆ ತೆಗೆದುಕೊಳ್ಳಬೇಕೆಂದೂ ಅದನ್ನು ಭೂಹೀನರಿಗೆ ಹಂಚಬೇಕೆಂದೂ ನ್ಯಾಯಾಧೀಶರು ತೀರ್ಪಿತ್ತರು. ಇದೂ ಕೂಡ ಸರ್ವೋದಯ ಚಳುವಳಿಗಾದ ಒಂದು ದೊಡ್ಡ ಗೆಲುವು.

೧೯೮೦ರಲ್ಲಿ ಜಗನ್ನಾಥನ್‌ರವರು ಒಂದು ವರ್ಷಕಾಲ ತಮಿಳುನಾಡಿನಲ್ಲಿ ಗ್ರಾಮಸ್ವರಾಜ್ಯ ಪಾದಯಾತ್ರೆಯನ್ನು ಕೈಗೊಂಡು ಗ್ರಾಮಸ್ವರಾಜ್ಯ ಆಂದೋಳನವನ್ನು ತೀವ್ರಗೊಳಿಸಲು ಸಂಘಟನೆ ಮಾಡಿದರು.

**ವಡಸತ್ತಿಮಂಗಲಂ ಸತ್ಯಾಗ್ರಹ**

೧೯೮೬ರಲ್ಲಿ ವಡಸತ್ತಿಮಂಗಲಂನಲ್ಲಿ ಒಂದು ಪ್ರಮುಖವಾದ ಸತ್ಯಾಗ್ರಹ ನಡೆಯಿತು. ಅಲ್ಲಿ ೪೦೦೦ ಎಕರೆ ಫಲವತ್ತಾದ ಭೂಮಿ ಇತ್ತು. ಅಲ್ಲಿ ಮೊದಲು ಭತ್ತ ಬೆಳೆಯಲಾಗುತ್ತಿತ್ತು. ಪಾದಯಾತ್ರೆಯ ಸಮಯದಲ್ಲಿ ಈ ಜಮೀನುಗಳ ಬಗೆಗೆ ಒಂದು ರಹಸ್ಯ ಹೊರಬಿತ್ತು. ಈ ಎಲ್ಲ ಜಮೀನು ಒಬ್ಬ ಮಿರಾಸ್‌ದಾರರಿಗೆ ಸೇರಿದ್ದು. ಆಗತಾನೇ ಜಾರಿಯಾಗಿದ್ದ ಭೂಸುಧಾರಣಾ ಕಾನೂನಿನ ರೀತ್ಯಾ ಕಬ್ಬು ಬೆಳೆಯುವ ಭೂಮಿಗೆ ಭೂಸುಧಾರಣೆಯ ವಿನಾಯ್ತಿ ಇತ್ತು. ಆ ಮೀರಾಸ್‌ದಾರರು (ಭೂಮಿತಿಯ) ಈ ವಿನಾಯ್ತಿ ಪಡೆಯುವುದಕ್ಕಾಗಿ ಭತ್ತ ಬೆಳೆಯುತ್ತಿದ್ದ ಈ ಜಮೀನನ್ನು ಕಬ್ಬು ಬೆಳೆಯುವ ಭೂಮಿಯನ್ನಾಗಿ ಪರಿವರ್ತಿಸಿದರು.

ಅದರ ಜೊತೆಜೊತೆಗೆ ಅಲ್ಲೊಂದು ಸಕ್ಕರೆ ಕಾರ್ಖಾನೆಯನ್ನು ಸ್ಥಾಪನೆ ಮಾಡಿದರು. ಈ ಗೆಯ್ಮೆಯಿಂದ ಜಮೀನ್ದಾರರು ಭಾರಿ ಲಾಭವನ್ನು ಮಾಡಿದರು.

ಡಿ. ಎಂ. ಕೆ. ಸರ್ಕಾರ ಅಧಿಕಾರಕ್ಕೆ ಬಂದಾಗ ಕಬ್ಬಿನ ಬೆಳೆ ಬೆಳೆಯುವ ಭೂಮಿಗಿದ್ದ ವಿನಾಯ್ತಿಯನ್ನು ಅದು ಕಿತ್ತು ಹಾಕಿತು. ಜಮೀನನ್ನೆಲ್ಲ ಸರ್ಕಾರ ವಶಪಡಿಸಿಕೊಂಡು ಕಬ್ಬು ನಿಗಮವೊಂದನ್ನು ರಚಿಸಿತು. ಈ ನಿಗಮ ಎಲ್ಲ ಕಡೆಯೂ ಇರುವಂತೆ ಭ್ರಷ್ಟರ ಕೈಗೆ ಹೋಯಿತು, ದುರಾಡಳಿತ ಪ್ರಾರಂಭವಾಯಿತು. ಸರ್ಕಾರದಿಂದ ಪಡೆದಿದ್ದ ೭೦ಲಕ್ಷ ರೂಪಾಯಿಗಳ ಸಾಲವನ್ನು ದುರುಪಯೋಗಪಡಿಸಿಕೊಂಡು ಕೈ ಎತ್ತಿಬಿಟ್ಟರು. ಅವರು ಸಾಲ ಮರುಪಾವತಿ ಮಾಡುವುದು ಸಾಧ್ಯವಿಲ್ಲವಾಯಿತು. ಹೀಗಾಗಿ ಕಬ್ಬು ನಿಗಮ ಸ್ಥಗಿತಗೊಂಡಿತು. ಆ ೪೦೦೦ ಎಕರೆ ಜಮೀನೂ ವ್ಯವಸಾಯವಿಲ್ಲದ ಬಂಜರು ಭೂಮಿಯಾಯಿತು.

ಆದ್ದರಿಂದ ಪಾದಯಾತ್ರೆ ಮುಗಿದೊಡನೆ ಇಲ್ಲಿ ಸತ್ಯಾಗ್ರಹವನ್ನು ಜಗನ್ನಾಥನ್ ಆರಂಭ ಮಾಡಿದರು. ಇದರ ಅಂಗವಾಗಿ ಮನ್ನಾರ್ಗುಡಿಯಲ್ಲಿ ೩,೦೦೦ ಹೆಣ್ಣು ಮಕ್ಕಳು ಒಂದು ಮೌನ ಮೆರವಣಿಗೆ ನಡೆಸಿದರು. ಈ ಜಮೀನನ್ನು ಸರ್ಕಾರ ಹಿಂದಕ್ಕೆ ಪಡೆದು ಭೂಮಿಹೀನರಿಗೆ ಹಂಚಬೇಕೆಂದು ಜಗನ್ನಾಥನ್ ಏಳು ದಿನದ ಉಪವಾಸ ಸತ್ಯಾಗ್ರಹ ಆರಂಭಿಸಿದರು. ಶಾಸನ ಸಭೆಯಲ್ಲಿ ಇದರಿಂದ ಕೋಲಾಹಲವುಂಟಾಯಿತು. ಸರ್ಕಾರ ಕ್ರಮ ಕೈಕೊಂಡು, ಆ ಭೂಮಿಯನ್ನು ತನ್ನ ವಶಕ್ಕೆ ತೆಗೆದುಕೊಂಡು ಭೂಮಿ ಹೀನರಿಗೆ ಹಂಚಬೇಕೆಂಬ ಒತ್ತಾಯ ಬಂತು. ಕೂಡಲೆ ಮುಖ್ಯಮಂತ್ರಿ ಕರುಣಾನಿಧಿ ಕ್ರಮ ತೆಗೆದುಕೊಂಡು, ಆ ಭೂಮಿಯನ್ನೆಲ್ಲ ಭೂಮಿ ಹೀನರಿಗೆ ಹಂಚಿಸಿದರು.

ಜಗನ್ನಾಥನ್ ಗ್ರಾಮಸ್ವರಾಜ್ಯ ಪಾದಯಾತ್ರೆಯನ್ನು ಕೈಗೊಂಡು ನಾಗಪಟ್ಟಣ ಜಿಲ್ಲೆಯಲ್ಲೆಲ್ಲಾ ಅಡ್ಡಾಡಿದರು. ಅಲ್ಲಿ ಎಲ್ಲ ಭತ್ತ ಬೆಳೆಯುವ ಭೂಮಿಯೂ ಸೀಗಡಿಮೀನು ಬೆಳೆಯುವ ಭೂಮಿಯಾಗಿ ಪರಿವರ್ತನೆಯಾಗಿತ್ತು. ಫಲವತ್ತಾದ, ಭತ್ತ ಬೆಳೆಯುತ್ತಿದ್ದ ಈ ಭೂಮಿಗೆ ಸಮುದ್ರದ ಉಪ್ಪು ನೀರನ್ನು ಹಾಯಿಸಿ, ಮೀನುಗಾರಿಕೆ ಕೈಗೊಳ್ಳಲಾಗಿತ್ತು. ಇದರಿಂದ ಉತ್ತಮವಾದ ಭೂಮಿ ಚೌಳಾಗಿ ಎಂದೆಂದೂ ವ್ಯವಸಾಯಕ್ಕೆ ಯೋಗ್ಯವಲ್ಲದ ಭೂಮಿಯಾಗಿ ಪರಿವರ್ತನೆಗೊಳ್ಳುವ ಅಪಾಯವಿತ್ತು. ಸೀಗಡಿಮೀನು ಬೆಳೆಯುವವರ ಮುಂದೆ ಜನರು ಸತ್ಯಾಗ್ರಹ ಆರಂಭಿಸಿದರು. ಹಾಗೆಯೇ ಕಲೆಕ್ಟರರ ಕಚೇರಿಯ ಮುಂದೆಯೂ ಸತ್ಯಾಗ್ರಹ ಸಂಘಟಿತವಾಯಿತು. ಈ ಸತ್ಯಾಗ್ರಹದಲ್ಲಿ ೩,೦೦೦ ಸ್ತ್ರೀ-ಪುರುಷರು ಸೆರೆಮನೆ ಕಂಡರು. ೧೯೯೫ರಲ್ಲಿ ಗ್ರಾಮಸಭೆಯ ಸದಸ್ಯರು ಒಂದು ರಿಟ್ ಅರ್ಜಿಯನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಹಾಕಿದರು. ಸರ್ವೋಚ್ಚ ನ್ಯಾಯಾಲಯ ಮಾರ್ಚ್ ೧೯೯೭ರ ಒಳಗೆ ದೇಶದ ಎಲ್ಲ ಕಡೆ ತಲೆ ಎತ್ತಿರುವ ಸೀಗಡಿಮೀನಿನ ವ್ಯವಸಾಯವನ್ನು ಸ್ಥಗಿತಗೊಳಿಸಬೇಕೆಂದು ತೀರ್ಪು ನೀಡಿತು. ಇದು ನಿಜವಾಗಿಯೂ ಜನತೆಗೆ ದೊರೆತ ಭಾರಿ ಜಯ.

ಈ ತೀರ್ಪನ್ನು ಜಾರಿಗೊಳಿಸಲು ಕೇಂದ್ರ ಸರ್ಕಾರ ಈವರೆವಿಗೂ ಇನ್ನೂ ಮೀನಮೇಷ ನೋಡುತ್ತಿರುವುದರಿಂದ ಜಗನ್ನಾಥನ್‌ರವರು ಹೋರಾಟವನ್ನು ದೆಹಲಿಯಲ್ಲಿ ಆರಂಭಿಸಬೇಕೆಂದು ನಿರ್ಧರಿಸಿದ್ದಾರೆ.

ಎಚ್. ಎಸ್. ದೊರೆಸ್ವಾಮಿ
ನಂ. ೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ,
ಬೆಂಗಳೂರು - ೫೬೦ ೦೧೯


# ಹೊಸತು

## ವಾರ್ಷಿಕ ವಿಶೇಷ ಸಂಚಿಕೆ

*೨೦೦೧ ಜನವರಿ ವಿಶೇಷಾಂಕ 'ಹೊಸತು' ಚಂದಾದಾರರಿಗೆ ಉಚಿತ.*

ಕಥೆಗಳು
ಕವಿತೆಗಳು
ವಿಡಂಬನೆಗಳು
ಪ್ರಬಂಧಗಳು
ವಿಚಾರಪೂರ್ಣ ಲೇಖನಗಳು
ಪ್ರವಾಸ ಲೇಖನಗಳು
ವ್ಯಂಗ್ಯಚಿತ್ರಗಳು
ಖ್ಯಾತರೊಂದಿಗೆ ಹಾಗೂ
ಜನಸಾಮಾನ್ಯರೊಂದಿಗೆ ಸಂದರ್ಶನಗಳು

ಸುಮಾರು ೨೦೦ ಪುಟಗಳ ಸಮೃದ್ಧ ಸಾಹಿತ್ಯದ ನಿಮ್ಮ ಸಂಚಿಕೆಯನ್ನು ಕಾದಿರಿಸಿ ಕೊಳ್ಳಿ.

ಏಜೆಂಟರು ಪ್ರತಿಗಳಿಗಾಗಿ ನಿಮ್ಮ ಬೇಡಿಕೆಗಳನ್ನು ಈಗಲೇ ಸಲ್ಲಿಸಿ.

ವ್ಯವಸ್ಥಾಪಕರು
**ಹೊಸತು ತಿಂಗಳ ಪತ್ರಿಕೆ**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಅಂ. ಪೆ. ೫೧೫೯, ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧.


*(೨ನೇ ಪುಟದಿಂದ)*

ಹೀಗಿದೆ ಅವರ 'ಸ್ವದೇಶಿ' ಮಕ್‌ಮಲ್ ಟೋಪಿ, ಕೇಸರಿ ಟೋಪಿ !! ಸಾಲದ್ದಕ್ಕೆ ಜೋರ್ದಾರ್ ಅಂಥವರನ್ನು ಹೊರಹಾಕುವ ಉದ್ಧಟತನ ಬೇರೆ.

ಕತೆ ಇಷ್ಟಕ್ಕೆ ಮುಗಿಯಲಿಲ್ಲ. ಈ ಚಿಕ್ಕ ''ಬೃಹತ್ ದೂರದರ್ಶಕ''ವನ್ನು ಯಾರಿಂದ ಕೊಳ್ಳಬೇಕೆಂಬುದೂ ಗೋಪ್ಯವಾಗಿ ತೀರ್ಮಾನಿಸಲಾಯಿತು. ಅದಕ್ಕಾಗಿ ನೇಮಿಸಲಾಗಿದ್ದ ಸಮಿತಿ ಕೇವಲ ಒಂದು ಮುಖವಾಡ, ಅಷ್ಟೆ. ಖಗೋಳಶಾಸ್ತ್ರದಲ್ಲಿ ಪರಿಣತಿ ಇಲ್ಲದಿದ್ದವರದೇ ಮೇಲುಗೈ. ಈವೋಯೆಸ್ ಟೆಕ್ನಾಲಜೀಸ್ ಎಂಬ ಸಂಸ್ಥೆ ಯಂತ್ರವನ್ನು ಸರಬರಾಜು ಮಾಡಬೇಕೆಂಬ ತೀರ್ಮಾನ ಅತ್ಯಂತ ಪ್ರಶ್ನಾರ್ಹ. ಏಕೆಂದರೆ, ಅದು ಬೃಹತ್ ದೂರದರ್ಶಕಗಳ ನಿರ್ಮಿತಿಯಲ್ಲಿ ಎಂದೂ ಪ್ರಖ್ಯಾತವಾಗಿರಲಿಲ್ಲ, ಟೆಂಡರ್ ಸಲ್ಲಿಸಿದ್ದ ಬೇರೆಷ್ಟೋ ಕಂಪೆನಿಗಳು ಇದಕ್ಕಿಂತ ಹೆಚ್ಚು ಸಾಮರ್ಥ್ಯ ಉಳ್ಳವು. ಅಂದರೆ, ಇದರಲ್ಲಿ ಕೈಯನ್ನು ಬೆಚ್ಚಗೆ ಮಾಡಿಕೊಳ್ಳುವ ಅಂಶ ಸಾಕಷ್ಟಿದೆಯೆಂಬ ಸಂಶಯಕ್ಕೆ ಎಡೆಯಿದೆ. ಇದರ ಆಮೂಲಾಗ್ರ ಪರಿಶೀಲನೆ ಅಗತ್ಯವಾಗಿದೆ.

ಹ್ಯಾನ್ಲೆಯಂತಹ ಸ್ಥಳದಲ್ಲಿ ವೀಕ್ಷಣೆಗೆ ಅಡಚಣೆ ಇಲ್ಲವೇ? ಇದಕ್ಕೆ ಕೌಶಿಕ್ ಉತ್ತರ : ''ಯೋಚನೆ ಬೇಡ, ಅಲ್ಲಿನ ದೂರದರ್ಶಕವನ್ನು ಬೆಂಗಳೂರಿನಿಂದಲೇ ಚಾಲನೆ ಮಾಡಿ ವೀಕ್ಷಿಸುವ ವಿಧಾನವನ್ನು ಅಳವಡಿಸುತ್ತೇವೆ.'' ನಮ್ಮ ಸಂಶೋಧನಾ ಸಂಸ್ಥೆಗೆ ಈ ಸಾಮರ್ಥ್ಯವಿದೆಯೆಂಬ ಕಲ್ಪನೆಯನ್ನು ಅವರು ಮುಂದಿಟ್ಟಿದ್ದಾರೆ. ಅದಕ್ಕೆ ಕಾವಲೂರು ಒಂದು ನಿದರ್ಶನವೆಂಬುದು ಅವರ ಅಂಬೋಣ. ಆದರೆ ಇದು ಶುದ್ಧಸುಳ್ಳು ಎನ್ನುತ್ತಾರೆ ಸಂಸ್ಥೆಯ ವಿಜ್ಞಾನಿಗಳು. ಕಾವಲೂರು ಯಂತ್ರವನ್ನು ಬೆಂಗಳೂರಿನಿಂದ ಚಾಲನೆ ಮಾಡಲು, ಹಾಗೆ ವೀಕ್ಷಣೆ ನಡೆಸಲು, ನಮಗಿನ್ನೂ ಸಾಧ್ಯವಾಗಿಲ್ಲವೆಂದು ಅವರು ಖಚಿತವಾಗಿ ತಿಳಿಸುತ್ತಾರೆ. ಕಾವಲೂರಿನ ೧೦೨ ಸೆಂಟಿಮೀಟರು ಟೆಲಿಸ್ಕೋಪನ್ನೇ ದೂರದಿಂದ ನಿಯಂತ್ರಿಸಲಾಗಿಲ್ಲದಿರುವಾಗ ನಾವು ಬೆಂಗಳೂರಿನಿಂದ ಹಿಮಾಲಯದ ಲಡಾಖ್‌ನಲ್ಲಿ ಇರಿಸುವ ಯಂತ್ರವನ್ನು ನಿಯಂತ್ರಿಸುತ್ತೇವೆಂಬ ಭ್ರಾಂತಿ ಬೇಡವೆಂದು ವಸ್ತುನಿಷ್ಠವಾಗಿ ಎಚ್ಚರ ನೀಡುತ್ತಾರೆ ಸಂಸ್ಥೆಯ ವಿಜ್ಞಾನಿಗಳು.

೨ ಮೀಟರ್ ಟೆಲಿಸ್ಕೋಪ್ ಇದೇ ಜುಲೈನಲ್ಲಿ ಬಂದಿತು. ಅದನ್ನು ಲೇ ಎಂಬಲ್ಲಿಗೆ ಕೊಂಡೊಯ್ಯಲಾಯಿತು. ಅದನ್ನು ಹ್ಯಾನ್ಲೆಯಲ್ಲಿ ಸ್ಥಾಪಿಸಲು ಅಮೆರಿಕಾದಿಂದ ಇಂಜಿನಿಯರುಗಳು ಈಗಾಗಲೆ ಬಂದಿಳಿದಿದ್ದಾರೆ. ಈಗಲೂ ಸಂಶೋಧನಾ ಸಂಸ್ಥೆಯ ವಿಜ್ಞಾನಿಗಳ ಭಾಗವಹಿಸುವಿಕೆ ಸೊನ್ನೆಯೇ. ಅದು ಕೌಶಿಕರ ಘೋರ ಅನುದಾನ! ಬೆಂಗಳೂರಿನ ಬಳಿಯ ಹೊಸಕೋಟೆಯಿಂದ ಸಂಸ್ಥೆಯು ಹ್ಯಾನ್ಲೆಯ ಟೆಲಿಸ್ಕೋಪನ್ನು ನಿಯಂತ್ರಿಸಿ ವೀಕ್ಷಣೆ ನಡೆಸುತ್ತದೆಂದು ಕೌಶಿಕ್ ಹೇಳುತ್ತಲೇ ಇದ್ದಾರೆ. ಹಾಗಿದ್ದರೆ ಅದರ ಉದ್ಘಾಟನೆ ಹ್ಯಾನ್ಲೆಯಲ್ಲೇಕೆ, ಅದು ಹೊಸಕೋಟೆಯಲ್ಲಿ ಆಗಬೇಕಲ್ಲವೆ? ಕೌಶಿಕ್ ಮತ್ತೆ ಮೌನಿ. ಬಹುಶಃ ಮುರಳಿ ಮನೋಹರ ಜೋಶಿಯವರಿಗೆ ಲಡಾಖ್ ಪ್ರಯಾಣವೇ ಸುಖಕರವಿರಬಹುದು! ಸ್ವಾರಸ್ಯವೇನೆಂದರೆ ಕಾವಲೂರಿನ ಟೆಲಿಸ್ಕೋಪಿನ ಒಂದು ಪ್ರಮುಖ ಬಿಡಿಭಾಗವನ್ನು ಯಾರಿಗೂ ತಿಳಿಸದೆ ಅಲ್ಲಿಂದ ತೆಗೆಯಲಾಗಿದೆ, ಲಡಾಖ್‌ಗೆ ಕಳಿಸಲಾಗಿದೆ. ಅದಿಲ್ಲದೆ ಹ್ಯಾನ್ಲೆಯಲ್ಲಿ ಉದ್ಘಾಟನೆ ಸಾಧ್ಯವಾಗದು. ವಿದೇಶಿ ಟೆಲಿಸ್ಕೋಪಿಗೆ ಸ್ವದೇಶಿ ಬಿಡಿಭಾಗದ ಅನಿವಾರ್ಯತೆ ಇದೆ. ಇದು ಕೌಶಿಕ್ ಕಾರ್ಯಾಚರಣೆಯ ಒಂದು ಅದ್ಭುತ.

- ವೀಕ್ಷಕ

# ಪ್ರಖರ ವಿಚಾರವಂತ, ಸಮಾಜ ಸುಧಾರಕ - ಆಗರಕರ



**19**ನೇ ಶತಮಾನದ ಮಹಾರಾಷ್ಟ್ರ ಹಾಗೂ ಭಾರತೀಯ ಸಮಾಜದ ಎದುರು ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಕ್ರಾಂತಿಯ ಪ್ರಶ್ನೆ ಕಾಡುತ್ತಿತ್ತು. ಸಾಮಾಜಿಕ ವಿಷಮತೆಯ ದುಃಖ ಸವರ್ಣೀಯ ವಿಚಾರವಂತರನ್ನು ಕಸಿವಿಸಿಗೊಳಿಸಿದರೂ ಹೃದಯಕ್ಕೆ ತಟ್ಟಿರಲಿಲ್ಲ ಎನ್ನುವ ಮಾತು ಸತ್ಯ. ಈ ಶತಮಾನದಲ್ಲಿ ತಮ್ಮ ವೈಚಾರಿಕ ಬಲದಿಂದ, ಜೀವನದ ವಿವಿಧ ರಂಗಗಳಲ್ಲಿ ಪ್ರಗತಿಯ ದಿಕ್ಕು ತೋರಿಸಿದ ವಿಚಾರವಂತರಲ್ಲಿ ಗೋಪಾಲ ಗಣೇಶ ಆಗರಕರ ಮುಖ್ಯರಾಗುತ್ತಾರೆ. ಫುಲೆ, ರಾನಡೆ, ಆಗರಕರ ಈ ವಿಚಾರವಂತರು ಮಹಾರಾಷ್ಟ್ರಕ್ಕೆ ಹೊಸ ಆಧುನಿಕ ದಿಶೆಯನ್ನು ತೋರಿಸಿದರು.

ಬ್ರಿಟಿಷ್ ಕಾಲಾವಧಿಯಲ್ಲಿ ಮರಾಠಿ ಸಮಾಜದಲ್ಲಿ ಅತೀ ದೊಡ್ಡ ಸ್ಥಿತ್ಯಂತರವಾಯ್ತು. ಇಂಗ್ಲಿಷ್ ಕಲಿತ ಹೊಸ ಸಂವೇದನಾಶೀಲ ತಲೆಮಾರಿಗೆ ತಮ್ಮ ವೈಚಾರಿಕ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಬೇಕೆಂಬ ಉತ್ಕಟೇಚ್ಛೆ ಸ್ವಾಭಾವಿಕವಾಗಿತ್ತು. ಅಂಥ ಶ್ರೇಷ್ಠ ಸುಧಾರಕರಲ್ಲಿ ಆಗರಕರರು ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲೂ ಹೊಸ ಬೆಳಕು ಚೆಲ್ಲಿದರು.

ಆಗರಕರರು ಹೊಸ ವಿಚಾರಗಳನ್ನು ಅತ್ಯಂತ ನಿರ್ಭಿಡೆಯಿಂದ ವ್ಯಕ್ತಪಡಿಸಿದರು. ಅದಕ್ಕಾಗಿ ಸಮಾಜ ಬಾಂಧವರಿಂದ ಚಿತ್ರಹಿಂಸೆಯನ್ನು ಸಹಿಸಬೇಕಾಯಿತು. ಅವರು ಪ್ರತಿಪಾದಿಸಿದ ಕೆಲ ಪ್ರಶ್ನೆಗಳು ಹಾಗೂ ಅದರ ಉತ್ತರ ತತ್ಕಾಲೀನ ಸ್ವರೂಪದ್ದು, ದೂರಗಾಮಿ ಪರಿಣಾಮ ಬೀರುವಂತಹದಾಗಿತ್ತು. ಅವರು ಸ್ವೀಕರಿಸಿದ ಸಾಮಾಜಿಕ ಸಮತೆಯ ನ್ಯಾಯದ ಭೂಮಿಕೆಯು ಬೌದ್ಧಿಕ ಪಾತಳಿಯ ನ್ಯಾಯ-ಅನ್ಯಾಯದ ನಿರ್ಣಯ. ಅವರ ವಿಜ್ಞಾನ ನಿಷ್ಠೆ, ವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಮಾಡಿದ ಆಗ್ರಹ - ಇದನ್ನೆಲ್ಲ ಆಧುನಿಕ ಪ್ರಗತಿಪರರೆಲ್ಲ ಒಪ್ಪುವಂತಹದೇ.

ದುರ್ದೈವಕ್ಕೆ ಅವರ ಆಯುಷ್ಯ ತೀರಾ ಅಲ್ಪವಾಗಿತ್ತು. ಜೊತೆಗೆ ಬೆನ್ನಿಗಂಟಿದ ದಾರಿದ್ರ್ಯ ಅಸ್ತಮಾದಂತಹ ಜೀವ ಹಿಂಡುವ ರೋಗ. ಇಂಥ ಪ್ರತಿಕೂಲ ಪರಿಸ್ಥಿತಿಯಲ್ಲೂ ಅವರು ತಮ್ಮ ವಿಚಾರವನ್ನು ನಿರ್ಭಯವಾಗಿ ಮಂಡಿಸಿದರು. ಸಾಮಾಜಿಕ ಪರಿವರ್ತನೆ ಮೇಲೆ ಅವರಿಗೆ ಅಪಾರ ವಿಶ್ವಾಸ. ಲೋಕಶಿಕ್ಷಣ ಅವರೊಪ್ಪಿದ ಶ್ರೇಷ್ಠ ತತ್ವ. ಸಂಶಯಕ್ಕೆಡೆಮಾಡಿ ಕೊಡದ ಕಠೋರ ನಿಷ್ಠುರ ವ್ಯಕ್ತಿತ್ವ. ಈ ಮೊದಲು ಹಳೇ ಸರಂಜಾಮಿ ಪದ್ಧತಿಯಲ್ಲೇ ಸಮಾಜದ ವ್ಯವಹಾರ ನಡೆಯುತ್ತಿತ್ತು. ಜನ ಕರ್ಮಠರಾಗಿದ್ದರು. ಜೊತೆಗೆ ಪೂರ್ವ - ಪಶ್ಚಿಮ ಸಂಸ್ಕೃತಿಯ ಸಂಘರ್ಷವೂ ನಡೆದಿತ್ತು. ಆಂಗ್ಲ ಶಿಕ್ಷಣ ಹೊಸ ಪರಿವರ್ತನೆಗೆ ನಾಂದಿ ಹಾಡಿತು. ಹೊಸ ಜಿಜ್ಞಾಸೆ ಕಾಣಿಸಿಕೊಂಡಿತು. ಅದೇ ಕಾಲಕ್ಕೆ ಆಗರಕರ ಆತ್ಮ ಸಂಶೋಧನೆಯ ಮೂಲಕ ಸಮಾಜ ಸುಧಾರಣೆಗೆ ಬುನಾದಿ ಹಾಕಿದರು. ರಾಜಕೀಯ ಪಾರತಂತ್ರ್ಯ, ಆರ್ಥಿಕ ಕ್ಷೇತ್ರದ ದಾರಿದ್ರ್ಯ, ಸಮಾಜದಲ್ಲಿ ನಡೆದ ರೂಢಿಗ್ರಸ್ತ ವ್ಯವಹಾರ, ಇದನ್ನೆಲ್ಲ ವಿವೇಚಿಸಿ ಅದರ ಕಾರಣ ಮೀಮಾಂಸೆ ಕೈಕೊಂಡರು. ಪಶ್ಚಿಮದ ಜ್ಞಾನದ ಉಪಯೋಗ ಮಾಡಿಕೊಂಡರೇನೆ ನಮ್ಮ ಭಾರತೀಯ ಸಮಾಜವು ಭೌತಿಕ ಹಾಗೂ ನೈತಿಕವಾಗಿ ಸುಧಾರಣೆ, ಪ್ರಗತಿಯಾಗುವದು ಸಾಧ್ಯವೆಂಬ ದೃಢ ನಂಬಿಕೆ ಅವರದ್ದು. ಅವರ ಪ್ರಗತಿಪರ ಸುಧಾರಣೆಗೆ ಭದ್ರವಾದ ತಾತ್ವಿಕ ನೆಲೆಗಟ್ಟಿತ್ತು. ಬೌದ್ಧಿಕತೆ, ವ್ಯಕ್ತಿ ಸ್ವಾತಂತ್ರ್ಯ, ಸಾಮಾಜಿಕ ಸಮತೆ, ಐಹಿಕ ಜೀವನ ಸಮೃದ್ಧಿ, ಹಾಗೂ ವಿಜ್ಞಾನ ನಿಷ್ಠೆ ಇವೇ ಅವರ ಜೀವನ ಮೌಲ್ಯವಾಗಿತ್ತು. ಇದರಿಂದ ಭಾರತೀಯ ಜೀವನದ ಜಡತ್ವವನ್ನು ಹೋಗಲಾಡಿಸಬಹುದೆಂದು ನಂಬಿದರು. ಇದರಲ್ಲೇ ವ್ಯಾಪಕವಾದ ಮಾನವತಾವಾದವಿತ್ತು. ಧರ್ಮದೊಳಗಿನ ಕಾಲಬಾಹ್ಯ ಪದ್ಧತಿಯನ್ನು, ನಿರರ್ಥಕ ಪರಂಪರೆಯನ್ನು ಎತ್ತಿ ತೋರಿಸಿದರು. ಕಾಲಗತಿಗನು ಗುಣವಾಗಿ ನಮ್ಮ ಆಚಾರ - ವಿಚಾರದಲ್ಲಿ ಬದಲಾಗ ಬೇಕೆಂಬ ಆಗ್ರಹ ಅವರದ್ದು.

ಆಗರಕರ ಅವರು ಬರೇ ಧಾರ್ಮಿಕ ಹಾಗೂ ತಾತ್ವಿಕ ಚರ್ಚೆಯನ್ನಷ್ಟೇ ಮಾಡಲಿಲ್ಲ, ಬದಲು ಜನಸಂಖ್ಯೆ, ಜಾತಿವಾದ, ಆರ್ಥಿಕ ದಾರಿದ್ರ್ಯ, ರಾಜಕೀಯ ಪಾರತಂತ್ರ್ಯ, ಹಿಂದು ಮುಸ್ಲಿಂ ಐಕ್ಯ, ಕೈಗಾರಿಕೋದ್ಯಮ, ಸಹಕಾರ ಹಾಗೂ ಕೃಷಿ, - ಇಂಥ ಹಲವು ಪ್ರಗತಿಪರ ವಿಚಾರಗಳನ್ನು ಮಂಡಿಸಿದರು. ಅದಕ್ಕೆ ಉಪಾಯಗಳನ್ನು ಕಂಡುಹಿಡಿದರು. ಪ್ರಯತ್ನವಾದಕ್ಕೆ ಅಗ್ರಸ್ಥಾನ ನೀಡಿದರು. ಮೋಕ್ಷ, ವರ್ಣ ವ್ಯವಸ್ಥೆಯನ್ನು ಉಗ್ರವಾಗಿ ಟೀಕಿಸಿದರು. ಶೂದ್ರರ ಶೋಷಣೆಯನ್ನು ವಿರೋಧಿಸಿದರು. ಸಾಮಾಜಿಕ ಸುಧಾರಣೆ ಎಂದರೇನೆ ಧಾರ್ಮಿಕ ಸುಧಾರಣೆ ಎಂದು ನಂಬಿದ್ದರು. ದೇಶದ ದಾರಿದ್ರ್ಯ ಹೋಗಲಾಡಿಸಲು ನಾವೇ ಉದ್ಯೋಗಶೀಲರಾಗ ಬೇಕೆಂದು ಸೂಚಿಸಿದರು. ಸರಕಾರದ ಮುಂದೆ ಹಲ್ಲುಗಿಂಜಬೇಡಿ ! ಅದಕ್ಕಾಗಿ ಯಂತ್ರ, ಜ್ಞಾನ, ವಿಜ್ಞಾನ ಬಳಸುವಂತೆ ಸಲಹೆ ನೀಡಿದರು. ಬೃಹತ್ ಕೈಗಾರಿಕೋದ್ಯಮವೇ ಇದಕ್ಕೆ ಸೂಕ್ತ ಮಾರ್ಗ ಎಂದು ನುಡಿದರು. ಅವರು ವ್ಯಾಪಾರ, ಉದ್ದಿಮೆಗೂ ಮಹತ್ವ ನೀಡಿದರು. ರೈತರ ಪ್ರಯತ್ನಕ್ಕೆ, ಪರಿಶ್ರಮಕ್ಕೆ ಹಣ ಹಾಗೂ ಜ್ಞಾನದ ಬಲ ಬೇಕೆಂದರು. 'ಕೃಷಿ ಬ್ಯಾಂಕಿನ' ಕಲ್ಪನೆ ಅವರದ್ದೇ. ಈ ವ್ಯವಹಾರಕ್ಕೆ ಬೇಕಾದ ತಪಶೀಲನ್ನು ವಿವರವಾಗಿ ನೀಡಿದರು. ನೌಕರಸ್ಥರು ಕೆಲ ಹಣವನ್ನು ಉಳಿತಾಯ ಮಾಡಿ ಕೃಷಿ ಬ್ಯಾಂಕಿನಲ್ಲಿಡಬೇಕು. ಇದೇ ನಿಜವಾದ ಸಮಾಜ ಸೇವೆ. ರೈತರಿಗೆ ಇದನ್ನೇ ಸಾಲ ರೂಪದಲ್ಲಿ ನೀಡಬೇಕು ಎಂದರು. ಜೊತೆಗೆ ರೈತರ ಅಜ್ಞಾನವನ್ನು, ವ್ಯಾಪಾರೀ ಧೋರಣೆಯ ಕೊರತೆಯನ್ನು ಎತ್ತಿ ತೋರಿಸಿ ಅದರ ಪರಿಹಾರಕ್ಕೆ ಮಾರ್ಗೋಪಾಯ ಕಂಡುಹಿಡಿದರು.

ಬಾಲ್ಯ ವಿವಾಹ, ಪುನರ್ವಿವಾಹ, ಸ್ತ್ರೀ ಶಿಕ್ಷಣ, ಅಂಧ ಶ್ರದ್ಧೆ ಜಾತಿಭೇದ, - ಇಂತಹ ಹಲವು ವಿಚಾರಗಳ ಬಗೆಗೂ ಅವರು ವಿವೇಚನೆ ಮಾಡಿದ್ದಾರೆ. ಆಗರಕರರು ಈ ಸುಧಾರಣೆಯನ್ನು ತಮ್ಮ ಮನೆಯಿಂದಲೇ ಆರಂಭಿಸಿದರು. ಜೇಷ್ಠ ಜಾತಿಯಿಂದಲೇ ಸುಧಾರಣೆ ಆರಂಭಿಸಿದರೆ ತಮಗೆ ನೈತಿಕ ಧೈರ್ಯ ಬರುತ್ತದೆಂದು ಅವರ ಭಾವನೆ. ಆಗರಕರ ಮೊದಲು ಉಚ್ಚ ವರ್ಣೀಯರ ಧಾರ್ಮಿಕ ಮನಸ್ಸಿನ ಮೇಲೆ ಹಾಗೂ ರೂಢಿ ಪರಂಪರೆಯ ಮೇಲೆ ಹಲ್ಲೆ ಮಾಡಿದರು. ಈ ನಿರ್ಭಯ ವೃತ್ತಿಯಿಂದಾಗಿ ಅವರು ಒಂಟಿಯಾಗ ಬೇಕಾಯಿತು. ಈ ಟೀಕೆಯ ಹಿಂದೆ ಆತ್ಮ ಸಂಶೋಧನೆಯ ದೃಷ್ಟಿಯಿದೆ. ಅವರ ಸಮಾಜ ಸುಧಾರಣೆಯ ಹಿಂದೆ ಪಾಶ್ಚಾತ್ಯ ವಿಚಾರಧಾರೆಯ ಪ್ರಭಾವವಿದೆ. ಅಲ್ಲದೆ ಅವರು ಸ್ವತಃ ಪ್ರಖರ ವಿಚಾರವಾದಿಗಳೂ ಆಗಿದ್ದರು. ಸಮಾಜ ಪ್ರಬೋಧನೆಗೆ ವಿಚಾರ ಜಾಗೃತಿ, ಲೋಕ ಶಿಕ್ಷಣ ಅವಶ್ಯಕ ಎಂಬುದನ್ನು ಮನಗಂಡಿದ್ದರು.

ಆಗರಕರ ಬದುಕಿನ ಉದ್ದಕ್ಕೂ ಸಮಾಜ ನಿಷ್ಠೆ ಹಾಗೂ ಜ್ಞಾನೋಪಾಸನೆಗೆ ಮಹತ್ವ ನೀಡಿದರು. ವಿಚಾರ ಜಾಗೃತಿಗೊಂಡ ಬಳಿಕವೇ ರಾಜಕಾರಣ ಪ್ರವೇಶಿಸಬೇಕೆಂದು ಬಲವಾಗಿ ನಂಬಿದ್ದರು. ಇದು ಸಮಾಜದ ಉನ್ನತಿಗೆ ಹಾಗೂ ಹಿತಾಸಕ್ತಿಗೆ ಪೂರಕವಾದದ್ದು. ಇಲ್ಲದಿದ್ದರೆ ಸ್ವಾರ್ಥ ರಾಜಕೀಯಸತ್ತೆ ಎಂದಿದ್ದರೂ ಅನಾಹುತಕ್ಕೆ ಕಾರಣವಾಗಬಲ್ಲದು. ಪ್ರಖರ ಧ್ಯೇಯ ಹಾಗೂ ನಿಷ್ಠೆಯಿಂದ ಸನಾತನ ಮನೋವೃತ್ತಿಯೊಂದಿಗೆ ಹೋರಾಡಿದರೆ ಮಾತ್ರ ಸಮಾಜ ಸುಧಾರಣೆ ಸಾಧ್ಯ. ಹಾಗಿದ್ದಾಗ ತತ್ವದೊಂದಿಗೆ ಹೊಂದಾಣಿಕೆಯಿಲ್ಲ. ಪರಿಣಾಮ, ಆಗರಕರ ಸಮಾಜದ ರೋಷವನ್ನು ಎದುರಿಸಬೇಕಾಯಿತು; ಹೋರಾಡ ಬೇಕಾಯಿತು. ಆದರೆ ಪರಾಭವ ಮಾತ್ರ ಸ್ವೀಕರಿಸಲಿಲ್ಲ. ಹತಾಶೆಗೊಳ್ಳಲೂ ಇಲ್ಲ. ಅವರ ಬದುಕಿಗೆ, ವಿಚಾರಕ್ಕೆ ಸತತವಾಗಿ ಚೈತನ್ಯದ ಸಹಾಯ ಸಿಕ್ಕಿತು. ಈ ಚೈತನ್ಯ ವೃತ್ತಿಯೇ ಸಮಾಜಕ್ಕೆ ಆಧುನಿಕ ಪರಿವರ್ತನೆಯ ದೃಷ್ಟಿ ನೀಡಿತು. ಇಂದಿನ ಸಮಸ್ಯೆಗಳನ್ನು ಬಿಡಿಸಲು, ಕೊನೇಪಕ್ಷ ಅರ್ಥ ಮಾಡಿಕೊಳ್ಳಲು, ಆಗರಕರರ ವೈಚಾರಿಕ ತಾತ್ವಿಕ ನಿಲುವನ್ನು ಅರಿತುಕೊಳ್ಳುವುದು ಇಂದಿನ ಅಗತ್ಯಗಳಲ್ಲಿ ಒಂದು.

**ಚಂದ್ರಕಾಂತ ಪೋಕಳೆ**
ಬಿ.ಎಸ್.ಪಿ.ಯು. ಕಾಲೇಜು, ಬೇಡಕಿಹಾಳ - ೫೯೧ ೨೧೪.

# ಶಾಂತಿಗಾಗಿ ಜೀವನ ಮುಡುಪಾಗಿಟ್ಟ ವಿಜ್ಞಾನಿ ಡರೋತಿ ಹಾಜ್‌ಕಿನ್

ಇಪ್ಪತ್ತನೆಯ ಶತಮಾನದಲ್ಲಿ ಎರಡು ಕ್ರಾಂತಿಗಳು ಜರುಗಿವೆ. ಒಂದು ವಿಜ್ಞಾನದಲ್ಲಿ, ಇನ್ನೊಂದು ಸಾಮಾಜಿಕ ಸಂಬಂಧಗಳಲ್ಲಿ. ಮಹಿಳೆಯರು ವಿಜ್ಞಾನದ ವಿಶ್ವದಲ್ಲಿ ಗಣನೀಯವಾಗಿ ಕಾಲಿರಿಸಿದ್ದೇ ಒಂದು ವಿಶೇಷ. ವೈಜ್ಞಾನಿಕ ವೃತ್ತಿಯು ಉಚ್ಚ ಮನೆತನಗಳಿಗೆ ಸೇರಿದ ಪುರುಷರ ಸಾಮ್ರಾಜ್ಯವೇ ಆಗಿರಬೇಕಾಗಿಲ್ಲ ಎಂಬುದನ್ನು ಇವರು ಸ್ಥಿರಗೊಳಿಸಿದರು. ಮೇರಿ ಕ್ಯೂರಿಗೆ ಎರಡನೆ ನೊಬೆಲ್ ಪಾರಿತೋಷಕ ದೊರೆತ ಮುಂದಿನ ವರ್ಷದಲ್ಲಿ, ಅಂದರೆ ೧೯೧೦ರಲ್ಲಿ ಡರೋತಿ ಜನಿಸಿದರು. ಶಾಲಾ ಇನ್‌ಸ್ಪೆಕ್ಟರ್ ಆಗಿ ಆಕೆಯ ತಂದೆ ಜಾನ್ ಕ್ರೋಫುಟ್ ಆಗ್ಗೆ ಕೈರೋದಲ್ಲಿ ಕೆಲಸ ಮಾಡುತ್ತಿದ್ದರು. ಅವರ ಪತ್ನಿ ಮೋಲಿ. ಮುಂದೊಂದು ದಿನ ನೊಬೆಲ್ ಪಾರಿತೋಷಕ ಪಡೆಯಲಿದ್ದ ಡರೋತಿ ಜನಿಸಿದ್ದು ಮೇ ೧೨ರಂದು. ಬ್ರಿಟನ್ನಿನ ಮೊಟ್ಟ ಮೊದಲ ಮಹಿಳಾ ನೊಬೆಲ್ ವಿಜೇತೆ ಈಕೆ. ಆ ಪಾರಿತೋಷಕವನ್ನು ಪ್ರತಿವರ್ಷ ಕೊಡಲಾಗುತ್ತದೆ; ಆದರೆ ಪ್ರತಿಯೊಬ್ಬ ವಿಜ್ಞಾನಿಯೂ ಐನ್‌ಸ್ಟೈನ್, ನೀಲ್ಸ್ ಬೋರ್ ಅಥವಾ ಮೇರಿ ಕ್ಯೂರಿ ಆಗಿರುವುದಿಲ್ಲವಲ್ಲ! ಡರೋತಿ ಹಾಜ್‌ಕಿನ್ ಅಂತಹ ಅಪ್ರತಿಮ ವಿಜ್ಞಾನಿ ತಾನೆಂದು ಎಂದೂ ಭ್ರಮಿಸಲಿಲ್ಲ. ಅವಳ ಹತ್ತಿರದ ಮಂದಿ ಮಾತ್ರ ಆಕೆಯನ್ನು ಐನ್‌ಸ್ಟೈನ್ ಮತ್ತು ಬೋರ್ ಅಂತಹವರ ಬೌದ್ಧಿಕ ಮಾನಸಪುತ್ರಿ ಎಂದೇ ಬಗೆಯುತ್ತಿದ್ದರು. ವಿಜ್ಞಾನವು ಒಂದು ಉದ್ದಿಮೆ ಎಂಬಷ್ಟು ಬೆಳೆದು ನಿಂತಾಗಲೂ ಆಕೆ ವೈಯ್ಯಕ್ತಿಕ ಖ್ಯಾತಿಗೆ ಮನಸೋತವಳಲ್ಲ. ಖ್ಯಾತಿ ತಾನೇತಾನಾಗಿ ದೊರೆತಾಗಲೂ ತನ್ನ ವೈಯ್ಯಕ್ತಿಕ ಪ್ರತಿಷ್ಠೆಗೆ ಅದನ್ನು ಬಳಸಿಕೊಳ್ಳಲಿಲ್ಲ; ಬದಲಾಗಿ, ವಿಶ್ವಕ್ಕೆ ಉತ್ತಮ ಭವಿಷ್ಯ ಕೊಡಲು ಅದನ್ನು ಸಾಧನವನ್ನಾಗಿಸಿಕೊಂಡಳು.

ಡರೋತಿಯ ಬಾಲ್ಯ ಕಳೆದದ್ದು ಈಜಿಪ್ಟ್ ಮತ್ತು ಸೂಡಾನ್‌ಗಳಲ್ಲಿ. ವಸಾಹತು ಆಡಳಿತ ಅದೆಷ್ಟು ಘೋರವೆಂಬುದರ ಪರಿಚಯ ಆಕೆಗೆ ದೊರೆತದ್ದು ಇಲ್ಲೇ : ಹಳ್ಳಿಗಳ ಧ್ವಂಸ, ಜನ - ದನಗಳ ಘೋರ ಹತ್ಯೆ, ಬ್ರಿಟಿಷ್ ಆಡಳಿತದ ವಿರುದ್ಧ ಪ್ರಚಂಡ ಪ್ರತಿಭಟನೆಗಳು. ತನ್ನ ೧೦ನೆಯ ವಯಸ್ಸಿನಲ್ಲಿ ತಾಯಿಯೊಡನೆ ಡರೋತಿ ಇಂಗ್ಲೆಂಡಿಗೆ ಮರಳಿ ಶಾಲೆಗೆ ಸೇರುವುದಿತ್ತು. ಮೊದಲನೆ ಮಹಾಯುದ್ಧದಿಂದ ಉಂಟಾಗಿದ್ದ ಭಾರಿ ಹೊಡೆತಗಳ ಪ್ರಭಾವ ಇನ್ನೂ ಮಾಸಿರಲಿಲ್ಲ. ತಾಯಿಯ ಸಹೋದರರೆಲ್ಲಾ ಯುದ್ಧದಲ್ಲಿ ಮಡಿದಿದ್ದರು. ಅದೇ ಕತೆ ಎಷ್ಟೋ ಬೇರೆ ಕುಟುಂಬಗಳದ್ದು. ಮೋಲಿ ಕ್ರೋಫುಟ್ ಲೇಬರ್ ಪಕ್ಷದ ಸದಸ್ಯೆ, ಶಾಂತಿಗಾಗಿ ಶ್ರಮಿಸಲು ಆಕೆ ಮುಂದಾದಳು. ೧೯೨೫ರಲ್ಲಿ ಲೀಗ್ ಆಫ್ ನೇಷನ್ಸ್‌ನ ೬ನೇ ಸಮಾವೇಶ ಜಿನೀವಾದಲ್ಲಿ ಸೇರಲಿತ್ತು. ಮಕ್ಕಳನ್ನು ಅಲ್ಲಿಗೆ ಕರೆದೊಯ್ದಳು. ಮುಂದೆ



*ಜೆ.ಡಿ. ಬರ್ನಾಲ್ ಜೊತೆ ಡರೋತಿ*

ಪಗ್‌ವಾಶ್ ಸಮಾವೇಶದ ಅಧ್ಯಕ್ಷೆಯಾಗಲಿದ್ದ ಡರೋತಿಗೆ ಇದು ಮೊದಲ ಸಾರ್ವಜನಿಕ ಚಟುವಟಿಕೆ. ''ಅಂಧಕಾರದ ವಿರುದ್ಧ ಸೆಣಸುವ ಭಾವನೆಯು ಹೊಸ ಚೈತನ್ಯ ನೀಡುವಂತಿತ್ತು'' ಎಂದು ಅದನ್ನು ನೆನಪಿಸಿಕೊಳ್ಳುತ್ತಿದ್ದುದುಂಟು.

ಕ್ರೋಫುಟ್ ಕುಟುಂಬದಲ್ಲಿ ಗಂಡು ಮಕ್ಕಳಿರಲಿಲ್ಲ. ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಎಲ್ಲ ಬೆಂಬಲವನ್ನು ನೀಡಲಾಗಿತ್ತು. ವಿಲಿಯಂ ಬ್ರಾಗ್ ಎಕ್ಸ್-ರೇ ಕ್ರಿಸ್ಟಲೋಗ್ರಫಿ (ಸ್ಫಟಿಕ ಶಾಸ್ತ್ರ) ಬಗ್ಗೆ ನೀಡಿದ ಉಪನ್ಯಾಸಗಳ ಪುಸ್ತಕವೊಂದನ್ನು ಡರೋತಿಗಾಗಿ ಮೋಲಿ ಕೊಂಡಳು. ರಸಾಯನಶಾಸ್ತ್ರ ಹಾಗೂ ಕ್ರಿಸ್ಟಲ್(ಹರಳು - ಸ್ಫಟಿಕ) ಗಳ ಪ್ರಪಂಚವೆಂದರೆ ಡರೋತಿಗೆ ಪ್ರಾಣ. ೧೯೨೮ರಲ್ಲಿ ಪ್ರೌಢಶಾಲಾ ಪರೀಕ್ಷೆ. ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಮೂವತ್ತು ಪೌಂಡ್ ವಿದ್ಯಾರ್ಥಿವೇತನ ಪಡೆದಳು. ಆಕ್ಸ್‌ಫರ್ಡ್‌ನ ಸೋಮರ್ವಿಲ್ ಕಾಲೇಜಿನಲ್ಲಿ ಪ್ರವೇಶವೂ ದೊರೆಯಿತು.

*ತಾಯಿಯ ಸುರಕ್ಷಣೆಯಲ್ಲಿದ್ದ ಡರೋತಿ ಈಗ ಸುತ್ತಣ ಪ್ರಪಂಚವನ್ನೆದುರಿಸಲು ಸಜ್ಜಾಗಬೇಕಾಗಿತ್ತು. ಅದೂ ಎಷ್ಟು ಭಯಾನಕ ಪ್ರಪಂಚ! ಹೇಳಿ ಕೇಳಿ ಆಕ್ಸ್‌ಫರ್ಡ್ ಸಾಮಾಜಿಕ ಮಡಿವಂತಿಕೆಯ ಆಗರ. ೧೯೨೭ರಲ್ಲಿ ಕೂಡ ಹುಡುಗಿಯರ ಪ್ರವೇಶವನ್ನು ನಿಯಂತ್ರಿಸಬೇಕೆಂಬ ಶಾಸನವನ್ನು ಆ ವಿಶ್ವವಿದ್ಯಾಲಯ ಅಂಗೀಕರಿಸಿತ್ತು! ಅದರ ಅಂಗಸಂಸ್ಥೆಗಳಾದರೋ ಮಹಿಳೆಯರಿಗೆ ಸದಸ್ಯತ್ವ ಕೊಡಕೂಡದೆಂಬ ನಿರ್ಬಂಧವನ್ನಿರಿಸಿ ಕೊಂಡಿದ್ದುವು. ಕೆಲವು ಪ್ರಾಧ್ಯಾಪಕರು ಹುಡುಗಿಯರನ್ನು ತರಗತಿಗಳಿಗೆ ಸೇರಿಸಿಕೊಳ್ಳುವುದೇ ಇಲ್ಲವೆಂಬ ತೀರ್ಮಾನ ಪ್ರಕಟಿಸಿದ್ದರು! ಮಹಿಳೆಯರ ವಿರುದ್ಧದ ಈ ರೀತಿಯ ನಡಾವಳಿ ಇಂಗ್ಲೆಂಡಿನಲ್ಲಿ ಆಗ್ಗೆ ಅಪರೂಪವೇನಾಗಿರಲಿಲ್ಲ. ಅವರಿಗೆ ಮತದಾನದ ಹಕ್ಕು ಅಲ್ಲಿ ನೀಡಲಾದದ್ದು ೧೯೨೮ರಲ್ಲಿ!*

ಕಾಲೇಜಿನಲ್ಲಿ ಡರೋತಿ ವ್ಯಾಸಂಗ ಮಾಡಿದ್ದು ರಸಾಯನಶಾಸ್ತ್ರ. ಸ್ಫಟಿಕವಿಜ್ಞಾನವನ್ನು ಸ್ವಂತವಾಗಿ ಅಭ್ಯಸಿಸಿದಳು. ಜರ್ಮನಿಯ ಫಾನ್ ಲೋನ್ ಎಕ್ಸ್-ರೇ ಸಹಾಯದಿಂದ ಸ್ಫಟಿಕಗಳನ್ನು ಅರ್ಥಮಾಡಿಕೊಳ್ಳಲು ಉಪಕ್ರಮಿಸಿದ ಮೊದಲ ಭೌತಶಾಸ್ತ್ರಜ್ಞ. ಆತನ ಪ್ರಶ್ನೆ ''ಮೂಳೆಗಳ ಸೀಳುಗಳನ್ನು ತೋರಿಸುವುದಾದರೆ ಎಕ್ಸ್-ರೇಗಳು ಸ್ಫಟಿಕಗಳಲ್ಲಿ ಏಕೆ ತೋರಿಸಬಾರದು?'' ತೋರಿಸುತ್ತದೆಂದು ಸಾಧಿಸಲಾದ್ದು ಆಮೇಲೆ. ಸ್ಫಟಿಕಗಳಲ್ಲಿ ಬೇಕಾದಷ್ಟು ಖಾಲಿ ಜಾಗಗಳಿರುತ್ತವೆ. ಇರುವ ಪರಮಾಣುಗಳು ಒಂದು ನಿಯಮದಂತೆ ಕೂಡಿಕೊಂಡಿರುತ್ತವೆ. ಸ್ಫಟಿಕಗಳ ಎಕ್ಸ್-ರೇ ಚಿತ್ರದಲ್ಲಿ ಅಲ್ಲಲ್ಲಿ ಗುರುತುಗಳು ಕಾಣುತ್ತವೆ. ವಿಲಿಯಂ ಮತ್ತು ಲಾರೆನ್ಸ್ ಬ್ರಾಗ್ (ಅಪ್ಪ - ಮಗ ; ೧೯೧೫ರಲ್ಲಿ ಇವರು ಭೌತಶಾಸ್ತ್ರದ ನೊಬೆಲ್ ಪಾರಿತೋಷಕ ಹಂಚಿಕೊಂಡಿದ್ದರು) ಈ ಗುರುತುಗಳನ್ನಾಧರಿಸಿ ಸ್ಫಟಿಕದ ರಚನೆಯನ್ನೂ ಅದರಲ್ಲಿ ಪರಮಾಣುಗಳ ವಿನ್ಯಾಸವನ್ನೂ ತಿಳಿಸಿಕೊಡುತ್ತವೆಂದು ತೋರಿಸಿದ್ದರು. ಸ್ಫಟಿಕಶಾಸ್ತ್ರಜ್ಞನ ಕೆಲಸವೇ ಅದು: ಗುರುತುಗಳನ್ನು ಆಧರಿಸಿ ಸ್ಫಟಿಕಗಳ ರಚನೆಯನ್ನು ಸ್ಪಷ್ಟಗೊಳಿಸುವುದು. ಮೊದಲು ಸಾಧ್ಯವಿರುವ ರಚನೆಗಳನ್ನೆಲ್ಲಾ ತನ್ನ ಪ್ರತಿಭೆಯಿಂದ ಊಹಿಸುತ್ತಾನೆ. ನಂತರ ಸೂಕ್ಷ್ಮವಾದ ಲೆಕ್ಕಾಚಾರಗಳಿಂದ ಅಸಂಭವವೆನಿಸುವ ಸಾಧ್ಯತೆಗಳನ್ನು ಒಂದೊಂದಾಗಿ ಕೈಬಿಡುತ್ತಾನೆ. ಭೌತಿಕವಾಗಿ ಸರಿದೂಗುವಂತಹ ಮಾದರಿಯನ್ನು ಕ್ರಮೇಣ ಸ್ಫುಟವಾಗಿ ಗ್ರಹಿಸುತ್ತಾ ಹೋಗುತ್ತಾನೆ. ಇದು ಕ್ಲಿಷ್ಟವಾದ ಕೆಲಸ. ಎಷ್ಟೋ ಅಡ್ಡೇಟು-ಗುದ್ದೇಟುಗಳ ಪ್ರತಿಫಲ ಅದು.

ವಿದ್ಯಾರ್ಥಿ ದೆಸೆಯಲ್ಲೇ ಡರೋತಿಗೆ ಸ್ಫಟಿಕಗಳ ಬಗ್ಗೆ ಅಂತರ್ದೃಷ್ಟಿ ಲಭಿಸಿತ್ತು. ಆ ಹೊಳಹಿನ ನೆಲೆಯಲ್ಲಿ ಪ್ರೌಢ ಪ್ರಬಂಧ ಬರೆಯುವ ಆಶಯ ಅವಳದು. ೧೯೩೨ರಲ್ಲಿ ಬಿ.ಎ. ಪದವಿಯನ್ನು ಪ್ರಥಮ ದರ್ಜೆಯಲ್ಲಿ ಪಡೆದ ಆಕೆ ಕೇಂಬ್ರಿಜ್‌ನಲ್ಲಿ ಜೆ. ಡಿ. ಬರ್ನಾಲರ ಪ್ರಯೋಗಶಾಲೆಯಲ್ಲಿ ಅಭ್ಯಾಸ ಮುಂದುವರಿಸಲು ವಿದ್ಯಾರ್ಥಿವೇತನ ಪಡೆದಳು. ಜಾನ್ ಡೆಸ್‌ಮಂಡ್ ಬರ್ನಾಲ್ ಎಂದರೆ ಸ್ಫಟಿಕ ವಿಜ್ಞಾನದಲ್ಲಿ ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದ್ದ ಆದ್ಯ ಪ್ರವರ್ತಕ: ಸ್ಫಟಿಕ ಎಕ್ಸ್-ರೇ ವಿಧಾನದಿಂದ ರಸಾಯನಶಾಸ್ತ್ರ, ಜೀವಶಾಸ್ತ್ರಗಳನ್ನು ವಿಕಾಸಗೊಳಿಸಿದ್ದ ಖ್ಯಾತಿ ಆತನದು. ಅದಷ್ಟೇ ಆತನ ಸೀಮಿತ ಕ್ಷೇತ್ರವಾಗಿರಲಿಲ್ಲ. ಅವನೊಬ್ಬ ಸಾದಾಸೀದಾ ಕಮ್ಯುನಿಸ್ಟ್. ಸೋವಿಯೆತ್ ಒಕ್ಕೂಟದಂತಹ ಸಮಾಜವಾದಿ ರಾಜ್ಯವೊಂದರಲ್ಲಿ

## ಡಾ|| ಸವ್ಯಸಾಚಿ ಚಟರ್ಜಿ

**ಮಾತ್ರವೇ ವಿಜ್ಞಾನವು ಕೈಕೋಳದ ಬಂಧನದಿಂದ ಮುಕ್ತವಾಗಿ ಇಡೀ ಮಾನವಕುಲದ ಒಳಿತಿಗೆ ಸಾಧನವಾಗುತ್ತದೆಂದು ಆತನ ಅಚಲ ನಂಬಿಕೆ. ಇಂಥದೇ ಭಾವನೆ ಡರೋತಿಯ ಮನದಾಳದಲ್ಲಿ ತುಂಬಿತ್ತು. ಡರೋತಿ-ಬರ್ನಾಲ್ ಜೋಡಿ ಹೇಳಿ ಮಾಡಿಸಿದಂತಿತ್ತು. ವಿಶ್ವದ ಘಟನೆಗಳು ಬುದ್ಧಿಜೀವಿಗಳ ಜಡತೆಯನ್ನು ದೂರಮಾಡಿದ್ದುವು: ಆರ್ಥಿಕ ಕುಸಿತ, ಫ್ಯಾಸಿಸಂನ ವ್ಯಾಪಕ ವೃದ್ಧಿ, ಸ್ಪೇನಿನ ಅಂತರ್ಯುದ್ಧ, ಇತ್ಯಾದಿ. ಬುದ್ಧಿ ಜೀವಿಗಳ ಪ್ರತಿಕ್ರಿಯೆಗಳ ಚಾಲನೆಗೆ ಬರ್ನಾಲ್ ನಾಯಕ, ಪ್ರೇರಕ ಶಕ್ತಿ. ಎರಡನೆ ಮಹಾಯುದ್ಧ ಆರಂಭವಾದಾಗ ಯುದ್ಧ ಕಾರ್ಯಗಳಲ್ಲಿ ವಿಜ್ಞಾನಿಗಳನ್ನು ತೊಡಗಿಸಿದವನೂ ಈತನೇ. ತಾನು ಫ್ಯಾಸಿಸ್ಟ್ ದುಷ್ಟಶಕ್ತಿಯ ವಿರುದ್ಧ ಹೋರಾಡುವುದೆಂತು ಎಂದು ಡರೋತಿ ಪ್ರಶ್ನಿಸಿಕೊಂಡಳು. ಬ್ರಿಟನ್ನಿನ ವಿಶ್ವ ವಿದ್ಯಾಲಯಗಳಲ್ಲಿ ವಿಜ್ಞಾನವನ್ನು ಜೀವಂತವಾಗಿರಿಸುವುದು ತನ್ನ ಜವಾಬ್ದಾರಿಯಾಗಬೇಕು, ವಿಶೇಷತಃ ಎಕ್ಸ್-ರೇ ಸ್ಫಟಿಕ ವಿಜ್ಞಾನವನ್ನು ವಿಕಾಸಗೊಳಿಸಬೇಕು, ಎಂದು ತೀರ್ಮಾನಿಸಿದಳು.**

ಆಕ್ಸ್‌ಫರ್ಡ್‌ನ ಮಡಿವಂತಿಕೆಯೊಡನೆ ಹೋಲಿಸಿದರೆ ಬರ್ನಾಲರ ಪ್ರಯೋಗಶಾಲೆ ಒಂದು ಅನೌಪಚಾರಿಕ ಮುಕ್ತ ಶಾಲೆಯಂತಿತ್ತು. ಬರ್ನಾಲರೊಡನೆ ಸೇರಿ ಡರೋತಿ ೧೨ ಸಂಶೋಧನಾ ಲೇಖನಗಳನ್ನು ಪ್ರಕಟಿಸಿದಳು, ಕೇವಲ ಎರಡು ವರ್ಷಗಳಲ್ಲಿ. ಪ್ರೋಟೀನುಗಳ ಬಗೆಗಿನ ಸಂಶೋಧನೆಗಳಂತೂ ಹೊಚ್ಚ ಹೊಸವು. ಆಗ್ಗೆ ಅವಳ ಮಾತೃ ಶಿಕ್ಷಣಸಂಸ್ಥೆ ಆಕ್ಸ್‌ಫರ್ಡಿನ ಸೋಮರ್ವಿಲ್ ಕಾಲೇಜು, ಆಕೆಯನ್ನು ಪ್ರಾಧ್ಯಾಪಕಿಯಾಗಿ ಬರಲು ಆಹ್ವಾನಿಸಿತು. ಅರ್ಧಮನಸ್ಸಿನಲ್ಲೇ ಅಲ್ಲಿಗೆ ಹೋಗಲು ನಿರ್ಧರಿಸಿದಳು. ಬರ್ನಾಲರೊಡನೆ ಜಂಟಿ ಸಂಶೋಧನೆಗೆ ಇತಿಶ್ರೀ ಹಾಡಬೇಕಾಗುತ್ತದೆಂಬ ಅಳುಕು ಭಾದಿಸುತ್ತಿತ್ತು. ಆದರೆ ಸ್ವತಂತ್ರವಾಗಿ ತಾನು ವಿಜ್ಞಾನಿಯಾಗಿ ಬೆಳೆಯಬೇಕೆಂಬ ಸಂಕಲ್ಪದ ಕರೆ ಬಲವಾಗಿತ್ತು.

ಆಕೆ ಆಕ್ಸ್‌ಫರ್ಡ್‌ಗೆ ಹಿಂದಿರುಗಿದ್ದು ೧೯೩೪ರಲ್ಲಿ. ಈಗಿನ ಸಹೋದ್ಯೋಗಿಗಳು ಆಕೆಗೆ ಬೆಂಬಲ ನೀಡುವುದರಲ್ಲಿ ಹಿಂದೇಟು ಹಾಕಲಿಲ್ಲ. ಆಕೆಯ ಸ್ಫಟಿಕ ವಿಜ್ಞಾನದ ಸಹಾಯದಿಂದ ತಮ್ಮ ರಸಾಯನಶಾಸ್ತ್ರದ ಸಂಶೋಧನೆಗಳಿಗೆ ಅನುವಾಗುತ್ತದೆಂಬ ಅರಿವು ಅವರ ಲ್ಲುಂಟಾಗಿತ್ತು. ಆಕೆ ಬಂದು ಬಹಳ ತಿಂಗಳುಗಳೇನೂ ಕಳೆದಿರಲಿಲ್ಲ. ಅಲ್ಲಿಯ ಒಬ್ಬ ಹಿರಿಯ ಸಹೋದ್ಯೋಗಿಯು ಇನ್ಸುಲಿನ್ ಸ್ಫಟಿಕಗಳನ್ನು ತಂದುಕೊಟ್ಟು ಅದರ ರಚನೆಯನ್ನು ಕಂಡು ಹಿಡಿಯಲು ಕೋರಿದ.

ಇನ್ಸುಲಿನ್ನನ್ನು ಮೊಟ್ಟಮೊದಲಿಗೆ ಪ್ರತ್ಯೇಕೀಕರಿಸಿದ್ದು ೧೯೨೨ರಲ್ಲಿ. ಕೆನಡಾದ ವಿಜ್ಞಾನಿಗಳ ಸಾಧನೆ ಅದು. ಅದನ್ನು ಸ್ಫಟಿಕರೂಪಕ್ಕೆ ತಂದಿದ್ದು ೧೯೨೬ರಲ್ಲಿ. ಆದರೆ ಅದರ ರಚನೆಯನ್ನು ಯಾರೂ ಸ್ಫುಟವಾಗಿ ನಿಗದಿಗೊಳಿಸಿ ಹೇಳಿರಲಿಲ್ಲ. ಮೇದೋಜೀರಕ ಗ್ರಂಥಿಯಲ್ಲಿ ಸಕ್ಕರೆಯ ಸಂಗ್ರಹವನ್ನು ಇನ್ಸುಲಿನ್ ನಿಗ್ರಹಿಸುತ್ತದೆಂಬುದು ತಿಳಿದಿತ್ತು ; ಮಧುಮೇಹ ಉಳ್ಳವರಿಗೆ ಅದೊಂದು ವರವಾಗಿದ್ದಿತೆಂದೂ ತಿಳಿದಿತ್ತು. ಆದರೆ ಅದರ ಕ್ರಿಯೆ, ರಚನೆ, ಇತ್ಯಾದಿಗಳು ಇನ್ನೂ ತಿಳಿಯಬೇಕಿತ್ತು. ಡರೋತಿಗೆ ಅದೊಂದು ಸವಾಲು. ೧೯೩೪ರಲ್ಲಿ ಈ ಕೆಲಸವನ್ನು ಆಕೆ ಆರಂಭಿಸಿದಳು. ಸಂಶೋಧಕಿಯಾಗಿ ಹಸುಳೆಯಲ್ಲದಿದ್ದರೂ ಗಾಢ ಅನುಭವವಿನ್ನೂ ಇರಲಿಲ್ಲ. ಆಗ್ಗೆ ಆಕೆಯ ವಯಸ್ಸು ೨೪. ಅಲ್ಲಿಂದ ಮೂವತ್ತೈದು ವರ್ಷ ಶ್ರಮಪಟ್ಟು ಈ ಪ್ರಶ್ನೆಗೆ ಆಮೂಲಾಗ್ರವಾದ ಉತ್ತರ ದೊರಕಿಸಿಕೊಟ್ಟ ಕೀರ್ತಿ ಡರೋತಿ ಹಾಜ್‌ಕಿನ್‌ರದು.

ದೊಡ್ಡ ಗಾತ್ರದ ಅಣುವೊಂದರ ರಚನೆಯನ್ನು ನಿಷ್ಕೃಷ್ಟವಾಗಿ ತಿಳಿಸಿಕೊಟ್ಟ ಮಹತ್ವದ ಮೊದಲ ಶ್ರೇಯಸ್ಸು ಆಕೆಗೆ ಲಭಿಸಿದ್ದು ಪೆನಿಸಿಲಿನ್ ಸಂಬಂಧದಲ್ಲಿ. ೧೯೨೮ರಷ್ಟು ಮುಂಚೆಯೇ ಪೆನಿಸಿಲಿನ್ ಕಂಡುಹಿಡಿಯಲಾಗಿತ್ತು. ಅದರ ಔದ್ಯೋಗಿಕ ಉತ್ಪಾದನೆ ಆರಂಭವಾದ್ದು ಮಹಾಯುದ್ಧದ ಸಂದರ್ಭದಲ್ಲಿ; ಗಾಯಗೊಂಡ ಸೈನಿಕರ ಉಪಚಾರಕ್ಕಾಗಿ. ಅದರ ತಯಾರಿಕೆಯ ವಿಧಾನ ಆಗ್ಗೆ ಬೂಷ್ಟು ನಿಕ್ಷೇಪದಿಂದ; ಈ ರೀತಿ ಅಧಿಕ ಪ್ರಮಾಣದ ಉತ್ಪಾದನೆ ಸಾಧ್ಯವಿರಲಿಲ್ಲ. ಬೇರೆ ಸಂಯೋಜನಾ ವಿಧಾನಗಳನ್ನು ಅಳವಡಿಸಿಕೊಳ್ಳಲಾಯಿತು; ಆದರೆ ಅದರಿಂದ ದೊರೆತ ಉತ್ಪನ್ನಗಳ ಲಕ್ಷಣ ತಿಳಿಯುವಂತಿರಲಿಲ್ಲ. ಹೀಗೆ ಎಷ್ಟೋ ಯತ್ನಗಳು ವಿಫಲವೆಂದು ತಿಳಿಯಲು ಅಸಂಖ್ಯ ಪ್ರಯೋಗಗಳನ್ನು ಮಾಡಬೇಕಿತ್ತು. ಪೆನಿಸಿಲಿನ್‌ನ ರಚನೆ ತಿಳಿದುದಾದರೆ ಈ ದಂಡದ ಪ್ರಯೋಗಗಳನ್ನು ನಿಲ್ಲಿಸಬಹುದಾಗಿದ್ದಿತು. ಈ ಯೋಜನೆಯನ್ನು ಡರೋತಿ ಹಮ್ಮಿಕೊಂಡಳು. ಅದಕ್ಕೆ ಆಕೆಯ ವಿದ್ಯಾರ್ಥಿಗಳ ಸಹಯೋಗವೂ ಇತ್ತು. ಕಡೆಗೆ ಕಾದಿತ್ತು ಆಕೆಗೊಂದು ಆಶಾಭಂಗ: ಅವರ ಪ್ರಯೋಗಗಳೆಲ್ಲಾ "ಮಿಲಟರಿ ಗುಟ್ಟು" ಎಂದು ಹೇಳಲಾಯಿತು. ಯುದ್ಧ ಕಾಲದಲ್ಲಿ ಆಕೆಯ ಸಂಶೋಧನೆಯ ಫಲವನ್ನು



*ವಿಯೆತ್ನಾಮಿನ ಮಹಿಳಾ ಯೋಧರೊಂದಿಗೆ*

ಬಳಸಿಕೊಳ್ಳಲಾಗಲಿಲ್ಲ. ಯುದ್ಧ ಮುಗಿದ ಮೇಲೆ ಆಕೆಯ ವಿಧಾನವನ್ನು ಔಷಧವನ್ನು ತಯಾರಿಸಲು ಅತಿ ಪರಿಣಾಮಕಾರಿ ಮಾರ್ಗವೆಂದು ಕಂಡುಕೊಳ್ಳಲಾಯಿತು.

ಪೆನಿಸಿಲಿನ್ ಬಗೆಗಿನ ಈ ಸಾಧನೆಯು ಡರೋತಿಗೆ ಶ್ರೇಷ್ಠ ಸ್ಫಟಿಕವಿಜ್ಞಾನಿಯೆಂಬ ಖ್ಯಾತಿಯನ್ನು ತಂದುಕೊಟ್ಟಿತು. ೧೯೪೮ರಲ್ಲಿ ಆಕೆಗೆ ಇನ್ನೊಂದು ಕಠಿಣ ಸವಾಲನ್ನು ಎದುರಿಸುವ ಸನ್ನಿವೇಶ ಬಂದಿತು. ಬಿ-೧೨ ವಿಟಮಿನ್ ರಚನೆಯನ್ನು ಕಂಡುಹಿಡಿಯುವುದೇ ಅದು. ಇನ್ಸುಲಿನ್ ಮತ್ತು ಪೆನಿಸಿಲಿನ್‌ಗಳಂತೆ ಇದೂ ಸಹ ಆರೋಗ್ಯವರ್ಧಕವಾಗಿ ಮಹತ್ವದ ಪಾತ್ರ ವಹಿಸುವಂಥದು. ಅದು ಪಿತ್ತಜನಕಾಂಗದಲ್ಲಿದೆ. ಅತಿಮಾರಕವಾದ ರಕ್ತಕ್ಷಯಕ್ಕೆ ಅದು ಪ್ರಬಲವಾದ ಮದ್ದು. ಸ್ಫಟಿಕವಿಜ್ಞಾನಿಯಾಗಿ ಡರೋತಿಗೆ ಇದರಲ್ಲಿ ವಿಶೇಷ ಆಸಕ್ತಿ ಇತ್ತು. ಪೆನಿಸಿಲಿನ್‌ಗಿಂತಲೂ ಹೆಚ್ಚು ಮತ್ತು ಇನ್‌ಸುಲಿನ್‌ಗಿಂತಲೂ ಕಡಿಮೆ ಸಂಕೀರ್ಣವಾದ ಬಿ-೧೨ರ ರಚನೆಯನ್ನು ತಿಳಿಯುವಲ್ಲಿ ಯಶಸ್ವಿಯಾದರೆ ಆಮೇಲೆ ಇನ್‌ಸುಲಿನ್ ರಚನೆಯ ತಿಳುವಳಿಕೆಯ ಹಾದಿ ತಾನೇತಾನಾಗಿ ತೆರೆದುಕೊಳ್ಳಬಲ್ಲದೆಂಬುದು ಆ ಆಸಕ್ತಿಗೆ ಕಾರಣ.

ಬಿ-೧೨ರ ಅಣುವಿನ ಅಧ್ಯಯನ ಸಾಗುತ್ತಿದ್ದಾಗ ಡರೋತಿಗೆ ಒಂದು ಹೊಸ ಅನುಭವ ಉಂಟಾಯಿತು. ಆ ಅಣುವಿನ ರಚನೆಯನ್ನು ತಮ್ಮ "ಸ್ವಾಧೀನ"ಕ್ಕೆ ಪಡೆಯಲು ಮೆರ್ಕ್ ಮತ್ತು ಗ್ಲಾಕ್ಸೋ ಔಷಧಿ ಏಕಸ್ವಾಮ್ಯ ಕಂಪೆನಿಗಳು ಜಟಾಪಟಿ ನಡೆಸುತ್ತಿದ್ದುವೆಂದು ಆಕೆಗೆ ತಿಳಿಯಿತು. ಸಂಶೋಧಕ ತಂಡಗಳಿಗೆ ಅವು ಹಣವನ್ನು ಕೊಟ್ಟು ಸಂಶೋಧನಾ ಫಲಗಳನ್ನು ಬಹಿರಂಗಪಡಿಸಕೂಡದೆಂಬ ಷರತ್ತನ್ನು ಹಾಕಿದ್ದುವು. ಅದರ ಜ್ಞಾನ ಅವರ ಸ್ವತ್ತಾಗಬೇಕಿತ್ತು ! ಈ ಕಂಪೆನಿಗಳ ಹತ್ತಿರ ಸುಳಿಯದೆ ದೂರ ಉಳಿಯಲು ಡರೋತಿ ತೀರ್ಮಾನಿಸಿದಳು. ಅಸಹ್ಯದಿಂದ ದೂರವಿರುವುದು ಅವಳ ಸ್ವಭಾವವೇ ಆಗಿತ್ತು ! ಅವಳಿಗೆ ರುಚಿಸಿದ ಒಂದು ಪ್ರವೇಶವೆಂದರೆ ಶಾಂತಿ ಚಳುವಳಿ. ಇದರಲ್ಲಿ ಧುಮುಕಿದ್ದರಿಂದ ಆಕೆಗೆ ೧೯೫೩ರಲ್ಲಿ ಅಮೆರಿಕಾಕ್ಕೆ ಹೋಗಲು ವೀಸಾ ನಿರಾಕರಿಸಲಾಯಿತು. ಎರಡು ಬಾರಿ ನೊಬೆಲ್ ಪಾರಿತೋಷಕ ಪಡೆದಿದ್ದ ಲೈನಸ್ ಪಾಲಿಂಗ್‌ಗೂ ಇಂಥದೇ ನಿರಾಕರಣೆ ಅಡ್ಡಿಬಂದಿತ್ತು. ಅವರಿಗೆ ರಹದಾರಿ ಪತ್ರ ನೀಡಲು ಅಮೆರಿಕಾ ಸರ್ಕಾರ ನಿರಾಕರಿಸಿತ್ತು.

ಬಿ-೧೨ರ ಸಂಶೋಧನೆಯ ಫಲ ದೊರಕಲು ೧೨ ವರ್ಷಗಳು ಬೇಕಾಯಿತು. ೧೯೬೪ರ ರಸಾಯನಶಾಸ್ತ್ರದ ನೊಬೆಲ್ ಪಾರಿತೋಷಕ ಆಕೆಗೆ ದೊರೆತದ್ದು ಈ ಸಂಶೋಧನೆಗೆ. ಆಕೆಗೆ ಹಾಗೂ ಎಲ್ಲ ಸಹೋದ್ಯೋಗಿ ಮಿತ್ರರಿಗೆ ಇದು ಸಂಭ್ರಮದ ಸಂಗತಿಯಾಗಿತ್ತು. ಆಕೆಯೊಬ್ಬಳೇ ಆ ವರ್ಷದಲ್ಲಿ ಆ ವಿಭಾಗದ ಪಾರಿತೋಷಕ ಪಡೆದಿದ್ದುದು ಒಂದು ವಿಶೇಷವಾಗಿತ್ತು. ಆಕೆ ಬಯಸಿದ್ದುದು ಅದನ್ನಲ್ಲ. ಬರ್ನಾಲ್ ಜೊತೆ ಅದನ್ನು ಹಂಚಿಕೊಳ್ಳುವಂತಿರಬೇಕಾಗಿತ್ತೆಂದು ಆಕೆಯ ಅಭಿಲಾಷೆ; ಪ್ರತಿ ಪ್ರಮುಖ ಘಟ್ಟದಲ್ಲೂ ಆತನ ಮಾರ್ಗದರ್ಶನವೇ ದಾರಿದೀಪವಾಗಿತ್ತೆಂದು ಎಲ್ಲೆಡೆಯೂ ಡರೋತಿ ನಮೂದಿಸಿದ್ದಳು. ಇದೊಂದರಲ್ಲೇ ಅಲ್ಲ; ಡರೋತಿಯ ಪರಿಚಯಸ್ಥರೆಲ್ಲರೂ ಚೆನ್ನಾಗಿ ತಿಳಿದಿದ್ದರು, ಡರೋತಿ ಯಾವಾಗಲೂ ಇತರರ ಸಹಯೋಗವನ್ನು ಸರ್ವಥಾ ಮಾನ್ಯಮಾಡುತ್ತಿದ್ದಳೆಂದು.

ನೊಬೆಲ್ ಪುರಸ್ಕಾರ ಪಡೆಯುವುದು ಸಾಮಾನ್ಯವಾಗಿ ವಿಜ್ಞಾನಿಯೊಬ್ಬ ಶಿಖರವನ್ನು

ಏರಿರುವುದರ ಸೂಚನೆ. ಕೆಲವರು ಅದರಿಂದ ತೃಪ್ತರಾಗುವುದಿಲ್ಲ; ಅವರು ಮೋಡಗಳನ್ನೇರ ಬಯಸುತ್ತಾರೆ. ಡರೋತಿ ಇನ್ನೂ ಇನ್ಸುಲಿನ್ ರಚನೆಯನ್ನು ಕಂಡುಹಿಡಿಯಬೇಕಾಗಿತ್ತು. ತನ್ನ ತಂಡದವರನ್ನೊಡಗೂಡಿ ೧೯೬೯ರಲ್ಲಿ ಸಮಸ್ಯೆಯನ್ನು ಬಗೆಹರಿಸಿದಳು. ಸಂಶೋಧನಾ ಕ್ಷೇತ್ರದಲ್ಲಿ ಮಹತ್ತರ ವಿಜಯ ಅವಳದಾಯಿತು. ಸ್ಫಟಿಕ ವಿಜ್ಞಾನಕ್ಕೆ ಡರೋತಿ ನೀಡಿದ ೩೭ ವರ್ಷಗಳಲ್ಲಿ ಆ ಕ್ಷೇತ್ರ ಬೇಕಾದಷ್ಟು ಪರಿವರ್ತನೆ ಕಂಡಿತ್ತು. ಪ್ರತಿಹಂತದಲ್ಲೂ ಹೊಸ ವಿಧಾನಗಳನ್ನು ಆಕೆ ಅಳವಡಿಸಿಕೊಂಡಿದ್ದಳು. ಎಂದೂ ಹಣದ ಮಹಾಪೂರ ಹರಿದು ಬಂದು ಆಕೆಯ ಸಂಶೋಧನೆಗಳನ್ನು ಸುಗಮಗೊಳಿಸಲಿಲ್ಲ. ಭಾರತಕ್ಕೆ ಭೇಟಿಯಿತ್ತಿದ್ದಾಗ ಒಮ್ಮೆ ವಿಜ್ಞಾನದ ಸಂಶೋಧನೆಗಳಿಗೆ ಸಾಕಷ್ಟು ಹಣ ಒದಗಿಬರುತ್ತಿಲ್ಲವೆಂಬ ದೂರನ್ನು ಒಬ್ಬ ವಿಜ್ಞಾನಿ ಆಕೆಯ ಮುಂದೆ ಹೇಳಿದಾಗ ಅವರೆಂದರು : ''ಹಣದ ಕೊರತೆಯು ನನ್ನ ಸಂಶೋಧನೆಗಳಿಗೆ ಸವಾಲನ್ನೊಡ್ಡುತ್ತಿತ್ತು; ಅದು ನನ್ನನ್ನು ಹೆಚ್ಚು ಕ್ರಿಯಾಶೀಲಳನ್ನಾಗಿಸಿತು.''

ಆಕೆ ನಿವೃತ್ತಿ ಪಡೆದದ್ದು ೧೯೭೦ರಲ್ಲಿ, ತನ್ನ ೬೦ನೆಯ ವಯಸ್ಸಿನಲ್ಲಿ. ಅದರ ಮಾರನೆಯ ವರ್ಷವೇ ಬರ್ನಾಲ್ ತೀರಿಕೊಂಡದ್ದು. ಡರೋತಿಗೆ ಅದೊಂದು ಆಘಾತ. ಯುವ ವಿದ್ಯಾರ್ಥಿನಿಯಾಗಿದ್ದಾಗ ಆಕೆ ಬರ್ನಾಲರನ್ನು ಪ್ರೇಮಿಸಿದ್ದಳು. ಆತನಿಗೆ ಆಗ್ಗೆ ಆಗಲೇ ಮದುವೆಯಾಗಿತ್ತು. ಅಲ್ಲದೆ ಆತನ ಸ್ವಭಾವವೇ ಬೇರೆ: ಅತ್ಯುತ್ಸಾಹದ ವ್ಯಕ್ತಿ. ಈಕೆ ಹಾಗಲ್ಲ. ೧೯೩೮ರಲ್ಲಿ ಆಕೆಗೆ ಸರಿಬರುವ ಒಬ್ಬನನ್ನು ಸಂಧಿಸಿ ಆಮೇಲೆ ಆತನನ್ನು ಮದುವೆಯಾದಳು. ಥಾಮಸ್ ಹಾಜ್‌ಕಿನ್ ಆತನ ಹೆಸರು. ಶ್ರೀಮಂತ ಕುಟುಂಬಕ್ಕೆ ಸೇರಿದವನು. ಅವನ ತಾತನ ಸಹೋದರರು 'ಹಾಜ್‌ಕಿನ್ ಕಾಯಿಲೆ' ಯನ್ನು ಕಂಡುಹಿಡಿದು ನೊಬೆಲ್ ಪಾರಿತೋಷಕ ಪಡೆದಿದ್ದರಂತೆ. ಥಾಮಸ್‌ನ ಸಹೋದರನ ಒಬ್ಬ ಮಗ ೧೯೬೩ರಲ್ಲಿ ಶರೀರವಿಜ್ಞಾನದ ಕ್ಷೇತ್ರದಲ್ಲಿ ನೊಬೆಲ್ ಪಾರಿತೋಷಕ ಪಡೆದ. ಇಷ್ಟೆಲ್ಲಾ ಹಿನ್ನೆಲೆಯ ಥಾಮಸ್ ಮಾತ್ರ ಬ್ರಿಟನ್ನಿನ ಕಮ್ಯುನಿಸ್ಟ್ ಪಕ್ಷದ ಪೂರ್ಣಾವಧಿ ಕಾರ್ಯಕರ್ತನಾಗಿದ್ದ. ಮದುವೆಯಾದಾಗ ಅವನಿಗೆ ಹೇಳಿಕೊಳ್ಳಬಹುದಾದ ವರಮಾನವೇನೂ ಇರಲಿಲ್ಲ. ತನ್ನ ಚಿಕ್ಕ ಸಂಬಳದಿಂದ ಡರೋತಿಯೇ ಸಂಸಾರದ ವೆಚ್ಚ ಭರಿಸುತ್ತಿದ್ದಳು. ಹೀಗೆ ಎಷ್ಟೋ ವರ್ಷಗಳು ಕಳೆದವು. ಮೂರು ಮಕ್ಕಳು. ಥಾಮಸ್ ಆಗಿಂದಾಗ್ಗೆ ಊರುಬಿಟ್ಟು ಹೋಗುವುದಿರುತ್ತಿತ್ತು. ಆಕೆಯೊಬ್ಬಳೇ ಎಲ್ಲ ಕೆಲಸಗಳಿಗೂ ಗಮನ ನೀಡಬೇಕಾಗುತ್ತಿತ್ತು. ರಾಜಕೀಯದಲ್ಲಿ ಮುಳುಗಿದ್ದ ಥಾಮಸ್ ಸಹ ಅಸಾಧಾರಣ ಬುದ್ಧಿಶಾಲಿಯೇ. ಆಫ್ರಿಕ ದೇಶಗಳ ಬಗ್ಗೆ ಆತನದು ವಿಶಿಷ್ಟ ಪಾಂಡಿತ್ಯ. ಘಾನಾ ಮತ್ತು ಬೇರೆ ಕೆಲವು ಆಫ್ರಿಕದ ದೇಶಗಳು ಸ್ವತಂತ್ರಗೊಂಡಾಗ ಆಯಾ ದೇಶಗಳಲ್ಲಿದ್ದು ಸರಕಾರಗಳಿಗೆ ಸಲಹೆಗಾರನಾಗಿ ಕೆಲಸ ಮಾಡಿದ್ದ ಶ್ರೇಯಸ್ಸು ಆತನದು. ಡರೋತಿ ಸಹ ಈ ದೇಶಗಳಿಗೆ ತನ್ನದೇ ರೀತಿಯಲ್ಲಿ ಸಹಾಯಹಸ್ತ ನೀಡುತ್ತಿದ್ದಳು. ಆಕೆಯ ಸಹಸಂಶೋಧಕರಲ್ಲಿ ಎಷ್ಟೋ ಮಂದಿ ಏಷ್ಯ ಮತ್ತು ಆಫ್ರಿಕಾ ದೇಶಗಳವರು ಇರುತ್ತಿದ್ದರು. ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ನೇಮಕಗೊಂಡ ಅನೇಕರು ಮೊದಲಿಗೆ ಡರೋತಿಯೊಡನೆ ಕೆಲಸ ಮಾಡಿದ್ದವರೇ. ಅವರೆಲ್ಲರಿಗೂ ಆಕೆಯ ಸಂದೇಶ ಒಂದೇ ಆಗಿರುತ್ತಿತ್ತು : ''ನಿಮ್ಮ ದೇಶಗಳಿಗೆ ಹಿಂದಿರುಗುವ ಜವಾಬ್ದಾರಿ ನಿಮ್ಮ ಮೇಲಿದೆ. ನಿಮ್ಮ ದೇಶಗಳಲ್ಲೂ ವಿಜ್ಞಾನವನ್ನು ಬೆಳೆಸಬೇಕಾದ ಕರ್ತವ್ಯ ನಿಮ್ಮದು.''

ನೊಬೆಲ್ ಪಾರಿತೋಷಕದಿಂದ ಹಾಜ್‌ಕಿನ್ ಕುಟುಂಬದಲ್ಲಿ ದುಂದುವೆಚ್ಚದ ಪ್ರವೃತ್ತಿ ಬೆಳೆಯಲಿಲ್ಲ. ಆದರೆ ಆಕೆ ಮೊದಲಿಗಿಂತ ಹೆಚ್ಚು ಕಾರ್ಯಮಗ್ನಳಾಗಬೇಕಾಯಿತು. ತಾನು ನಂಬಿದ್ದ ಎಲ್ಲ ಮೌಲ್ಯಗಳಿಗಾಗಿ ಅವಿಶ್ರಾಂತವಾಗಿ ದುಡಿಯುವುದರಲ್ಲೇ ಆಕೆಯ ಕಾಲ ಕಳೆಯಿತು. ಆಶ್ಚರ್ಯವೆಂದರೆ, ಆ ಪೈಕಿ ಮಹಿಳಾ ಪ್ರಶ್ನೆಗೆ ಆಕೆ ಅಷ್ಟೊಂದು ಸಮಯ ನೀಡದಿದ್ದುದು.



*ಡರೋತಿ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಮಿತ್ರರೊಂದಿಗೆ*

ಸ್ತ್ರೀವಾದಿಗಳೆಂದು ಕರೆದುಕೊಳ್ಳುತ್ತಿದ್ದ ಕೆಲವರೊಡನೆ ಆಕೆಗೆ ಅಭಿಪ್ರಾಯಭೇದವಿತ್ತು. ಅತಿಹೆಚ್ಚಿನ ಶ್ರಮ ಮತ್ತು ವೇಳೆಯನ್ನು ಆಕೆ ನೀಡಿದ್ದು ಶಾಂತಿ ಚಳುವಳಿಗೆ ಮತ್ತು ವೈಜ್ಞಾನಿಕ ಸಹಕಾರಗಳಿಗೆ. ಎರಡೂ ಆಕೆಗೆ ಪ್ರಿಯವಾದ ವಿಷಯಗಳು. ಪಗ್‌ವಾಶ್ ಶಾಂತಿ ಸಮ್ಮೇಳನಕ್ಕೆ ಅಧ್ಯಕ್ಷಳಾಗಿ ಚುನಾಯಿತಳಾಗಿದ್ದಾಗ ೧೯೭೬ರಲ್ಲಿ ಆಕೆ ಭಾರತಕ್ಕೆ ಭೇಟಿ ನೀಡಿ ಪಗ್‌ವಾಶ್ ಸಮ್ಮೇಳನದ ೨೬ನೆಯ ಅಧಿವೇಶನವನ್ನು ಉದ್ಘಾಟಿಸಿದ್ದಳು. ತನ್ನ ೨೮ನೆಯ ವಯಸ್ಸಿನಲ್ಲೇ ಸಂಧಿವಾತಕ್ಕೆ (ಮೂಳೆಗಳ ನೋವು) ತುತ್ತಾಗಿದ್ದ ಡರೋತಿ ಸ್ವಲ್ಪಮಟ್ಟಿಗೆ ಓಡಾಟದಲ್ಲಿ ಅಷ್ಟಕ್ಕಷ್ಟೇ. ವಯಸ್ಸಾದಂತೆ ಇದು ಉಲ್ಬಣಿಸಿತ್ತಾದರೂ ಶಾಂತಿ ಚಳುವಳಿಗಾಗಿ ವಿಶ್ವದ ಹಲವು ಕಡೆಗಳಿಗೆ ತಪ್ಪದೆ ಆಕೆ ಹೋಗಿಬರುತ್ತಿದ್ದಳು. ಆಫ್ರಿಕ ಅಂತೂ ಸರಿಯೇ; ಗಂಡ ಥಾಮಸ್ ಜೊತೆ ಯಾವಾಗಲೂ ಅಲ್ಲಿಗೆ ಭೇಟಿ ಇದ್ದದ್ದೇ. ಅಲ್ಲದೆ, ಸೋವಿಯೆತ್ ಒಕ್ಕೂಟ, ಚೀನಾ, ಭಾರತ, ವಿಯೆಟ್ನಾಂ, ಜಪಾನ್, ಮುಂತಾದ ದೇಶಗಳಿಗೂ ಎಷ್ಟೋ ಬಾರಿ ಭೇಟಿಯಿತ್ತಿದ್ದಾಳೆ. ಭಾರತಕ್ಕೆ ಬಂದಿದ್ದಾಗ ಒಮ್ಮೆ ಇ.ಎಂ.ಎಸ್. ನಂಬೂದಿರಿಪಾಡರನ್ನು ಸಂಧಿಸಬೇಕೆಂದೇ ಕೇರಳಕ್ಕೆ ಹೋಗಿಬಂದಿದ್ದರು ಈಕೆ, ತನ್ನ ಅನಾರೋಗ್ಯವನ್ನು ಲೆಕ್ಕಿಸದೆಯೇ.

ಡರೋತಿ ದೊಡ್ಡ ಭಾಷಣಕಾರ್ತಿಯಾಗಿರಲಿಲ್ಲ. ಪ್ರತಿಭಟನೆಯ ಮಾತುಗಳು ಸಹಜವಾಗಿ ಆಕೆಗೆ ಬರುತ್ತಿರಲಿಲ್ಲ. ಆದರೆ ಪ್ರತಿಭಟನೆಯ ಕ್ರಿಯೆಯಲ್ಲಿ ಆಕೆ ಸಿದ್ಧಹಸ್ತರು. ಅಮೆರಿಕಾದ ಮಿಲಿಟರಿ ಪ್ರಾಬಲ್ಯವನ್ನು ಧಿಕ್ಕರಿಸಲು ಶಾಂತಿ ಚಳುವಳಿಯಲ್ಲಿ ಪಾಲ್ಗೊಂಡ ಈಕೆ ವಿಯೆಟ್ನಾಂಗೆ ವೈದ್ಯಕೀಯ ನೆರವು ನೀಡುವ ಸಂಸ್ಥೆಯ ಕಾರ್ಯಕರ್ತೆಯಾಗಿ ದುಡಿದಳು. ವೈಯಕ್ತಿಕ ನೆಲೆಯಲ್ಲೂ ಪಾಲ್ಗೊಳ್ಳುತ್ತಿದ್ದುದುಂಟು: ೧೯೬೮ರಲ್ಲಿ ಅಮೆರಿಕಾವು ವಿಯೆಟ್ನಾಂ ಮೇಲೆ ಬಾಂಬುಗಳ ಮಳೆ ಸುರಿಸಿತ್ತು. ಅದಕ್ಕೆ ''ಟೆಟ್ ಧಾಳಿ'' ಎಂಬ ಹೆಸರಿತ್ತು. ಆ ಸಂದರ್ಭದಲ್ಲಿ ಸೌಹಾರ್ದದ ಕುರುಹಾಗಿ ಮಗಳು ಎಲಿಜಬೆತ್‌ಳನ್ನು ಆಕೆ ವಿಯೆಟ್ನಾಂಗೆ ಕಳಿಸಿದ್ದಳು. ಬಾಂಬುಗಳ ಹಾವಳಿ ವಿಪರೀತವಾಗಿದ್ದ ೧೯೭೩ರಲ್ಲಿ ತಾನು ಸಹ ವಿಯೆಟ್ನಾಂಗೆ ತೆರಳಿ ಮಹಿಳಾ ಯೋಧರೊಡನೆ ಭುಜಕ್ಕೆ ಭುಜ ಕೊಟ್ಟು ನಿಂತ ಕೀರ್ತಿ ವೀರ ಡರೋತಿಯದು. ಇವು ಸಾಲದೆಂದು ತೋರಿದಾಗ ಪ್ರಕರ್ಷ ಮಾತುಗಳನ್ನು ಬಳಸಿದ್ದು ಉಂಟು : ೧೯೭೧ರಲ್ಲಿ ವಿಯೆಟ್ನಾಂ ಮೇಲೆ ಬಾಂಬುಗಳ ಧಾಳಿ ಹೆಚ್ಚಿಸಿದಾಗ ಹೆನ್ರಿ ಕಿಸಿಂಜರ್‌ನನ್ನು ತರಾಟೆಗೆ ತೆಗೆದುಕೊಂಡಿದ್ದುದು ಚರಿತ್ರಾರ್ಹವಾಗಿದೆ. ಅಂತೆಯೇ ಸೋವಿಯೆತ್ ವಿರೋಧಿ ಚಟುವಟಿಕೆಗಳಿಗಾಗಿ ಮಾರ್ಗರೆಟ್ ಥ್ಯಾಚರ್‌ಗೂ ಛೀಮಾರಿ ಹಾಕಿದ್ದವಳು ಡರೋತಿ. ಈ ಮಾರ್ಗರೆಟ್ ಹಿಂದೆ ಡರೋತಿಯ ವಿದ್ಯಾರ್ಥಿನಿಯಾಗಿದ್ದವಳು ಬೇರೆ!

ಸೋವಿಯೆತ್ ಒಕ್ಕೂಟದ ಛಿದ್ರೀಕರಣವು ಡರೋತಿಗೆ ಬಹಳ ನೋವನ್ನು ತಂದಿತ್ತು. ಅದಾದ ಮೂರು ವರ್ಷದ ನಂತರ ೧೯೯೪ರ ಜುಲೈ ೨೬ರಂದು ಆಕೆ ಕೊನೆಯುಸಿರೆಳೆದಳು. ಮಾರ್ಕ್ ಪೆರುಟ್ಸ್ ಆಕೆಯ ನೆಚ್ಚಿನ ಸ್ನೇಹಿತ; ನೊಬೆಲ್ ಪಾರಿತೋಷಕ ಪಡೆದ ಸ್ಫಟಿಕ ವಿಜ್ಞಾನಿಯೇ ಆತನೂ ಸಹ. ಡರೋತಿ ಬಗ್ಗೆ ಅವನ ಮಾತುಗಳಿವು: ''ಮಹಾನ್ ರಸಾಯನಶಾಸ್ತ್ರಜ್ಞೆ. ಅತ್ಯಂತ ಸಾಧು ಜೀವಿ. ಸಹನೆಯ ಉಜ್ವಲ ಪ್ರತೀಕ. ಜನಸಮುದಾಯವನ್ನು ಹೃದಯತುಂಬಿ ಪ್ರೀತಿಸಿದವಳು. ಶಾಂತಿಯ ನಿಚ್ಚಳ ಭಕ್ತೆ ಮತ್ತು ಹೋರಾಟಗಾರ್ತಿ.'' ಡರೋತಿ ಗತಿಸಿದ ಎರಡು ವಾರಗಳಲ್ಲೇ ಲೈನಸ್ ಪಾಲಿಂಗ್ ಸಹ ಗತಿಸಿದರು. ಅವರಿಗೆ ರಸಾಯನಶಾಸ್ತ್ರ ಹಾಗೂ ಶಾಂತಿಗಾಗಿ ಎರಡು ನೊಬೆಲ್ ಪುರಸ್ಕಾರಗಳು ದೊರೆತಿದ್ದುವು. ಡರೋತಿ ಮತ್ತು ಪಾಲಿಂಗರನ್ನು ಗೌರವಿಸಲೆಂದೋ ಏನೋ ೧೯೯೫ರ ನೊಬೆಲ್ ಶಾಂತಿ ಪುರಸ್ಕಾರವನ್ನು ಪಗ್‌ವಾಶ್ ಸಮ್ಮೇಳನಕ್ಕೆ ನೀಡಲಾಯಿತು. ಅದನ್ನು ಎಲ್ಲ ಶಾಂತಿಪ್ರಿಯರೂ ತಮಗೆ ಸಂದ ಪುರಸ್ಕಾರವೆಂದೇ ಭಾವಿಸಿದರು. ತಾನು ವೈಯಕ್ತಿಕವಾಗಿ ಗಳಿಸಿಕೊಂಡಿದ್ದ ಎಲ್ಲ ಪುರಸ್ಕಾರಗಳಿಗಿಂತಲೂ ಹೆಚ್ಚಿನ ಮನ್ನಣೆಯನ್ನು ಸ್ವತಃ ಡರೋತಿ ಸಹ ಈ ಶಾಂತಿ ಪುರಸ್ಕಾರಕ್ಕೆ ನೀಡುತ್ತಿದ್ದಳೆಂಬುದು ನಿರ್ವಿವಾದ.

('ಹೊಸತು'ವಿಗಾಗಿಯೇ ಬರೆಯಲಾದ ಈ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಜಿ. ರಾಮಕೃಷ್ಣ.)

**ಡಾ|| ಸವ್ಯಸಾಚಿ ಚಟರ್ಜಿ**
ಭಾರತೀಯ ಖ-ಭೌತಶಾಸ್ತ್ರ ಸಂಸ್ಥೆ, ಬೆಂಗಳೂರು- ೫೬೦ ೦೩೪.

# ಕಪ್ಪು ಜನಾಂಗದ ಕತ್ತಲು ಭವಿಷ್ಯ

ಎಂ. ವೆಂಕಟಸ್ವಾಮಿ

**ಪಾಲ್** ಎ. ಬಾರ್ಟನ್ ಎಂಬ ಒಬ್ಬ ಕಪ್ಪು ಲೇಖಕ ಕೆಲವು ಮಹತ್ವವಾದ ವಿಷಯಗಳನ್ನು ತನ್ನ ಪುಸ್ತಕಗಳ ಮೂಲಕ ಜಗತ್ತಿಗೆ ತಿಳಿಸಿದ್ದಾನೆ. ಬಾರ್ಟನ್ ತಿಳಿಸಿರುವ ವಿಷಯಗಳ ಕೆಲವು ಅಂಶಗಳು ಹೀಗಿವೆ:

ಪ್ರಪಂಚದಾದ್ಯಂತ ಇರುವ ಮೂಲನಿವಾಸಿಗಳಾದ ಕಪ್ಪು ಜನರನ್ನು, ದಲಿತರನ್ನು ಮತ್ತು ಬುಡಕಟ್ಟು ಜನರನ್ನು ಒಟ್ಟುಗೂಡಿಸಿದಾಗ ಸುಮಾರು ೧೦೦ ಕೋಟಿ ಜನಸಂಖ್ಯೆ ಇರುವುದಾಗಿ ತಿಳಿದುಬರುತ್ತದೆ. ಇವರಲ್ಲಿ ಆಫ್ರಿಕಾದಲ್ಲಿ ೧೦ ದಶಲಕ್ಷ ಕಪ್ಪು ಜನರು, ಅಮೆರಿಕಾ ಖಂಡಗಳಲ್ಲಿ ೩೦ ಕೋಟಿ ಕಪ್ಪು ಜನರು, ಏಷಿಯಾ ಮತ್ತು ಆಸ್ಟ್ರೇಲಿಯಾದಲ್ಲಿ ೬೦ ಕೋಟಿ ಕಪ್ಪು ಜನರು ಇರುವುದಾಗಿ ತಿಳಿದು ಬರುತ್ತದೆ.

ಆಫ್ರಿಕಾ, ಅಮೆರಿಕಾ, ದಕ್ಷಿಣ ಪೆಸಿಫಿಕ್, ಭಾರತ ಮತ್ತು ಆಸ್ಟ್ರೇಲಿಯಾದ ಮೂಲನಿವಾಸಿಗಳಾದ ಕಪ್ಪು ಜನರನ್ನು, ದಲಿತರನ್ನು ಸರ್ವನಾಶ ಮಾಡಲು ಅಂತರರಾಷ್ಟ್ರೀಯ ಮಟ್ಟದಲ್ಲಿ ಅತಿದೊಡ್ಡ ಪಿತೂರಿ ನಡೆಯುತ್ತಿದೆ. ಜಗತ್ತಿನಾದ್ಯಂತ ಇರುವ ಮೂಲನಿವಾಸಿಗಳಾದ ಬುಡಕಟ್ಟು ಜನರನ್ನು, ಕಪ್ಪು ಜನರನ್ನು ಮತ್ತು ದಲಿತರನ್ನು ಹಿಂಸಿಸಿ ಕೊಲ್ಲುತ್ತಿದ್ದಾರೆ. ಸೂಡಾನ್, ಮಲೇಸಿಯಾ, ಭಾರತ, ಶ್ರೀಲಂಕಾ, ಆಫ್ರಿಕಾ ಮತ್ತು ಅಮೆರಿಕಾ ದೇಶಗಳಲ್ಲಿ ಬಿಳಿಯರು ಮತ್ತು ಬಿಳಿಯರ ಏಜೆಂಟರುಗಳು ಈ ಕೆಲಸದಲ್ಲಿ ಮುಂದಾಳತ್ವ ವಹಿಸಿದ್ದಾರೆ.

ಪ್ರಪಂಚದಾದ್ಯಂತ ಇರುವ ಈ ೧೦೦ ಕೋಟಿ ಜನಸಂಖ್ಯೆ ಭೀಕರ ಬಡತನದಿಂದ, ರೋಗ ರುಜಿನಗಳಿಂದ ಪೀಡಿತರಾಗಿ ಅವರ ಜನಾಂಗವೇ ನಶಿಸಿ ಹೋಗುತ್ತಿದೆ. ಅವರು ತಿನ್ನುವ ಆಹಾರದಲ್ಲಿ ಕಲಬೆರಕೆಯನ್ನು ಬಹಳ ವ್ಯವಸ್ಥಿತವಾಗಿ ಮಾಡಲಾಗುತ್ತಿದೆ. ಅವರ ಮಧ್ಯೆ ಏಡ್ಸ್ ಮುಂತಾದ ಮಾರಕ ರೋಗಗಳನ್ನು ಸೃಷ್ಟಿಸಲಾಗಿದೆ. ಮೂಢನಂಬಿಕೆಗಳನ್ನು, ದೇವರು, ದೆವ್ವಗಳನ್ನು ಮತ್ತು ಭೂತಗಳನ್ನು ಅವರ ಮೇಲೆ ಹೇರಲಾಗಿದೆ. ಅನೇಕ ಸಾಮಾಜಿಕ ಕಟ್ಟಳೆಗಳಿಂದ ಅವರನ್ನು ಬಿಗಿದಿಡಲಾಗಿದೆ.

ಲ್ಯಾಟಿನ್ ಅಮೆರಿಕಾದ ಕಪ್ಪು ಮಹಿಳೆಯರಿಗೆ ಮಕ್ಕಳನ್ನು ಹೆರಲಾಗದಂತೆ ಶಸ್ತ್ರಚಿಕಿತ್ಸೆ ನಡೆಸಲಾಗುತ್ತಿದೆ. ಕಪ್ಪು ಜನಾಂಗದವರನ್ನು, ಅವರ ಸಂತಾನವನ್ನು ಬೀದಿಗಳಲ್ಲೇ ಹೊಡೆದು ಸಾಯಿಸುತ್ತಿದ್ದಾರೆ. ಯುರೋಪಿನಲ್ಲಿ ಭಾರತೀಯ ಮತ್ತು ಆಫ್ರಿಕಾ ಮೂಲದ ಜನರ ಮೇಲೆ ಬಿಳಿಯರು ಪ್ರತಿನಿತ್ಯ ಆಕ್ರಮಣ ಮಾಡುತ್ತಿದ್ದಾರೆ. ಈ ಆಕ್ರಮಣಗಳನ್ನು ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ದೈಹಿಕವಾಗಿ ಪ್ರಯೋಗಿಸಲಾಗುತ್ತದೆ.

ಎಲ್ಲಾ ದೇಶಗಳ ಮೂಲನಿವಾಸಿಗಳ ನೆಲ ಜಲ ಸಂಪತ್ತನ್ನು ಅವರ ಶ್ರಮವನ್ನು ಆಯಾ ದೇಶಗಳ ಆಳುವ ವರ್ಗ ನೂರಾರು ವರ್ಷಗಳಿಂದ ಕೊಳ್ಳೆ ಹೊಡೆಯುತ್ತಿದೆ. ನಮ್ಮ ದೇಶದ ಬದನೆಕಾಯಿ, ಬೇವಿನ ಬೀಜ, ಬಸುಮತಿ ಭತ್ತದಂತಹ ಅನೇಕ ಬೆಳೆಗಳು ಅಮೆರಿಕಾದ ಪೇಟೆಂಟ್‌ಗಳಾಗಿ ಮಾರ್ಪಡುತ್ತಿವೆ. ಜಾಗತೀಕರಣವೆಂದು ನಾವು ಈಗ ಏನು ಕರೆಯುತ್ತೇವೋ ಅದು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಹೆಸರಿನಲ್ಲಿ ನಮ್ಮನ್ನು, ನಮ್ಮ ಸಂಪತ್ತನ್ನು ದೋಚುತ್ತಲೇ ಬಂದಿದೆ.

ಅಮೆರಿಕಾದಲ್ಲಿ ಹಿಂದೂ ಕಾಲೋನಿಗಳು ಬೆಳೆಯುತ್ತಿವೆ. ಹಿಂದೂ ದೇವರುಗಳ ಗುಡಿಗಳನ್ನು ಕಟ್ಟುತ್ತಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿ ಇಂಗ್ಲೆಂಡ್ ಇನ್ನಿತರ ಯುರೋಪಿನ ದೇಶಗಳಿಗೆ ಮಾತ್ರ ಹಿಂದೂಗಳು ವಲಸೆ ಹೋಗುತ್ತಿದ್ದರು. ಈಗ ಎಲ್ಲರೂ ಅಮೆರಿಕಾ ಸೇರುತ್ತಿದ್ದಾರೆ. ಈ ಬುದ್ಧಿವಂತ ಜನಾಂಗ ಎಲ್ಲಿ ಹೆಚ್ಚು ಲಾಭ, ಹೆಚ್ಚು ಸೌಕರ್ಯ ದೊರಕುತ್ತದೋ ಅಲ್ಲೆಲ್ಲ ತೇಲಾಡುತ್ತಾ ಇರುತ್ತದೆ.

ಮೂಲನಿವಾಸಿಗಳು ಎಂದಿನಂತೆ ಮೂಢನಂಬಿಕೆಗಳ ಮಡಿಲಲ್ಲಿ ವಿದ್ಯೆ ಇಲ್ಲದೆ ಅಲ್ಲೇ ಕೊಳೆಯುತ್ತಿರುತ್ತಾರೆ. ಭಾರತದಲ್ಲಿ ಇದೆಲ್ಲದರ ಜೊತೆಗೆ ಜಾತಿ, ಅಸ್ಪೃಶ್ಯತೆ, ಮೇಲು-ಕೀಳು ಎನ್ನುವ ವಿಷಯಗಳು ಭೀಕರವಾಗಿ ಬೆಳೆದು ನಿಂತಿವೆ. ಎಲ್ಲಾ ವಿಚಾರಗಳು ಭೂತಗಳಂತೆ ಅವರನ್ನು ಕಾಡುತ್ತಿವೆ. ಇದು ಪ್ರಪಂಚದ ಎಲ್ಲಾ ಮೂಲ ನಿವಾಸಿಗಳ ಸ್ಥಿತಿಯಾಗಿದೆ. ಇದು ಬಾರ್ಟನ್ ಹೇಳುವ ಪ್ರಪಂಚದ ಒಂದು ಚಿತ್ರಣವಾದರೆ ಭಾರತದ ಚಿತ್ರಣವನ್ನು ಸ್ವಲ್ಪ ಗಮನಿಸೋಣ.

ಡಾ|| ಬಿ. ಆರ್. ಅಂಬೇಡ್ಕರ್ ಅನೇಕ ವಿಷಯಗಳನ್ನು ನಮಗೆ ತಿಳಿಸಿದ್ದಾರೆ. ಅವರು ಹೇಳಿರುವ ಒಂದು ಮಾತು ಹೀಗಿದೆ : 'ಹಿಂದೂ ಧರ್ಮ ನಮ್ಮನ್ನು (ಅಸ್ಪೃಶ್ಯರನ್ನು) ಸರ್ವನಾಶ ಮಾಡಿದೆ. ಒಂದು ದಿನ ಈ ಧರ್ಮ ನಾಶವಾಗುತ್ತದೆ. ಕೊನೆಗೆ ಈ ದೇಶವು ನಾಶವಾಗುತ್ತದೆ'. ಅಂಬೇಡ್ಕರ್ ಹೇಳಿರುವ ಈ ಮಾತುಗಳು ಕಟುವಾದರೂ ಅದಕ್ಕೆ ಐತಿಹಾಸಿಕ ಹಿನ್ನೆಲೆಯಿದೆ. ಅಂಬೇಡ್ಕರ್ ಯಾವುದೇ ಮಾತನ್ನು ಹೇಳಿದ್ದರೂ ಅದನ್ನು ನೂರಾರು ಸಲ ಯೋಚಿಸಿ, ಚಿಂತನೆ ಮಾಡಿ ಹೇಳಿದ್ದಾರೆ. ಹಾಗಾಗಿ ಅವರ ಮಾತುಗಳು ಹಲವು ಕಾಲ ಪ್ರಸ್ತುತವಾಗಿಯೇ ಉಳಿಯುತ್ತವೆ.

> *ಹಿಂದೆಂದಿಗಿಂತ ಇಂದು ದಲಿತರು, ಅಲ್ಪ ಸಂಖ್ಯಾತರು, ಹಿಂದುಳಿದವರು, ಬುಡಕಟ್ಟು ಜನರು ಮತ್ತು ಬುದ್ಧಿವಂತ ಜನರು ಒಟ್ಟುಗೂಡಿ ತಮ್ಮ ಹಕ್ಕುಗಳಿಗಾಗಿ ಹೋರಾಟವನ್ನು ನಡೆಸಬೇಕಾಗಿದೆ. ಇಲ್ಲವೆಂದರೆ ಪಾಲ್ ಎ. ಬಾರ್ಟನ್ ಹೇಳಿದ ಹಾಗೆ ಈ ಪ್ರಪಂಚದ ಮೂಲನಿವಾಸಿಗಳಾದ ಕಪ್ಪು ಜನರ ಸಮೂಹ, ಬುಡಕಟ್ಟು ಜನರ ಸಮೂಹ, ಮತ್ತು ದಲಿತ ಸಮೂಹ ಈ ಪ್ರಪಂಚದಿಂದ ನಿಧಾನವಾಗಿ ನಾಶವಾಗುತ್ತದೆ.*

ನಾನೇಕೆ ಈ ಮಾತನ್ನು ವಿಶೇಷವಾಗಿ ಪ್ರಸ್ತಾಪಿಸುತ್ತಿದ್ದೇನೆ ಎಂದರೆ ಅರವತ್ತು ಎಪ್ಪತ್ತು ವರ್ಷಗಳ ಹಿಂದೆ ಅಂಬೇಡ್ಕರ್ ಈ ಮಾತುಗಳನ್ನು ಹೇಳಿದ ಸಮಯದಲ್ಲಿ ದಲಿತರು ಯಾವ ಸ್ಥಿತಿಯಲ್ಲಿ ಇದ್ದರೋ ಇವೊತ್ತು ಕೂಡ ಅದೇ ಸ್ಥಿತಿಯಲ್ಲಿದ್ದಾರೆ. ಇದು ಹೀಗೆ ಮುಂದುವರಿಯುತ್ತದೆ ಕೂಡ. ನಗರ, ಪಟ್ಟಣಗಳಲ್ಲಿನ ಪರಿಸ್ಥಿತಿಯನ್ನು ಸ್ವಲ್ಪಮಟ್ಟಿಗೆ ಬಿಟ್ಟರೆ ದೇಶದ ಐದುಲಕ್ಷ ಹಳ್ಳಿಗಳಲ್ಲಿ ದಲಿತರು ಇವೊತ್ತು ಕೂಡ ಸಾವಿರಾರು ವರ್ಷಗಳ ಹಿಂದಿನ ಪಳೆಯುಳಿಕೆಗಳಂತೆ ಜೀವಿಸುತ್ತಿದ್ದಾರೆ. ಅವರು ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈವಿಕವಾಗಿಯೂ ಕೂಡ ಹಿಂದೂಗಳಿಂದ ಪ್ರತ್ಯೇಕವಾಗಿ ದೂರವೇ ಉಳಿದುಕೊಂಡಿದ್ದಾರೆ. ದಲಿತರಿಗೆ ಈಗಲೂ ಕೂಡ ಹಿಂದೂ ಗುಡಿಗಳಲ್ಲಿ ಮತ್ತು ಹೋಟಲುಗಳಲ್ಲಿ ಪ್ರವೇಶವಿಲ್ಲ, ಹಿಂದೂಗಳ ಬಾವಿಗಳಲ್ಲಿ ನೀರು ತೆಗೆದುಕೊಳ್ಳುವ ಹಕ್ಕುಗಳೂ ಇಲ್ಲವಾಗಿದೆ.

ತಮಿಳುನಾಡಿನಲ್ಲಿ ಪ್ರಸ್ತುತ ಈ ದಿನವೂ ಕೂಡ ಸಾವಿರಕ್ಕಿಂತ ಹೆಚ್ಚು ಶಾಲೆಗಳನ್ನು ಅಸ್ಪೃಶ್ಯರಿಗಾಗಿಯೇ ನಡೆಸುತ್ತಿದ್ದಾರೆ. ನಮ್ಮ ಸರಕಾರ, ನಮ್ಮ ಆಧುನಿಕತೆ ಮತ್ತು ನಾಗರಿಕತೆ ಇದಕ್ಕೆ ನಾಚಿಕೆಪಡಬೇಕಿದೆ. ಸಂವಿಧಾನದಲ್ಲಿ ದಲಿತರಿಗೆ ಹಲವು ಹಕ್ಕುಗಳನ್ನು ನೀಡಲಾಗಿದೆ. ಆದರೆ ಅವು ಯಾವುವೂ ಇಂದಿಗೂ ಅವರ ಹಕ್ಕು ಬಾಧ್ಯತೆಗಳಾಗಿ ಬೆಳೆಯಲಿಲ್ಲ. ಪ್ರಾಥಮಿಕ ಶಿಕ್ಷಣವು ಸಹ ದೊರಕದೆ ಇರುವುದೇ ಇದಕ್ಕೆ ಮುಖ್ಯ ಕಾರಣ.

'ವಿದ್ಯೆ ಇಲ್ಲದವನು ಪಶುವಿಗೆ ಸಮಾನ' ಎಂದಿದ್ದಾರೆ ಯಾರೋ ಮಾಹಾನುಭಾವರು. ವಿದ್ಯೆ ಪಡೆದ ನಾವು, ದಲಿತ ವಿದ್ಯಾವಂತರು, ನಮ್ಮ ದಲಿತ ಬಾಂಧವರಿಗೆ ಹಕ್ಕುಗಳನ್ನು ತಿಳಿಹೇಳಲು ಅಸಫಲರಾಗಿದ್ದೇವೆ. ಒಬ್ಬನೇ ಒಬ್ಬ ಅಂಬೇಡ್ಕರ್ ಮಾಡಿದ ಹೋರಾಟ ಸಾಧನೆಯನ್ನು ನಾವು ಸಾವಿರಾರು ದಲಿತ ವಿದ್ಯಾವಂತರು ಉಳಿಸಿಕೊಳ್ಳಲಾಗದೆ ಸೋಲುತ್ತಿದ್ದೇವೆ.

ನಾಲ್ಕು ಅಕ್ಷರ ಕಲಿತ ದಲಿತರು ತಮ್ಮ ಮೇಲೆ ನಡೆಯುವ ಅನ್ಯಾಯ, ಆಕ್ರಮಗಳನ್ನು ಪ್ರಶ್ನಿಸಿದಾಗ ಬಿಲ್ಲಾಂಡ ಹಳ್ಳಿ, ಕಂಬಾಲಪಲ್ಲಿಯಂತಹ ಘಟನೆಗಳು ದೇಶದಾದ್ಯಂತ ಸಂಭವಿಸುತ್ತಿವೆ. ಒಂದು ಕಾಲದಲ್ಲಿ ಪುರೋಹಿತ ವರ್ಗ ಮಾತ್ರ ನಮ್ಮನ್ನು ಶೋಷಣೆ ಮಾಡುತ್ತಿತ್ತು. ಆದರೆ ಈ ದಿನ ಅವರಿಗಿಂತ ಹೆಚ್ಚು

ಶಕ್ತಿಶಾಲಿಗಳಾದ ಶೂದ್ರರು ದಲಿತರನ್ನು ಸಿಕ್ಕ ಕಡೆ ಸುಟ್ಟು ಸಾಯಿಸುತ್ತಿದ್ದಾರೆ. ಇದು ಹಿಂದೆಂದಿಗಿಂತ ಇಂದು ಬಹಳ ಆಘಾತ ತರುವಂತಹ ನೋವಿನ ಸಂಗತಿಯಾಗಿದೆ. ಇಂತಹ ಘರ್ಷಣೆಗಳನ್ನು ಹೇಗಾದರೂ ಮಾಡಿ ತಪ್ಪಿಸಲೇಬೇಕಿದೆ. ಇದಕ್ಕೆ ಎಲ್ಲರೂ ಒಟ್ಟುಗೂಡಿ, ಒಗ್ಗಟ್ಟಾಗಿ ಶ್ರಮಿಸಬೇಕಿದೆ.

ಇನ್ನು ನಮ್ಮ ದೇಶದ ಹಿಂದೂಗಳು ದಲಿತರನ್ನು ವ್ಯವಸ್ಥಿತವಾಗಿ ಹೇಗೆ ಶೋಷಣೆ ಮಾಡುತ್ತಿದ್ದಾರೆ ಎನ್ನುವ ಕೆಲವು ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಪುರಾಣ ಕಾಲದಿಂದ ಪ್ರಾರಂಭವಾಗುವ ಈ ಶೋಷಣೆಯನ್ನು ಇಲ್ಲಿ ವಿಶೇಷವಾಗಿ ವಿವರಿಸುವ ಅಗತ್ಯವಿಲ್ಲ. ಅವು ಎಲ್ಲರಿಗೂ ತಿಳಿದಿರುವ ವಿಷಯಗಳೇ ಆಗಿವೆ. ಭಾರತದ ಮೂಲ ನಿವಾಸಿಗಳ ಮೇಲೆ ವರ್ಣಾಶ್ರಮ, ಜಾತಿ ಪದ್ಧತಿ, ಮೂಢನಂಬಿಕೆಗಳು, ೨೧೨ ಕೋಟಿ ದೇವರುಗಳು ಮತ್ತು ಭೂತಗಳ ಕಾಟ ಬಹಳ ಕಾಲದಿಂದಲೂ ಇದೆ. ಆದರೆ ಇತ್ತೀಚೆಗೆ ಈ ಆಧುನಿಕ ಯುಗದಲ್ಲಿ ಇವುಗಳ ಕಾಟ ತೀರ ಹೆಚ್ಚಾಗುತ್ತಿದೆ. ಮೂಢನಂಬಿಕೆಗಳನ್ನು ಹಳ್ಳಿ ಜನ ಮತ್ತು ಅವಿದ್ಯಾವಂತರು ಆಚರಣೆ ಮಾಡಿದರೆ ಪರವಾಗಿಲ್ಲ ಎಂಬ ಮಾತೊಂದಿತ್ತು. ಈಗ ವಿದ್ಯಾವಂತರೂ ಕೂಡ, ಅದರಲ್ಲೂ ದಲಿತ ವಿದ್ಯಾವಂತರು, ಅವೇ ದುಷ್ಟ ಆಚರಣೆಗಳನ್ನು ವಿಶೇಷವಾಗಿ ಮೈಗೂಡಿಸಿಕೊಳ್ಳುತ್ತಿರುವುದು ವಿಷಾದನೀಯ.

ಮೊದಲ ಕಾಲದಲ್ಲಿ ದೇವರ ಗುಡಿಗಳು ಬೆಟ್ಟದ ಮೇಲೆ ಅಥವಾ ಯಾವುದೋ ಒಂದು ಪ್ರಶಾಂತ ಸ್ಥಳದಲ್ಲಿ ಮಾತ್ರ ಇರುತ್ತಿದ್ದವು. ಈಗ ದೇವರುಗಳು ಬೀದಿ, ರಸ್ತೆ, ಪಾರ್ಕ್‌ಗಳಲ್ಲೆಲ್ಲಾ ವಿಜೃಂಭಿಸುತ್ತಿದ್ದಾರೆ. ಪೊಲೀಸ್ ಠಾಣೆಗಳು, ಕಛೇರಿಗಳು, ಮನೆ ಮನೆಗಳೇ ಗುಡಿಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಜಾತಿಗೊಂದು ಮಠ, ಮಠಕ್ಕೊಬ್ಬ ಗುರು ಸೃಷ್ಟಿಯಾಗುತ್ತಿದ್ದಾರೆ.

ಇತ್ತೀಚೆಗೆ ಕೇಂದ್ರ ಸರಕಾರದ ಹೊಣೆ ಹೊತ್ತಿರುವ ಬಿಜೆಪಿ ಸರಕಾರ ಈ ದೇಶದ ಮೂಲನಿವಾಸಿಗಳಾದ ದಲಿತರು, ಅಲ್ಪಸಂಖ್ಯಾತರು ಮತ್ತು ಬುಡಕಟ್ಟು ಜನರ ಮೇಲೆ ತಮ್ಮ ಪ್ರಹಾರವನ್ನು ಪ್ರಾರಂಭಿಸಿಬಿಟ್ಟಿದೆ. ಹಾಗೆ ನೋಡಿದರೆ ಹಿಂದಿನ ಎಲ್ಲಾ ಸರಕಾರಗಳು ದಲಿತರ ವಿರುದ್ಧವೇ ನಡೆದುಕೊಂಡಿವೆ. ಇಂದಿನ ಸರಕಾರ ತನ್ನ ಒಡಲಲ್ಲಿ ಬಚ್ಚಿಟ್ಟುಕೊಂಡಿದ್ದ ಒಂದೊಂದೇ ಅಜೆಂಡಾಗಳನ್ನು ಈಗ ಹೊರಗೆಡಹುತ್ತಿರುವುದನ್ನು ನಾವು ನೋಡುತ್ತಿದ್ದೇವೆ.

ಗುಜರಾತ್ ಸರಕಾರ ಶಾಲೆಗಳ ಪಠ್ಯ ಪುಸ್ತಕಗಳಲ್ಲಿ ಮನುಧರ್ಮಶಾಸ್ತ್ರದ ವರ್ಣಾಶ್ರಮವನ್ನು, ಜಾತಿ ಪದ್ಧತಿಗಳನ್ನು ಮತ್ತು ಅಸ್ಪೃಶ್ಯತೆಯಂತಹ ಹೀನ ಪದ್ಧತಿಗಳನ್ನು ಮಕ್ಕಳಿಗೆ ಬೋಧಿಸುತ್ತಿದೆ. ಅದು ಈ ಸಮಾಜಕ್ಕೆ ಅವಶ್ಯಕತೆ ಎನ್ನುವ ವಿಧಾನದಲ್ಲಿ ಬೋಧಿಸುತ್ತಿರುವುದು ಹೆಚ್ಚು ಆಘಾತಕರವಾಗಿದೆ. ಸಂವಿಧಾನದಲ್ಲಿ ಜಾತಿ ಮತ್ತು ಅಸ್ಪೃಶ್ಯತೆಯನ್ನು ಆಚರಿಸಿದವರಿಗೆ ಶಿಕ್ಷೆ ಇದೆ. ಆದರೆ ಒಂದು ಸರಕಾರವೇ ಇಂತಹ ಕೃತ್ಯಗಳಲ್ಲಿ ತೊಡಗಿಕೊಂಡರೆ ಆ ಕಾನೂನನ್ನು ಅನುಷ್ಠಾನಗೊಳಿಸುವವರು ಯಾರು? ಗುಜರಾತ್ ಸರಕಾರ ತನ್ನ ನೌಕರರು ಆರ್.ಎಸ್.ಎಸ್. ಸೇರಬಹುದು ಎನ್ನುವ ಆಜ್ಞೆ ಹೊರಡಿಸಿ ಹಿಂದಕ್ಕೆ ಪಡೆದಿರುವ ವಿಷಯ ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ.

ಆರ್. ಎಸ್. ಎಸ್. ಇನ್ನೊಂದು ಒತ್ತಾಯವನ್ನು ಇತ್ತೀಚೆಗೆ ಕೇಂದ್ರ ಸರಕಾರದ ಮುಂದಿಟ್ಟಿದೆ. ಸರಕಾರದ ಎಲ್ಲಾ ಹುದ್ದೆಗಳಲ್ಲೂ ಆರ್. ಎಸ್. ಎಸ್. ನವರಿಗೆ ೫% ಮೀಸಲಾತಿ ನೀಡಬೇಕು ಎನ್ನುವುದೇ ಅದರ ಒತ್ತಾಯ. ಯಾಕೆಂದರೆ ಅವರೇ ಹೇಳುವಂತೆ ಆರ್. ಎಸ್. ಎಸ್. ನವರು ದೇಶ ಪ್ರೇಮಿಗಳು ಎನ್ನುವುದು. ಎಲ್ಲಿ ಒಳ್ಳೆ ಸಂಬಳ ದೊರಕುತ್ತದೋ ಅಲ್ಲಿಗೆ ದೇಶ ಬಿಟ್ಟು ಪಲಾಯನ ಮಾಡುತ್ತಿರುವವರೂ ಅವರೆ; ಆದರೂ ಅವರೇ ದೇಶ ಭಕ್ತರು. ಈ ದೇಶದಲ್ಲಿರುವ ಬೇರೆ ಯಾರೂ ದೇಶಭಕ್ತರಲ್ಲ ಎನ್ನುವುದು ಅವರ ವಾದ. ಈ ದೇಶದ ಮೂಲ ಜನರಾದ ದಲಿತರು, ಬುಡಕಟ್ಟು ಜನರು, ಇಲ್ಲೇ ಹುಟ್ಟಿ ಇಲ್ಲೇ ಸಾಯುವವರು, ದೇಶ ಭಕ್ತರಲ್ಲವೆ? ದೇಶದ ಕೊಳಚೆಯನ್ನೆಲ್ಲ ತೊಳೆದು ಮಣ್ಣನಲ್ಲಿ ಮಣ್ಣಾಗುವವರು ದೇಶಭಕ್ತರಲ್ಲವೆ? ಇದಕ್ಕೆಲ್ಲ ಉತ್ತರಗಳನ್ನು ನಾವೇ ಇಂದು ಕಂಡುಕೊಳ್ಳಬೇಕಿದೆ.

ಇನ್ನೂ ಬಹಳ ಆಧುನಿಕವಾದ ಒಂದು ಅಜೆಂಡಾವನ್ನು ಕೇಂದ್ರ ಸರಕಾರವೇ ಪ್ರಚುರಪಡಿಸಲು ಯೋಚಿಸುತ್ತಿದೆ. ಕೇಂದ್ರ ಸರಕಾರದಲ್ಲಿರುವ ಶಾಸಕರು ಕೆಲವರು ಈ ಅಜೆಂಡಾವನ್ನು ಇತ್ತೀಚೆಗೆ ಸಾರ್ವಜನಿಕವಾಗಿ ಬಹಿರಂಗ ಪಡಿಸಿದ್ದಾರೆ. ಈ ಅಜೆಂಡಾ ಕೇಳಿದ ಜನರೆಲ್ಲಾ ಪ್ರಜ್ಞೆ ತಪ್ಪಿ ಬಿದ್ದುಬಿಟ್ಟಿದ್ದಾರೆ ! ಈ ಅಜೆಂಡಾ ಕೇಳಿದ ಪ್ರಪಂಚದ ಇನ್ನಿತರ ಜನರು ಏನಂದುಕೊಂಡಾರೊ ಏನೋ ಎನ್ನುವ ಯೋಚನೆಯೂ ಅವರನ್ನು ಬಾಧಿಸಿಲ್ಲ !

ಇನ್ನುಮೇಲೆ ಸರಕಾರದ ಎಲ್ಲಾ ಕಛೇರಿಗಳಲ್ಲಿ ಕೆಲಸ ಮಾಡುವ ಉದ್ಯೋಗಿಗಳಿಗೆ ಮಧ್ಯಾಹ್ನ ಮಜ್ಜಿಗೆ, ಕಷಾಯ ಮತ್ತು ಗಂಜಳ ಅರ್ಥಾತ್ ಗೋಮೂತ್ರ ಸರಬರಾಜು ಮಾಡಲಾಗುವುದು ಎನ್ನುವುದೇ ಅದರ ಅಜೆಂಡಾ. ಮಜ್ಜಿಗೆ, ಕಷಾಯ ಸರಬರಾಜು ಆಗುತ್ತದೋ ಇಲ್ಲವೋ ಗೊತ್ತಿಲ್ಲ. ಗಂಜಳ ಕುಡಿಸುವುದಂತೂ ಗ್ಯಾರಂಟಿ. ಯಾಕೆಂದರೆ ಅವರ ಅಜೆಂಡಾಗಳು ಯಾವುವೂ ಸರಿಯಾಗಿ ಕಾರ್ಯರೂಪಕ್ಕೆ ಬರುತ್ತಿಲ್ಲ ಎನ್ನುವ ವಿಪರೀತ ಕೋಪ ಅವರಿಗಿದೆ. ಗಂಜಳ ಕುಡಿಯುವುದಿಲ್ಲ ಎನ್ನುವವರಿಗೆ ವರ್ಗವಾದರೂ ಆಗಬಹುದು ಇಲ್ಲ ಡಿಬಾರ್ ಆದರೂ ಆಗಬಹುದು. ಹಾಗಾಗಿ ಎಲ್ಲರೂ ಸ್ವಲ್ಪ ಸ್ವಲ್ಪ ಗಂಜಳ ಕುಡಿದು ರೂಢಿ ಮಾಡಿಕೊಳ್ಳುವ ಅಗತ್ಯ ಇದೆ !


ಇದ್ಯಾವುದೇ 'ಪುರಾತತ್ವ ಶಾಸನ' ಇರಬಹುದೇ ಅಂದ್ಕೊಂಡೆ !..ನೋಡಿದ್ರೆ, ಮಾಜೀ ಮಂತ್ರಿಗಳಟ್ಟ ಅಡಿಗಲ್ಲು !!

ಗೋಮೂತ್ರ ಯಾಕೆ ಕುಡಿಯಬೇಕು ಎಂದರೆ, ಗೋಮೂತ್ರದಲ್ಲಿ ಎಲ್ಲಿಲ್ಲದ ಶಕ್ತಿ ಇದೆಯಂತೆ, ಮನಸ್ಸಿಗೆ ಅದು ಆರಾಮ ನೀಡುತ್ತದಂತೆ. ಮುಸಲ್‌ಮಾನರು, ಕ್ರೈಸ್ತರು ಮತ್ತು ದಲಿತರು ತಿನ್ನುವ ಗೋವು ಹಿಂದೂಗಳಿಗೆ ಮೂವತ್ತು ಮೂರು ಕೋಟಿ ದೇವರುಗಳ ರೂಪ, ಕಾಮಧೇನು. ಅದಕ್ಕೆ ಅದರ ಗಂಜಳವನ್ನು ಎಲ್ಲರಿಗೂ ಕುಡಿಸಲು ಕೇಂದ್ರ ಸರಕಾರ ಪಣತೊಟ್ಟಿದೆ. ಬೇರೆ ದೇಶಗಳಲ್ಲಿರುವ ಹಿಂದೂಗಳಿಗೆ ಇನ್ನು ಮೇಲೆ ಇಂಡಿಯನ್ ಮೇಡ್ ಕೂಲ್ ಡ್ರಿಂಕ್ ಆಗಿ ಗಂಜಳ ರವಾನೆ ಆದರೂ ಆಗಬಹುದು. ಆಗ ನಮ್ಮ ದೇಶದಲ್ಲಿ ಇನ್ನೆರಡು ಜಾತಿಗಳು ಹುಟ್ಟಿಕೊಳ್ಳುತ್ತವೆ. ಒಂದು ಗಂಜಳ ಕುಡಿಯುವವರು, ಇನ್ನೊಂದು ಗಂಜಳ ಕುಡಿಯದವರು !

ಕೇಂದ್ರ ಸರಕಾರದ ಮಹಿಳೆ ಮತ್ತು ಮಕ್ಕಳ ಸಮಾಜ ಕಲ್ಯಾಣ ಮಂತ್ರಿಯವರು ಇದ್ದಕ್ಕಿದ್ದಂತೆ ದೇಶದಾದ್ಯಂತ ೪೩ ವರ್ಷಗಳಿಂದ ನಡೆಯುತ್ತಿದ್ದ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಮಕ್ಕಳ ಅನುದಾನಿತ ಹಾಸ್ಟೆಲ್ ಹಾಗೂ ಶಾಲೆಗಳಿಗೆ ನೀಡುತ್ತಿದ್ದ ಅನುದಾನವನ್ನು ದಿಢೀರನೆ ನಿಲ್ಲಿಸಿಬಿಟ್ಟರು. ಈ ಅನುದಾನಿತ ಹಾಸ್ಟೆಲ್ ಹಾಗೂ ಶಾಲೆಗಳು ೪೩ ವರ್ಷಗಳಿಂದ ದೇಶದಾದ್ಯಂತ ಸಾವಿರಾರು ದಲಿತ ವಿದ್ಯಾರ್ಥಿಗಳಿಗೆ ಆಸರೆಯಾಗಿದ್ದವು. ದಲಿತ ಮಕ್ಕಳು ಓದಿದರೆ ತಾನೇ ಉದ್ಯೋಗಗಳನ್ನು ಕೇಳುವುದು; ಓದೇ ನೀಡದಿದ್ದರೆ ಉದ್ಯೋಗಗಳನ್ನು ಕೇಳುವುದು ಎಲ್ಲಿ ? ಇದೇ ಇದರ ಹಿಂದಿನ ಉಪಾಯ ಇರಬೇಕು. ಈ ವಿಷಯವನ್ನು ಯಾವ ದಲಿತ, ಹಿಂದುಳಿದ ನಾಯಕರೂ ಪ್ರಶ್ನಿಸಲಿಲ್ಲ. ಕೇಂದ್ರ ಸರಕಾರ ದಲಿತ ಮಕ್ಕಳ ಅಭಿವೃದ್ಧಿಯ ಬುಡಕ್ಕೆ ಕೊಡಲಿಯನ್ನೇ ಹಾಕಿಬಿಟ್ಟಿತು. ಇದು ಸಾಲದೆಂಬಂತೆ ಕೇಂದ್ರ ಸರಕಾರದ ಮಹಿಳೆ ಮತ್ತು ಮಕ್ಕಳ ಸಮಾಜ ಕಲ್ಯಾಣ ಮಂತ್ರಿ ಅದೇ ಖಾತೆಯಿಂದ ೩೦೦ ಕೋಟಿ ರೂಪಾಯಿಗಳನ್ನು ಪ್ರಾಣಿಗಳ ಸಮಾಜಕ್ಕೆ ವರ್ಗಾಯಿಸಿಬಿಟ್ಟರು. ಈ ದೇಶದಲ್ಲಿ ಪ್ರಾಣಿಗಳಿಗಿರುವ ಗೌರವ ಮನುಷ್ಯರಿಗೆ ಇಲ್ಲ ಎನ್ನುವುದು ಮತ್ತೊಮ್ಮೆ ಸ್ಪಷ್ಟವಾಯಿತು. ಪಾರ್ಲಿಮೆಂಟಿನಲ್ಲಿರುವ ೧೨೦ ದಲಿತ ನಾಯಕರು ಈ ವಿಷಯವನ್ನು ಪ್ರಶ್ನಿಸಲಿಲ್ಲ. ಉರಿಯುತ್ತಿರುವ ದಲಿತರ ಬೆಂಕಿಯಲ್ಲಿ ಮೈಕಾಯಿಸಿ ಕೊಳ್ಳುವುದೇ ಅವರ ವೃತ್ತಿಯಾಗಿದೆ. ಯಾರು ಏನೇ ಆದರೂ ಅವರಿಗೆ ಅಧಿಕಾರ ಮಾತ್ರ ಹೋಗಬಾರದು, ಅಷ್ಟೇ.

**ಎಂ. ವೆಂಕಟಸ್ವಾಮಿ**
೪೨೭, ೧೩ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ
ವಿಜಯನಗರ, ಬೆಂಗಳೂರು - ೫೬೦ ೦೪೦.

# ಅಡಗಿಹೋದ ಸಂಗೀತಳ ಧ್ವನಿ

**ಶೈಲಜಾ**

**ಸಂ**ಗೀತಾ ಶರ್ಮ ನೂರಾರು ಕನಸುಗಳನ್ನು ಕಟ್ಟಿಕೊಂಡು ಲಾಯರ್ ವೃತ್ತಿಗೆ ಕಾಲಿಟ್ಟಿದ್ದ ಮಹಿಳೆ. ಆಕೆ ಹೈದ್ರಾಬಾದಿನಲ್ಲಿ ಕೆಲ ದಿನಗಳಿಂದ ಒಬ್ಬ ಸೀನಿಯರ್ ಬಳಿ ಅಭ್ಯಾಸ ಮಾಡುತ್ತಿದ್ದಳು. ಇದ್ದಕ್ಕಿದ್ದಂತೆ ಜೂನ್ ೧೫ರಂದು ಆತ್ಮಹತ್ಯೆ ಮಾಡಿಕೊಂಡಳು. ಏನೋ ಮನೆ ಸಮಸ್ಯೆ ಇರಬೇಕು ಅಂತೀರ. ಅದೇ ಆಗಿದ್ದರೆ ನೂರರಲ್ಲಿ ಇದೂ ಒಂದು ಪ್ರಕರಣ ಅಂತ ಮರೆತುಹೋಗುತ್ತಿತ್ತು. ಆದರೆ ಆಕೆ ಸಾಯುವಾಗ, ಆಕೆ ಬರೆದಿಟ್ಟ ಪತ್ರ ಇಡೀ ಪ್ರಕರಣಕ್ಕೆ ವಿಶೇಷ ಮಹತ್ವ ನೀಡಿದೆ. ಅದರಲ್ಲಿ ತನಗೆ ಮೂವರು ವಕೀಲರು ಲೈಂಗಿಕ ಕಿರುಕುಳ ನೀಡುತ್ತಿದ್ದರು, ಎಂದು ಅವರ ಹೆಸರನ್ನೂ ಬರೆದಿದ್ದಾಳೆ. ಪಾಪ, ಆಕೆ ಅವರ ಕಿರುಕುಳ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಮೊದಲೇ ಯಾರಿಗಾದರೂ ದೂರು ನೀಡಬಾರದಿತ್ತೇ, ಅದಕ್ಕೆ ಸಾಯಬೇಕೆ ಅಂತೀರಾ ?

ಆ ನಿಟ್ಟಿನಲ್ಲಿ ಸುಮಾರು ಪ್ರಯತ್ನ ಮಾಡಿದ್ದಾಳೆ. ಡಿಸೆಂಬರ್ ೧೯೯೯ರಲ್ಲಿ ತನಗೆ ಲೈಂಗಿಕವಾಗಿ ಕಿರುಕುಳ ನೀಡಲಾಗುತ್ತಿದೆ ಎಂದು ಆಂಧ್ರಪ್ರದೇಶದ ಬಾರ್ ಕೌನ್ಸಿಲ್ಲಿನ ಛೇರ್ಮನ್‌ಗೆ ಒಂದು ಪತ್ರವನ್ನು ಸಿದ್ಧ ಮಾಡಿಟ್ಟಿದ್ದಳು. ಆದರೆ ಏಕೋ ಏನೋ, ಆ ಪತ್ರವನ್ನು ಬಾರ್ ಕೌನ್ಸಿಲ್ಲಿಗೆ ಸಲ್ಲಿಸಿರಲಿಲ್ಲ. ಕೆಲ ಸೀನಿಯರ್‌ಗಳ ಹತ್ತಿರ ತನ್ನ ತೊಂದರೆಯನ್ನು ಹೇಳಿಕೊಂಡಾಗ 'ಮರೆತುಬಿಡು' ಅನ್ನುವ ಸಲಹೆ ಬಂತು. ಆದರೆ ಸಮಸ್ಯೆ ಮುಂದುವರಿದಾಗ, ಆಕೆ ಸಿಕಂದರಾಬಾದಿನಲ್ಲಿ ಶೋಷಿತ ಮಹಿಳೆಯರಿಗಾಗಿ ಹೋರಾಡುತ್ತಿದ್ದ ಮಹಿಳಾ ಸಂಘಟನೆಯಾದ 'ಅಸ್ಮಿತ'ದ ಸದಸ್ಯರನ್ನು ಕಂಡು ತನಗೆ ಪುರುಷ ವಕೀಲ ಸಹೋದ್ಯೋಗಿಗಳಿಂದ ಆಗುತ್ತಿದ್ದ ಲೈಂಗಿಕ ಕಿರುಕುಳದ ಬಗ್ಗೆ ಫೆಬ್ರವರಿಯಲ್ಲೇ ಹೇಳಿಕೊಂಡಿದ್ದಳು. ಆದರೆ ಅವಳು ಎಷ್ಟೊಂದು ಗಾಬರಿಗೊಂಡಿದ್ದಳೆಂದರೆ, ತನಗೆ ಹಿಂಸೆ ನೀಡುತ್ತಿದ್ದವರ ಹೆಸರುಗಳನ್ನು ಸಾರ್ವಜನಿಕವಾಗಿ ಹೇಳಲು ಆಕೆ ಹಿಂಜರಿದಿದ್ದಳು.

ಈ ರೀತಿ ಹೆಸರು ಹೇಳಲು ಹಿಂಜರಿದವಳು ಸಂಗೀತ ಒಬ್ಬಳೇ ಅಲ್ಲ. ಈ ಹಿಂದೆ ಇದೇ ರೀತಿಯ ಕಿರುಕುಳ ಅನುಭವಿಸಿ, ಅಸ್ಮಿತಕ್ಕೆ ದೂರು ಸಲ್ಲಿಸಿದ್ದ ಹಲವಾರು ಮಹಿಳಾ ಲಾಯರುಗಳು ಪುರುಷ ಲಾಯರುಗಳ ಹೆಸರನ್ನು ಹೇಳಲು ಹಿಂದೇಟು ಹಾಕಿದ್ದರು.

ಇಂಥ ಪ್ರಕರಣಗಳು ತೀರಾ ಜಾಸ್ತಿಯಾದಾಗ, ಸಂಗೀತ ಅನುಭವಿಸುತ್ತಿದ್ದ ಲೈಂಗಿಕ ಕಿರುಕುಳದ ಬಗ್ಗೆ ಆಂಧ್ರಪ್ರದೇಶದ ಬಾರ್ ಕೌನ್ಸಿಲ್ಲಿನ ಛೇರ್‌ಮನ್ನಿಗೆ 'ಅಸ್ಮಿತ'ದವರು ಪತ್ರ ಬರೆದರು. ಆದರೆ ಯಾವುದೇ ಉತ್ತರ ಬರಲಿಲ್ಲ.

ಸಾಯುವ ಒಂದು ವಾರ ಮೊದಲು ಸಂಗೀತಳಿಗೆ ಒಂದು ಫೋನ್ ಬಂದಿತ್ತಂತೆ, ಅದರಲ್ಲಿ ಮಗುವನ್ನು ಅಪಹರಣ ಮಾಡುವ ಬೆದರಿಕೆ ಹಾಕಲಾಗಿತ್ತು ಎಂದು ಒಂದು ಪತ್ರಿಕೆಯಲ್ಲಿ ವರದಿಯಾಗಿತ್ತು. ಅಂದಿನಿಂದ ಆಕೆ ತೀರಾ ಗಾಬರಿಯಾಗಿದ್ದಳಂತೆ.

ಕೊನೆಗೆ ಸಂಗೀತಳ ಸಾವಿನ ನಂತರ 'ಅಸ್ಮಿತ', ಬಾರ್ ಕೌನ್ಸಿಲ್ಲಿನ ಛೇರ್‌ಮನ್ನಿಗೆ ಮತ್ತೊಂದು ಪತ್ರ ಬರೆದು ಹಳೆಯ ಪತ್ರದ ಬಗ್ಗೆಯೂ ನೆನಪಿಸಿದಾಗ ಲೈಂಗಿಕ ಕಿರುಕುಳವು ವೃತ್ತಿ ನಿಯಮಗಳ ವ್ಯಾಪ್ತಿಯಲ್ಲಿ ಬರುವುದಿಲ್ಲ, ಹಾಗಾಗಿ ವೃತ್ತಿ ಕಾನೂನಿನಲ್ಲಿ ತಿದ್ದುಪಡಿಯನ್ನು ಕೇಳಿ ಸುಪ್ರೀಂ ಕೋರ್ಟಿಗೆ ಮನವಿ ಸಲ್ಲಿಸುವಂತೆ ಉತ್ತರ ಬರೆದರು.

ಈ ವೇಳೆಗೆ ಪ್ರತಿವಾದಿ ವಕೀಲರು ತಡೆಯಾಜ್ಞೆಯನ್ನು ತಂದು ಸಂಗೀತ ಪ್ರಕರಣದಲ್ಲಿ ನಡೆಯುತ್ತಿದ್ದ ತನಿಖೆ ಮುಂದುವರೆಯದಂತೆ ಮಾಡಿದರು. ಇದರಿಂದ ವಿಚಾರಣೆ ಮುಂದೆ ಹೋಗುತ್ತದೆ. ಅದರ ಕಾವು ಕಮ್ಮಿಯಾಗುತ್ತದೆ. ಕ್ರಮೇಣ ಮರೆತುಹೋಗುತ್ತದೆ. ಇಂತಹ ಹಲವಾರು ಪ್ರಕರಣಗಳು ಸ್ವತಂತ್ರ ಭಾರತದ ೫೦ ವರ್ಷದ ಚರಿತ್ರೆಯಲ್ಲಿ ನಡೆದಿದೆ.

ನಂತರ 'ಅಸ್ಮಿತ'ದವರು ರಾಷ್ಟ್ರೀಯ ಮಹಿಳಾ ಆಯೋಗಕ್ಕೆ ಪತ್ರ ಬರೆದಾಗ ಅವರು ಬಂದು ಈ ಪ್ರಕರಣದ ಬಗ್ಗೆ ಹಾಗೂ ನ್ಯಾಯಾಲಯದಲ್ಲಿ ಮಹಿಳೆಯರು ಅನುಭವಿಸುತ್ತಿದ್ದ ಲೈಂಗಿಕ ಕಿರುಕುಳದ ಬಗ್ಗೆ ತನಿಖೆ ನಡೆಸಿದರು.

ಹೈದ್ರಾಬಾದಿಗಷ್ಟೇ ಇವೆಲ್ಲಾ ಸೀಮಿತವಲ್ಲ. ೫-೬ ವರ್ಷಗಳ ಹಿಂದೆ ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿ ವಕೀಲಿವೃತ್ತಿ ನಡೆಸುತ್ತಿದ್ದ ಐದು ಮಂದಿ ಜೂನಿಯರ್ ಮಹಿಳಾ ವಕೀಲರು ತಮ್ಮೊಡನೆ ಸೀನಿಯರ್ ವಕೀಲರ ವರ್ತನೆಯನ್ನು ಹಾಗೂ ಅವರು ತಮ್ಮನ್ನು ಗುಮಾಸ್ತರಂತೆ ನಡೆಸಿಕೊಳ್ಳುತ್ತಿದ್ದುದರ ಬಗ್ಗೆ ಒಂದು ತಮಿಳು ವಾರಪತ್ರಿಕೆಗೆ ನೀಡಿದ್ದ ಸಂದರ್ಶನದಲ್ಲಿ ಬಯಲುಮಾಡಿದ್ದರು. ಅದು ಒಂದು ದೊಡ್ಡ ಗದ್ದಲಕ್ಕೆ ಕಾರಣವಾಗಿತ್ತು. ಅವೆಲ್ಲಾ ಆಂತರಿಕ ವಿಷಯ, ಅವನ್ನೆಲ್ಲಾ ಪತ್ರಿಕೆಯವರೊಂದಿಗೆ ತೋಡಿಕೊಳ್ಳಬೇಕೇ ಅಂತ ಕೂಗಾಡಿ, ಆ ಐದು ಜನ ಲಾಯರುಗಳನ್ನು ಬಾರ್ ಕೌನ್ಸಿಲ್‌ನಿಂದ ತೆಗೆದು ಹಾಕಬೇಕು ಅಂತ ಕೆಲ ಮಹಿಳಾ ವಕೀಲರೇ ಕೂಗಾಡಿದ್ದರು. ಅದನ್ನು ನೋಡಿ ''ಹೆಂಗಸರಿಗೆ ಹೆಂಗಸರೇ ಶತ್ರುಗಳು'' ಅಂತ ಕೆಲವರು ನಿಶ್ಚಿಂತೆಯಿಂದ ನಗೆಯಾಡಿದ್ದು ಉಂಟು.

ಇನ್ನು ಕಸಿವಿಸಿಯ ವಿಷಯವೆಂದರೆ, ಎಷ್ಟೋ ಬಾರಿ ಮಹಿಳಾ ಲಾಯರುಗಳ ಮೇಲೆ, ನ್ಯಾಯಾಲಯದ ಆವರಣದಲ್ಲಿಯೇ ಹಲ್ಲೆ ನಡೆದಿರುವಂಥ ಉದಾಹರಣೆಗಳು ಕೂಡ ಇವೆ. ಅವು ದೆಹಲಿಯ ವಕೀಲರ ಬಾರ್ ವರದಿಯಲ್ಲಿ ದಾಖಲಾಗಿವೆ. ಒಮ್ಮೆ ಪುರುಷ ವಕೀಲರೊಬ್ಬರು ಮಹಿಳಾ ವಕೀಲರನ್ನು ಕಾಫಿಗೆ ಕರೆದರಂತೆ. ಆಕೆ ಹೋಗಲಿಲ್ಲ ಅನ್ನೋ ಕಾರಣಕ್ಕೆ ಉಚ್ಚ ನ್ಯಾಯಾಲಯದ ಆವರಣದಲ್ಲಿಯೇ ಆ ವಕೀಲ ಸಾರ್ವಜನಿಕವಾಗಿ ಆಕೆಯನ್ನು ಹಿಡಿದು ಗುದ್ದಿದರಂತೆ. ಇನ್ನೊಂದು ಘಟನೆಯಲ್ಲಿ ಪುರುಷ ವಕೀಲರೊಬ್ಬರು ಈ ದೇಶದ ಅತ್ಯುಚ್ಚ ನ್ಯಾಯಾಲಯದ ಆವರಣದಲ್ಲಿ ಮಹಿಳಾ ವಕೀಲರೊಬ್ಬರಿಗೆ ಕೆನ್ನೆಗೆ ಹೊಡೆದರು. ದೆಹಲಿಯ ''ಸಾಕ್ಷಿ'' ಸಂಸ್ಥೆಯು ನಡೆಸಿದ ಸಮೀಕ್ಷೆಯ ಪ್ರಕಾರ ಅವರು ಸಂದರ್ಶಿಸಿದ ಶೇಕಡ ೭೫ರಷ್ಟು ಮಹಿಳಾ ವಕೀಲರು ತಮ್ಮನ್ನು ದೈಹಿಕವಾಗಿ, ಮಾತು ಹಾಗೂ ಸಂಜ್ಞೆಯ ಮೂಲಕ ಲೈಂಗಿಕವಾಗಿ ಕಾಡುತ್ತಿದ್ದರು ಎಂದು ಒಪ್ಪಿಕೊಂಡಿದ್ದಾರೆ. ಇನ್ನು ಶೇಕಡಾ ೪೮ರಷ್ಟು ಮಹಿಳಾ ವಕೀಲರು ಹೆಂಗಸರನ್ನು ಹೀಗಳೆಯುವ, ಅಪಮಾನಗೊಳಿಸುವ, ಅಶ್ಲೀಲ ನಗೆ ಚಾಟುಗಳನ್ನು ತಾವು ಕೇಳಿರುವುದನ್ನು ಹಾಗೂ ಹಿಂಸೆ ಅನುಭವಿಸಿರುವುದನ್ನು ಒಪ್ಪಿಕೊಂಡರು.

ಆದರೆ ಇಂಥ ಪ್ರಕರಣಗಳು ನಡೆದಾಗ ''ನೋ ಕಾಮೆಂಟ್'' ಅಂತ ಜಾರಿಕೊಳ್ಳುವುದೋ ಅಥವಾ ನೊಂದ ಹೆಂಗಸರ ಚಾರಿತ್ರ್ಯದ ಬಗ್ಗೆ ಇಲ್ಲಸಲ್ಲದ ಮಾತನಾಡುವುದೋ ಅಥವಾ ಅವಳಿಗೆ ತಲೆ ಸರಿ ಇರಲಿಲ್ಲ ಅನ್ನುವುದೋ ಮಾಮೂಲಿಯಾಗಿಬಿಟ್ಟಿದೆ. ಸಂಗೀತಳ ವಿಷಯದಲ್ಲೂ ಇದೇ ಆದದ್ದು.

ಸಂಗೀತ ಮಾನಸಿಕವಾಗಿ ಅಸ್ವಸ್ಥಳು. ಅವಳಿಗೆ ತಲೆ ಸರಿ ಇರಲಿಲ್ಲ ಎಂದವರು ಕೆಲವರು. ಅವಳಿಗೆ ಧೈರ್ಯ ಇರಲಿಲ್ಲ, ಅದಕ್ಕೆ ಆತ್ಮಹತ್ಯೆ ಮಾಡಿಕೊಂಡಳು ಎಂದವರು ಮತ್ತಷ್ಟು ಮಂದಿ. ಹೊರಗಿನ ಪ್ರಪಂಚದಲ್ಲಿ ಇಂಥದ್ದೆಲ್ಲಾ ಇದ್ದೇ ಇರುತ್ತದೆ, ಅದರ ಜೊತೆಗೆ ಬದುಕುವುದನ್ನು ಕಲಿಯಬೇಕು ಅನ್ನುವ 'ಪ್ರಾಯೋಗಿಕ' ಸಲಹೆಯನ್ನು ಕೆಲವರು

*ಒಳ್ಳೆ ಲಾಯರ್ ಹಿಡಿದು ಕೋರ್ಟಿಗೆ ಹೋದರೆ ನಮ್ಮ ಎಲ್ಲಾ ಅನ್ಯಾಯಕ್ಕೂ ಮದ್ದು ಗ್ಯಾರಂಟಿ ಅಂತ ನಂಬಿರುವ ನಮಗೆ ಲಾಯರ್‌ಗಳ ಕಿರುಕುಳದ ಕಥೆಗಳನ್ನು ನಂಬೋದು ಸ್ವಲ್ಪ ಕಷ್ಟ ಆಗಬಹುದು. ಅಥವಾ ಸಂಗೀತಳ ಪ್ರಕರಣ ತೀರಾ ಅಪರೂಪದ ಘಟನೆ ಅನ್ನಿಸಬಹುದು. ಆದರೆ ಸಂಗೀತಳ ಪ್ರಕರಣ ಒಂದು ಅಪರೂಪದ ಘಟನೆಯೆಂದು ತಳ್ಳಿ ಹಾಕುವುದು ಅಷ್ಟು ಸುಲಭದ್ದಲ್ಲ. ಮೌನದ ಮಂಜುಗಡ್ಡೆಯ ಅಡಿಯಲ್ಲಿ, ಉದ್ಯೋಗಸ್ಥ ಮಹಿಳೆಯರು ಅನುಭವಿಸುತ್ತಾ ಬರುತ್ತಿರುವ ಕಿರುಕುಳ ದಿಢೀರ್ ಎಂದು ಸಂಗೀತಳ ಸಾವಿನಿಂದ ಬಯಲಾಗಿದೆ ಅಷ್ಟೆ . ಉಳಿದವರಂತೆ ಲಾಯರುಗಳೂ ಈ ತೊಂದರೆಗೆ ಸಿಕ್ಕಿ ನರಳುತ್ತಿದ್ದಾರೆ. ಅವರಿಗೇನೂ ವಿಶೇಷ ರಕ್ಷಣೆ ಇಲ್ಲ.*

ಪುಕ್ಕಟೆಯಾಗಿ ನೀಡಿದರು. ಮತ್ತೆ ಕೆಲವರಂತೂ ಇದಕ್ಕೆ ಜಾತಿಯ ಬಣ್ಣ ಬಳಿದರು. ಇದೆಲ್ಲಾ ಬ್ರಾಹ್ಮಣರ ಹುನ್ನಾರ, ಕೆಳ ಜಾತಿಯ ಸೀನಿಯರ್ ಲಾಯರ್ ಬದುಕನ್ನು ಹಾಳು ಮಾಡಲು ನಡೆಸಿದ ಸಂಚು ಎಂದರು. ಪುಣ್ಯಕ್ಕೆ ಸಂಗೀತಳ ಕೇಸನ್ನು ನಡೆಸುತ್ತಿದ್ದುದು ಗೌರವಾನ್ವಿತ ಹಾಗೂ ಪ್ರಖ್ಯಾತ ದಲಿತ ವಕೀಲರೊಬ್ಬರು. ಮತ್ತು ಪ್ರತಿವಾದಿಯ ಕೇಸು ನಡೆಸುತ್ತಿದ್ದವರು ಮೇಲ್ಜಾತಿಯ ಪ್ರಖ್ಯಾತ ವಕೀಲರು. ಹಾಗಾಗಿ ಈ ಘಟನೆಗೆ ಜಾತಿ ಬಣ್ಣ ಬಳಿಯುವ ಪ್ರಯತ್ನ ಅಷ್ಟಾಗಿ ಸಫಲವಾಗಲಿಲ್ಲ. ಇನ್ನು ಕೆಲವರಂತೂ ಇದು ನಮ್ಮೊಳಗೇ ಚರ್ಚಿತವಾಗಿ ಪರಿಹಾರವಾಗಬೇಕಾದ ವಿಚಾರ, ಇದಕ್ಕೆ ಹೊರಗಿನವರು ತಲೆ ಹಾಕಬೇಕಾದ ಅವಶ್ಯಕತೆ ಇಲ್ಲ ಎಂದು ಈ ಬಗ್ಗೆ ಮಾತನಾಡಲು ಬಯಸಿದ ಮಹಿಳೆಯರ ಮೇಲೆ ಪೊಲೀಸ್ ಕೆಲಸ ಮಾಡಿ ಅವರು ಮೌನವಾಗಿರುವಂತೆ ನೋಡಿಕೊಂಡರು.

ಆದರೆ ಈ ಸಂದರ್ಭಗಳಲ್ಲಿ ಅತ್ಯಂತ ಪ್ರಜ್ಞಾವಂತ ಹಾಗೂ ವಿದ್ಯಾವಂತ ಮಹಿಳೆಯರೂ ಕೂಡ, ಗಂಡಸರೇ ಹುಟ್ಟುಹಾಕಿರುವ ''ಹೆಣ್ಣಿಗೆ ಹೆಣ್ಣೇ ಶತ್ರು'' ಎಂಬ ಮಾತನ್ನು ದಿಟಗೊಳಿಸುವಂತೆ ನಡೆದುಕೊಂಡರು. ಸಂಗೀತಳ ಆತ್ಮಹತ್ಯೆಯ ಸಂದರ್ಭದಲ್ಲಿ ಬಹಳಷ್ಟು ಮಹಿಳಾ ವಕೀಲರು ತೊಂದರೆ ಇದ್ದದ್ದು ಸಂಗೀತಳಲ್ಲೇ ಎಂದರು. ಮತ್ತೆ ಕೆಲವರು ಗುಸುಗುಸು ಪಿಸುಪಿಸು ಅಂತ, ಅಷ್ಟೇನೂ ಸ್ಫುರದ್ರೂಪಿಯಲ್ಲದ ಸಂಗೀತಳ ಹಿಂದೆ ಆ ವಕೀಲ ಹೇಗೆ ಬಿದ್ದ ಎಂದರು ! ಆಕೆಯ ಪರ ನಿಂತ ಲಾಯರುಗಳ ಬಗ್ಗೆ ಗಲಾಟೆಯನ್ನು ಮಾಡಿದ್ದಾರೆ. ರಾಷ್ಟ್ರೀಯ ಮಹಿಳಾ ಆಯೋಗದವರು ನಡೆಸಿದ ವಿಚಾರಣೆಯ ಸಂದರ್ಭದಲ್ಲೂ ಎರಡು ಗುಂಪಾಗಿದೆ. ಸೀನಿಯರ್ ಲಾಯರುಗಳು ಅಂತಹ ಪ್ರಕರಣಗಳು ನಡೆದೇ ಇಲ್ಲ ಅಂದರೆ, ಕಿರಿಯರು ಹೇರಳವಾಗಿ ನಡೆಯುತ್ತಿದೆ ಅಂತ ಸಂಗೀತಳ ಪರವಾಗಿ ನಿಂತಿದ್ದರು.

ಒಂದು ಪಕ್ಷ ಒಂದೆರಡು ಪ್ರಕರಣಗಳಲ್ಲಿ ಮಹಿಳಾ ಲಾಯರುಗಳದ್ದೂ ತಪ್ಪಿರಬಹುದು. ಒಳ್ಳೆಯ ಅವಕಾಶ, ಬಡ್ತಿ ಇತ್ಯಾದಿಗಳಿಗಾಗಿ ತಮ್ಮ ಸೀನಿಯರುಗಳ ವೀಕ್‌ನೆಸ್‌ನ್ನು ಬಳಸಿಕೊಂಡಿರಲೂಬಹುದು. ಆದರೆ ಒಂದು ಘಟನೆ ನಡೆದಾಗ ಬಾಯಿಮುಚ್ಚಿಸುವ, ಅಥವಾ ಮೌನವಾಗುವ ಈ ಪ್ರವೃತ್ತಿ ಯಾಕೆ? ''ನೋ ಕಾಮೆಂಟ್ಸ್'' ಅಂದು ಜಾರಿಕೊಳ್ಳುವ ಪ್ರವೃತ್ತಿ ಏಕೆ ?

ಹೆಚ್ಚಿನ ಮಹಿಳಾ ಲಾಯರುಗಳು ಕೂಡ ಹೀಗೇಕೆ ಮಾಡುತ್ತಿದ್ದಾರೆ? ಈ ಪ್ರತಿಕ್ರಿಯೆಯ ಹಿಂದೆ ಇರುವ ಒತ್ತಡಗಳೇನು ಎಂದು ಕೇಳಿಕೊಳ್ಳುವುದು ತೀರಾ ಅನಿವಾರ್ಯವಾಗುತ್ತದೆ. ಇಲ್ಲವಾದಲ್ಲಿ ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಹೇಳಿಕೆಯ ಬಲೆಯಲ್ಲಿ ಸಿಲುಕಿ ಅದನ್ನು ನಿಜ ಎಂದೇ ನಂಬಿಬಿಡಬಹುದಾದ ಅಪಾಯವೂ ಇದೆ. ಈ ಲೈಂಗಿಕ ಕಿರುಕುಳದ ಸಂದರ್ಭವೂ ಮಹಿಳೆಯರ ಬದುಕನ್ನು ನಿಯಂತ್ರಿಸುತ್ತಿರುವ ಹಲವಾರು ಗಂಭೀರ ಒತ್ತಡಗಳ ಕಡೆಗೆ ನಮ್ಮ ಗಮನ ಸೆಳೆಯುತ್ತದೆ.

ತಮಗಾಗುತ್ತಿರುವ ಲೈಂಗಿಕ ಕಿರುಕುಳದ ಬಗ್ಗೆ ಬಾಯಿ ಬಿಡುವುದು ಮಹಿಳೆಯರಿಗೆ ಅತ್ಯಂತ ಅನಾನುಕೂಲವನ್ನು ಉಂಟುಮಾಡುತ್ತದೆ. ತಮಗಾಗುತ್ತಿರುವ ಅನ್ಯಾಯವನ್ನು ಬಾಯಿಬಿಟ್ಟಲ್ಲಿ ಮಹಿಳಾ ವಕೀಲರು ಈಗ ಕಾರ್ಯನಿರ್ವಹಿಸುತ್ತಿರುವ ಆಫೀಸಿನಲ್ಲಿ ಕೆಲಸ ಕಳೆದುಕೊಳ್ಳುತ್ತಾರೆ. ಅಷ್ಟೇ ಅಲ್ಲ, ಅವರು ತರಲೆಗಳು ಹಾಗೂ ಅನವಶ್ಯಕವಾದ ವಿವಾದಗಳನ್ನು ಸೃಷ್ಟಿಸುತ್ತಾರೆ ಎನ್ನುವ ಕಾರಣಕ್ಕೆ ಬೇರೆ ಯಾವ ಒಳ್ಳೆಯ ಆಫೀಸಿನಲ್ಲಿಯೂ ಅವರಿಗೆ ಪ್ರವೇಶ ದೊರಕುವುದಿಲ್ಲ. ವಕೀಲಿ ವೃತ್ತಿಯಲ್ಲಿ ಸರಿಯಾದ ಸೀನಿಯರ್ ಬಳಿ ಕೆಲಸ ಮಾಡದಿದ್ದಲ್ಲಿ ಮುಂದಿನ ವೃತ್ತಿ ಬದುಕನ್ನು ರೂಪಿಸಿಕೊಳ್ಳುವುದು ತೀರಾ ಕಷ್ಟವಾಗುತ್ತದೆ. ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಾರೆ ಎಂದು ತಿಳಿದ ನಂತರ ಅವರನ್ನು ಕೆಲಸಕ್ಕೆ ಕಳಿಸಲು ಮನೆಯವರೂ ಹಿಂಜರಿಯುತ್ತಾರೆ. ಸಾಮಾಜಿಕವಾಗಿ ಕೂಡ ಒಂದು ಆಕ್ಷೇಪದ ನೋಟವನ್ನು ಎದುರಿಸಬೇಕಾಗುತ್ತೆ. ಇನ್ನು ಕೆಲವು ಸಂದರ್ಭಗಳಲ್ಲಿ ಬಡತನ, ಹಸಿವು, ನಿರುದ್ಯೋಗ ಇವುಗಳ ಸಮಸ್ಯೆ ಎಷ್ಟು ತೀವ್ರವಾಗಿರುತ್ತದೆ ಎಂದರೆ ತಮ್ಮ ಮೇಲಾಗುವ ಎಲ್ಲಾ ಬಗೆಯ ದೌರ್ಜನ್ಯಗಳನ್ನೂ ಬಾಯಿ ಮುಚ್ಚಿ ಸಹಿಸಿಕೊಂಡು ಅನ್ನ ಗಳಿಸುವ ಅನಿವಾರ್ಯವಿರುತ್ತದೆ. ಹಾಗಾಗಿ ಇಂದು ಮಹಿಳೆಯರು ದುಡಿಯುವ ಸ್ಥಾನಗಳು ಅವರು ವಾಸಿಸುವ ಕುಟುಂಬ ಹಾಗೂ ಸಮಾಜದ ಮುಂದುವರೆದ ಬೆಳವಣಿಗೆಯೇ ಆಗಿದೆ. ಮನೆಯಲ್ಲಾಗುವಂತೆಯೇ ತನ್ನ ಮೇಲೆ ಆಗುವ ಅನ್ಯಾಯವನ್ನು ಬಾಯಿ ಮುಚ್ಚಿ ಸಹಿಸಿಕೊಂಡಿದ್ದರೆ ಮಾತ್ರವೇ ಅವಳಿಗೆ ಒಂದು ಸ್ಥಾನವಿರುತ್ತದೆ. ಅವಳು ಮೌನವಾಗಿರುವುದನ್ನು ನಮ್ಮ ಸಮಾಜ ಪ್ರತಿಪಾದಿಸುವ ಮೌಲ್ಯಗಳು ಅನಿವಾರ್ಯ ಮಾಡಿವೆ. ಈ ಮೌಲ್ಯಗಳೆಲ್ಲವೂ ಅಧಿಕಾರಸ್ಥರ, ಪುರುಷರ ಹಿತಾಸಕ್ತಿಗಳನ್ನು ಕಾಪಾಡುವ ಧೋರಣೆಯನ್ನೇ ಹೊಂದಿವೆ. ಆ ಕೆಲಸವನ್ನು ಪ್ರತ್ಯಕ್ಷವಾಗಿಯೋ ಅಥವಾ ಪರೋಕ್ಷವಾಗಿಯೋ ಮಾಡುತ್ತವೆ.

ದುಡಿಯುವ ಸ್ಥಳಗಳಲ್ಲಿ ಮಹಿಳೆಯರ ಮೇಲೆ ನಡೆಯುವ ಲೈಂಗಿಕ ಕಿರುಕುಳವನ್ನು ತಪ್ಪಿಸಲು ನಿಖರವಾದ ಕಾನೂನುಗಳು ನಮ್ಮಲ್ಲಿಲ್ಲ. ೧೯೯೭ರಷ್ಟು ಹಿಂದೆಯೇ ಈ ಕೊರತೆಯನ್ನು ಮನಗಂಡ ಸುಪ್ರೀಂ ಕೋರ್ಟು ''ಕೆಲಸಗಾರರಿಗೆ ಕಿರುಕುಳಕ್ಕೆ ಅವಕಾಶವಿಲ್ಲದಂಥ ಕೆಲಸದ ವಾತಾವರಣವನ್ನು ನಿರ್ಮಿಸಬೇಕಾದದ್ದು ಕೇಂದ್ರ, ರಾಜ್ಯ ಸರಕಾರ ಹಾಗೂ ಖಾಸಗಿ ಸಂಸ್ಥೆಗಳಿಗೆ ಕಡ್ಡಾಯ'' ಎಂದು ತೀರ್ಪಿತ್ತಿದೆ. ಅದೇ ರೀತಿಯಲ್ಲಿ ಮಹಿಳೆಯರಿಗೆ ಕೆಲಸದ ಸ್ಥಳದಲ್ಲಿ ಹೆಚ್ಚುತ್ತಿರುವ ಲೈಂಗಿಕ ಕಿರುಕುಳವನ್ನು ತಡೆಯಲು ನ್ಯಾಯಮೂರ್ತಿ ಜೆ. ಎಸ್. ವರ್ಮಾ ನೇತೃತ್ವದ ಸಮಿತಿಯು ಕೆಲವು ಮಾರ್ಗದರ್ಶಿ ಸೂತ್ರಗಳನ್ನೂ ರೂಪಿಸಿತ್ತು. ''ಲೈಂಗಿಕ ಉದ್ದೇಶದ ನೇರ ಅಥವಾ ಪರೋಕ್ಷ ನಡೆವಳಿಕೆಗಳು, ದೈಹಿಕ ಸ್ಪರ್ಶ, ಲೈಂಗಿಕ ಸುಖದ ಬೇಡಿಕೆ ಮಂಡಿಸುವುದು, ಮೌಖಿಕ ಅಥವಾ ಲಿಖಿತವಾಗಿ ಇಂಥ ಬೇಡಿಕೆಗಳನ್ನು ವ್ಯಕ್ತಪಡಿಸುವುದು ಮುಂತಾದುವನ್ನು ಲೈಂಗಿಕ ಕಿರುಕುಳ ಎಂದು ಸುಪ್ರೀಂ ಕೋರ್ಟು ವಿವರಿಸಿದೆ. ಇದಕ್ಕೆ ಸಂಬಂಧಿಸಿದಂತೆ ದೂರು ಸಮಿತಿಯೊಂದನ್ನು ರಚಿಸಬೇಕೆಂದು ಮತ್ತು ಈ ಸಮಿತಿಯ ಅರ್ಧದಷ್ಟು ಸದಸ್ಯರು ಮಹಿಳೆಯರೇ ಆಗಿರಬೇಕೆಂದು ಮತ್ತು ಲೈಂಗಿಕ ಕಿರುಕುಳದ ಬಗ್ಗೆ ಸ್ಪಷ್ಟ ತಿಳುವಳಿಕೆ ಇರುವ ಸರ್ಕಾರೇತರ ಸಂಘಟನೆಗೆ ಸೇರಿದ ಪ್ರತಿನಿಧಿಯೊಬ್ಬರು ಈ ಸಮಿತಿಯಲ್ಲಿರಬೇಕು ಎಂದು ಸುಪ್ರೀಂ ಕೋರ್ಟು ಅಭಿಪ್ರಾಯ ಪಟ್ಟಿದೆ. ಅಮೆರಿಕದಂಥ ದೇಶದಲ್ಲಿಯೂ ಲೈಂಗಿಕ ಕಿರುಕುಳವನ್ನು ತಡೆಗಟ್ಟಲು ನೇರವಾದ ಕಾನೂನುಗಳಿಲ್ಲ. ಆದರೆ ಅಲ್ಲಿನ ನ್ಯಾಯಾಂಗ ಅತ್ಯಂತ ಗಂಭೀರವಾದ ತೀರ್ಪುಗಳ ಮೂಲಕ ಲೈಂಗಿಕ ಕಿರುಕುಳವನ್ನು ತಡೆಗಟ್ಟಲು ಸಾಧ್ಯವಾಗುವಂಥ ಪರಂಪರೆಯೊಂದನ್ನು ನಿರ್ಮಿಸುತ್ತಿದೆ. ೧೯೯೧ರಲ್ಲಿ ಅನಿತಾ ಹಿಲ್ / ನ್ಯಾಯಾಧೀಶ ಕ್ಲೆರೆನ್ಸ್ ಥಾಮಸ್ ಕೇಸಿನಲ್ಲಿ, ಲೈಂಗಿಕ ಕಿರುಕುಳವನ್ನು ಲೈಂಗಿಕ ತಾರತಮ್ಯ ಎಂದು ಹೇಳಿ ಅದನ್ನು ಶಿಕ್ಷಾರ್ಹ ಅಪರಾಧ ಎಂದು ತೀರ್ಪು ನೀಡಿದರು. ಮೆರಿಟರ್ಸ್ ಸೇವಿಂಗ್ಸ್ ಬ್ಯಾಂಕ್ ವಿರುದ್ಧ ವಿನ್‌ಸನ್ ಮೊಕದ್ದಮೆಯಲ್ಲಿ ಅಮೆರಿಕಾ ಸುಪ್ರೀಂ ಕೋರ್ಟು ಲೈಂಗಿಕ ಕಿರುಕುಳ ಪರಿಹಾರಾರ್ಹ ಅಪರಾಧ ಎಂದು ತೀರ್ಪು ನೀಡಿತು. ಪ್ರೀಸ್ಟ್ ವಿರುದ್ಧ ರೋಟರಿ ಪ್ರಕರಣದಲ್ಲಿ ಲೈಂಗಿಕ ಕಿರುಕುಳವು ಹಲ್ಲೆ ಹಾಗೂ ಸುಳ್ಳು ಬಂಧನದ ಕಾಯ್ದೆಯ ಪ್ರಕಾರವೂ ಶಿಕ್ಷಾರ್ಹ ಎಂದು ತೀರ್ಪಿತ್ತಿತ್ತು. ಭಾರತದಲ್ಲಿ ಕೆಲವು ವರ್ಷಗಳ ಹಿಂದೆ ಪಂಜಾಬಿನಲ್ಲಿ ಒಬ್ಬ ಮಹಿಳಾ ಐ.ಎ.ಎಸ್. ಅಧಿಕಾರಿಣಿಯು, ಐ.ಪಿ.ಎಸ್. ಅಧಿಕಾರಿಯೊಬ್ಬರು ತಮಗೆ ನೀಡುತ್ತಿದ್ದ ಲೈಂಗಿಕ ಕಿರುಕುಳದ ವಿರುದ್ಧ ನ್ಯಾಯಾಲಯದ ಮೆಟ್ಟಿಲು ಹತ್ತಿದಾಗ ಇದು ತೀರಾ ಕ್ಷುಲ್ಲಕವಾದ ವಿಚಾರ ಎಂದು ನ್ಯಾಯಾಲಯ ದಾವೆಯನ್ನು ಡಿಸ್‌ಮಿಸ್ ಮಾಡಿತು. ಈ ನಿಟ್ಟಿನಲ್ಲಿ ಗಮನಿಸಿದಾಗ ನಮ್ಮ ನ್ಯಾಯಾಂಗದ ಹೊಣೆ ತೀರಾ ಗುರುತರವಾದುದು. ಅದು ತನ್ನ ತೀರ್ಪುಗಳ ಮೂಲಕ ಸಾಮಾಜಿಕವಾಗಿ ಒಂದು ಅರಿವನ್ನು ಮೂಡಿಸುವ ಅನಿವಾರ್ಯವಿದೆ. ಜೊತೆಗೆ ಬಾರ್ ಕೌನ್ಸಿಲ್ಲಿನಂಥ ಸಂಸ್ಥೆಗಳು ತಮ್ಮ ವೃತ್ತಿನಿಯಮಗಳನ್ನು ಪುನರ್‌ವ್ಯಾಖ್ಯಾನಿಸಿ ಲೈಂಗಿಕ ಕಿರುಕುಳದಂಥ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿ ಅದನ್ನು ವೃತ್ತಿನಿಯಮದ ವ್ಯಾಪ್ತಿಯಲ್ಲಿ ಸೇರಿಸುವ ಅವಶ್ಯಕತೆ ಇದೆ. ಈ ಬಗ್ಗೆ ಸಾಮಾಜಿಕವಾಗಿ ಗಂಭೀರವಾಗಿ ಚರ್ಚೆ ನಡೆಯುವ ತುರ್ತಿದೆ. ಲೈಂಗಿಕ ಕಿರುಕುಳದ ಬಗ್ಗೆ ಸಾಮಾಜಿಕ ಜಾಗೃತಿ ಮೂಡಿಸಿ ಅದು ಮಹಿಳೆಯರನ್ನು ಎಂಥ ಆತಂಕ, ದೈಹಿಕ ಹಾಗೂ ಮಾನಸಿಕ ಶೋಷಣೆಗೆ ಒಳಪಡಿಸುತ್ತಿರುತ್ತದೆ ಎಂಬುದನ್ನು ಮನಗಾಣಿಸುವ ಹೊಣೆಗಾರಿಕೆ ವಿಭಿನ್ನ ಮಹಿಳಾ ಸಂಘಟನೆಗಳ ಮೇಲಿದೆ.

ಶೈಲಜಾ
ಸಿ. ಎಚ್ ೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು-೯

## ನಂಬಿಕೆ

*ಸಾಯಿಬಾಬಾ ಭಕ್ತಿ*
*ಸಾಯಿಸುವುದಿಲ್ಲ ಎಂದು*
*ಅನೇಕರ ನಂಬಿಕೆ!*
*ಆದರೆ ಬಾಬಾ ಅವರನ್ನೇ*
*ಸಾವು ''ಬಾ, ಬಾ'' ಎಂದು*
*ಕರೆಯದಿರುವುದೆ?*

ಸಿ. ಪಿ. ಕೆ
ಮೈಸೂರು

# ಜಾಗತೀಕರಣ ಮತ್ತು ಭಾರತ

*ಭಾರತವು ವಸಾಹತು ಆಳ್ವಿಕೆಗೊಳಪಟ್ಟ ಚಾರಿತ್ರಿಕ ಸಂದರ್ಭವನ್ನು ನಾವಿಂದು "ರೂಲ್ ಬ್ರಿಟಾನಿಯಾ".... ಎಂಬಂತೆ ಪ್ರೋತ್ಸಾಹಕ ದೃಷ್ಟಿಯಿಂದಾಗಲಿ ಅಥವಾ "ಕ್ವಿಟ್ ಇಂಡಿಯಾ".....ಎಂಬಂತೆ ವಿರೋಧ ಬುದ್ಧಿಯಿಂದಾಗಲಿ ಅರ್ಥೈಸುವುದು ಉಚಿತವಲ್ಲ......ಭಾರತಕ್ಕೆ ಬ್ರಿಟಿಷರು ಆಗಮಿಸಿ, ಸಾರ್ವಜನಿಕ ಶಿಕ್ಷಣದ ಪರಿಕಲ್ಪನೆಯನ್ನು ನೆಲೆಗೊಳಿಸದಿದ್ದರೆ "ನಾವಿಂದು ನಮ್ಮೂರ ಕೊಟ್ಟಿಗೆಯಲ್ಲಿ ಸಗಣಿ ಬಳಿಯುತ್ತಿರಬೇಕಾಗಿತ್ತು" ಎಂಬರ್ಥದ ಮಾತುಗಳನ್ನು ಕುವೆಂಪು ಹೇಳಿ ಕೊಂಡಿರುವುದನ್ನಿಲ್ಲಿ ಸ್ಮರಿಸಬೇಕಾಗಿದೆ.*

**ವಿ. ಚಂದ್ರಶೇಖರ ನಂಗಲಿ**

'ಜಾಗತೀಕರಣ ಮತ್ತು ಭಾರತ' - ಎಂಬ ವಿಷಯವನ್ನು ಕುರಿತು ಆಲೋಚಿಸುವಾಗೆಲ್ಲ ನನಗೊಂದು ಘಟನೆ ನೆನಪಾಗುತ್ತದೆ. ಕೋಲಾರಕ್ಕೆ ಸಮೀಪದಲ್ಲಿರುವ ಆಂಧ್ರ ಪ್ರದೇಶಕ್ಕೆ ಸೇರಿದ ವಿ.ಕೋಟ ಮಂಡಲದಿಂದ ಪಲಮನೇರ್‌ಗೆ ಹೋಗುವ ರಾಜ್ಯರಸ್ತೆಗೆ ಅಂಟಿಕೊಂಡಂತೆ ಗ್ರಾಮೀಣ ಮಣ್ಣುರಸ್ತೆಯೊಂದಿದ್ದು ಇದು 'ಎರ್ರನಾಗಪಲ್ಲೆ' - ಎಂಬ ಹಳ್ಳಿಯಲ್ಲಿ ಕೊನೆಗೊಳ್ಳುತ್ತದೆ. ಕೌಂಡಿನ್ಯ ವನ್ಯಜೀವಿ ಧಾಮದ ಅಂಚಿನಲ್ಲಿರುವ ಈ ಹಳ್ಳಿಗೆ ಬೆಳಿಗ್ಗೆ ಮತ್ತು ಸಂಜೆ ಮಾತ್ರ ಎ.ಪಿ.ಎಸ್.ಆರ್.ಟಿ.ಸಿ ಬಸ್ಸೊಂದು ಓಡಾಡುತ್ತದೆ. ಈ ಮಣ್ಣು ರಸ್ತೆ ಎಷ್ಟು ಕಿರಿದಾಗಿದೆಯೆಂದರೆ ಆ ಬಸ್ಸು ಮಾರ್ಗ ಮಧ್ಯದಲ್ಲೆಲ್ಲೂ ತಿರುಗಿಕೊಳ್ಳಲಾಗುವುದಿಲ್ಲ. 'ಎರ್ರನಾಗಪಲ್ಲೆ' ಎಂಬ ಊರೊಳಕ್ಕೆ ಬಂದು ತಿರುಗಿಕೊಂಡ ನಂತರವೇ ಬಸ್ಸು ವಿ. ಕೋಟಗೆ ಹೊರಡಬೇಕು. ಒಮ್ಮೆ ಆಗನಾಗ್ ಗೆಳೆಯರೊಂದಿಗೆ ಕಾಡಿನಲ್ಲಿದ್ದು ಹಿಂದಿರುಗುವಾಗ ಈ ಸಂಜೆ ಬಸ್ಸಿಗಾಗಿ ನಾವೆಲ್ಲ ಧಾವಿಸಿ ಓಡಿ ಬರುತ್ತಿದ್ದೆವು. ಆ ಬಸ್ಸಿನ ಚಾಲಕನು ಎಷ್ಟು ಆತುರದಲ್ಲಿದ್ದನೆಂದರೆ ಕರ್ಕಶವಾಗಿ ಹಾರ್ನ್ ಮಾಡುತ್ತಾ, ಗರ್ಜಿಸುತ್ತಿದ್ದ ಎಂಜಿನ್ ಕೂಡ ಆರಿಸದೆ, ಬಂದ ವೇಗದಲ್ಲೆ ಚಕ್ಕನೆ ತಿರುಗಿಸಿಕೊಂಡು ಮತ್ತೆ ಹೊರಡಲು ಒಂದೇ ಸಮನೆ ಹಾರ್ನ್ ಬಾರಿಸತೊಡಗಿದನು. ಓಡಿಬರುತ್ತಿದ್ದ ಇತರ ಗೆಳೆಯರಿಗಾಗಿ ಕೊಂಚಹೊತ್ತು ನಿಲ್ಲಿಸಿಕೊಳ್ಳುವಂತೆ ಮನವಿ ಮಾಡಿದ್ದಾಯ್ತು: ಗೆಳೆಯರೆಲ್ಲ ಓಡಿಬಂದು ಬಸ್ಸಿನೊಳಗೆ ಹತ್ತಿದೊಡನೆ ಭರ್ರನೆ ಚಾಲು ಮಾಡಿಬಿಟ್ಟನು. ಆದರೆ, ಬಸ್ಸು ಅದೇ ವೇಗದಲ್ಲಿ ಮುಂದುವರೆಯುವುದಕ್ಕೆ ಎಮ್ಮೆಗಳ ದೊಡ್ಡ ಹಿಂಡೊಂದು ಅಡ್ಡವಾಗಿತ್ತು. ಮನೆಗಳಿಗೆ ತೆರಳುತ್ತಿದ್ದ ಆ ಎಮ್ಮೆಗಳ ಹಿಂಡನ್ನು ಭೇದಿಸಿಕೊಂಡು ಮುನ್ನುಗ್ಗುವಷ್ಟು ಆ ಮಣ್ಣು ರಸ್ತೆ ಅಗಲವಾಗಿರಲಿಲ್ಲ. ಹೀಗಾಗಿ ಮಂದಗಾಮಿಗಳಾಗಿದ್ದ ಎಮ್ಮೆ ಹಿಂಡಿನ ಹಿಂದೆ ತೀವ್ರಗಾಮಿಯಾದ ಆ ಬಸ್ಸು ಮೆಲ್ಲಗೆ ಬರುವುದು ಅನಿವಾರ್ಯವಾಗಿತ್ತು.

ಈ ಬಸ್ಸು ತಪ್ಪಿ ಹೋದರೆ ರಾತ್ರಿ ಊರಲ್ಲೆ ಉಳಿಯಬೇಕಾಗುತ್ತದೆಯೆಂಬ ಆತಂಕದಿಂದ ಓಡಿಬಂದಿದ್ದ ನಾವೆಲ್ಲ ಸೀಟುಗಳಲ್ಲಿ ಕುಳಿತು ಸುಧಾರಿಸಿಕೊಳ್ಳುತ್ತಾ ಮನದಲ್ಲೆ ಆ ಎಮ್ಮೆಗಳ ಹಿಂಡಿಗೆ ಕೃತಜ್ಞತೆ ಸಲ್ಲಿಸಿದೆವು. ಈಗ ಚಾಲಕನ ಹಾರ್ನ್ ಆಗಲಿ, ಎಂಜಿನ್ ಗರ್ಜನೆಯಾಗಲಿ ಉಸಿರು ಅಡಗಿಹೋದಂತೆ ಮೌನವಾಗಿದ್ದವು. ಆ ಎಮ್ಮೆ ಹಿಂಡು ಕರಗಿದ ಬಳಿಕವೇ ಬಸ್ಸು ಎಂದಿನ ವೇಗದಲ್ಲಿ ಗರ್ಜಿಸುತ್ತಾ ಕೂಗುತ್ತಾ ವಿ. ಕೋಟದತ್ತ ಧಾವಿಸಿತು.

ನನ್ನ ಬಗೆಗಣ್ಣಿಗೆ ಆ ಎಮ್ಮೆಗಳ ಹಿಂಡು ಬರಿಯ ಪ್ರಾಣಿಗಳಾಗಿ ಮಾತ್ರ ಕಾಣದೆ ಧಾವಿಸುವ ನಗರ ಜೀವನಕ್ಕೆ ಕಡಿವಾಣ ಹಾಕುವ ಗ್ರಾಮೀಣ ಶೈಲಿಯ ಪ್ರತೀಕಗಳಾಗಿ ಕಂಡವು. 'ತೀವ್ರಗಾಮಿಯಾದ ಬಸ್ಸು' ಜಾಗತೀಕರಣದ ಪ್ರತಿನಿಧಿ ಎಂದುಕೊಂಡರೆ 'ಮಂದಗಾಮಿಯಾದ ಎಮ್ಮೆಗಳ ಹಿಂಡು' ನಮ್ಮ ದೇಶದ ಹಳ್ಳಿಗಳ ಪ್ರತಿನಿಧಿಯೆನಿಸುತ್ತದೆ. ಭಾರತವು ಹಳ್ಳಿಗಳ ದೇಶ. ಹಳ್ಳಿಗಳು ಇರುವವರೆಗೆ ಭಾರತವು ಜೀವಂತವಾಗಿರುತ್ತದೆ ಎಂಬ ಗಾಂಧಿಯವರ ಮಾತು ಯಥಾರ್ಥವೇ ಸರಿ! 'ಜಾಗತೀಕರಣ'ವೆಂದರೆ ಅದೊಂದು 'ಪೆಡಂಭೂತ'ವೆಂದು ಭಾವಿಸಬೇಕಾಗಿಲ್ಲ. ಭೂಮಿಯು ಒಂದು ಗೋಳವೆಂಬ (= ಗ್ಲೋಬ್) ಕಲ್ಪನೆ ಇತ್ತೀಚಿನದು. ಜ್ಞಾನ ಪುನರುಜ್ಜೀವನ ಅಥವಾ ರೆನೈಸಾನ್ಸ್ ಅವಧಿಯ ವೈಜ್ಞಾನಿಕ ಸಂಶೋಧನೆಗಳಿಂದ, ಸಮುದ್ರ ಮಾರ್ಗದ ಅನ್ವೇಷಣೆಗಳಿಂದ ಭೂಮಿಯ ಗೋಳಾಕಾರವು ಸಾಬೀತಾಯ್ತು. ಸ್ಥಳೀಯ ಮಟ್ಟಕ್ಕೆ ಸೀಮಿತವಾಗಿದ್ದು ಕಾಲ ದೇಶಗಳಿಗೆ ಬದ್ಧವಾದ ವಾಣಿಜ್ಯ ವ್ಯವಹಾರಗಳು ವಿಶ್ವಾತ್ಮಕ ನೆಲೆಗೇರಿದ್ದಲ್ಲದೆ ಕಾಲ-ದೇಶಗಳ ಪೊರೆ ಕಳಚಿಕೊಂಡು 'ವಿಶ್ವ ವ್ಯಾಪಾರ ಒಪ್ಪಂದ'ಕ್ಕೆ ಕಾರಣವಾದವು. ಖಚಿತವಾಗಿ ಹೇಳಬೇಕೆಂದರೆ ಮನುಕುಲದ ಉತ್ಪಾದನೆ ಮತ್ತು ವಿತರಣೆಯ ಚಟುವಟಿಕೆಗಳು ಸ್ಥಳೀಯ ಭೂಗೋಳದಿಂದ ವಿಶ್ವಗ್ರಾಮದವರೆಗೆ ವಿಸ್ತರಿಸಿಕೊಳ್ಳುತ್ತಿರುವ ಪ್ರಕ್ರಿಯೆಯನ್ನೇ 'ಜಾಗತೀಕರಣ' ಎನ್ನಬಹುದು. 'ಜಾಗತೀಕರಣ'ವನ್ನು ಇಪ್ಪತ್ತನೆ ಶತಮಾನದ ವಿದ್ಯಮಾನವೆಂಬಂತೆ ವ್ಯಾಖ್ಯಾನಿಸುವುದು 'ಸ್ಥಗಿತ' ಚಿಂತನೆಯಾಗುತ್ತದೆ. ಆಗಲೇ ಹೇಳಿದಂತೆ ಇದೊಂದು ಪ್ರಕ್ರಿಯಾತ್ಮಕವಾದ ಬೆಳವಣಿಗೆ. ಬಾಳಿನ ಚಲನೆಯಲ್ಲಿ ಅನಿವಾರ್ಯವಾಗಿ ಉತ್ತರಿಸಲೇ ಬೇಕಾದ ಹಳ್ಳಕ್ಕೆ ಇದನ್ನು ಹೋಲಿಸಬಹುದು. ಈ ಹಳ್ಳದ ನೀರಿನ ಸೆಳವಿನಲ್ಲಿ ನಾವು ಕೊಚ್ಚಿಕೊಂಡು ಹೋಗುವ ಕಸ ಕಡ್ಡಿಗಳಾಗಬಾರದು. 'ಹತ್ತು ಮೀನು'ಗಳಂತೆ ಎದುರಿಸುವ ಹೋರಾಟದ ಎದೆಗಾರಿಕೆ ಬೇಕು.

ಕಾಲಾನುಕ್ರಮಣಿಕೆಯನ್ನನುಸರಿಸಿ 'ಚರಿತ್ರೆ'ಯನ್ನು ತುಂಡು-ತುಂಡುಗಳನ್ನಾಗಿ (= ಪ್ರಾಚೀನ ಭಾರತದ ಇತಿಹಾಸ, ಮಧ್ಯಕಾಲೀನ ಭಾರತ, ಆಧುನಿಕ ಭಾರತ ಇತ್ಯಾದಿ) ಓದಿಕೊಳ್ಳುವವರಿಗೆ ನಿರಂತರ ಚಲನೆಯ ಒಳನೋಟಗಳು ಬೋಧೆಯಾಗುವುದಿಲ್ಲ. ಗುಹಾವಾಸಿಯೂ, ಅಲೆಮಾರಿಯೂ ಆಗಿದ್ದ ಆದಿಮಾನವನು ಬಗೆಬಗೆಯ ನಾಗರಿಕತೆಗಳೆಂಬ ಅವಸ್ಥಾಂತರದ ಪ್ರಕ್ರಿಯೆಗೊಳಗಾಗಿ ಹಳೆಶಿಲಾಯುಗ, ನವಶಿಲಾಯುಗ, ಲೋಹಯುಗ, ಪ್ಲಾಸ್ಟಿಕ್‌ಯುಗ ಇತ್ಯಾದಿ ಪೊರೆ ಕಳಚುತ್ತಾ ಪ್ರಸ್ತುತ ಸಿಲಿಕಾನ್ ಯುಗದಲ್ಲಿ ಬದುಕುತ್ತಿರುವುದನ್ನು ಕೂಡ ಜಾಗತೀಕರಣದ ಪ್ರಕ್ರಿಯೆಯಲ್ಲಿಟ್ಟೇ ನೋಡಬೇಕಾಗಿದೆ.

ಮನುಕುಲದ ಇಂಥ ಮಹಾಪ್ರಸ್ಥಾನವನ್ನು ಸಂಕ್ಷಿಪ್ತವಾಗಿ ವಿವರಿಸುವ ಅಲ್ವಿನ್ ಟಾಫ್ಲರ್ ಬರೆದ 'Third Wave' ಎಂಬ ಕೃತಿಯನ್ನಿಲ್ಲಿ ಸ್ಮರಿಸಬೇಕಾಗಿದೆ. ಆತ ಮನುಕುಲ ಬೆಳೆದುಬಂದ ಬಗೆ, ಪರಿವರ್ತನೆಯ ಮಹಾನ್ ಘಟ್ಟಗಳನ್ನು ವಿಮರ್ಶಿಸುತ್ತಾ ಮೂರು ಅಲೆಗಳಲ್ಲಿ ಸಂಸ್ಕೃತಿಯ ಚಲನೆಯನ್ನು ಗುರುತಿಸಿದ್ದಾನೆ. ೧. ಮೊದಲ ಅಲೆ; ಕೃಷೀಕರಣ ೨. ಎರಡನೆ ಅಲೆ; ಕೈಗಾರಿಕೀಕರಣ ೩. ಮೂರನೇ ಅಲೆ; ಇದನ್ನಾತ ಹೆಸರಿಸಿಲ್ಲ; ವಿಶ್ಲೇಷಿಸಿದ್ದಾನೆ.

ಪ್ರಸ್ತುತ ಅಲ್ವಿನ್ ಟಾಫ್ಲರ್ ಗುರುತಿಸಿರುವ ಮೂರು ಅಲೆಗಳಿಗೆ ಅನುಗುಣವಾಗಿ ವಿವಿಧ ದಿಕ್ಕುಗಳಿಂದ ಸಂಸ್ಕೃತಿಯ ಚಲನೆಯನ್ನು ಒಳಹೊಕ್ಕು ನೋಡುವುದನ್ನು ಪರಸ್ಪರ ಚರ್ಚಿಸೋಣ :

| | ಮೊದಲ ಅಲೆ | ಎರಡನೆ ಅಲೆ | ಮೂರನೆ ಅಲೆ |
|---|---|---|---|
| ೧. | ಕೃಷೀಕರಣ | ಕೈಗಾರಿಕೀಕರಣ | ಜಾಗತೀಕರಣ |
| ೨. | ಭೂಚರ ಮಾನವ | ದ್ವಿಚರ ಮಾನವ | ಖಚರ ಮಾನವ |
| ೩. | ನದಿದಂಡೆ ನಾಗರಿಕತೆಗಳು | ನೇರ ವಸಾಹತು ನಾಗರಿಕತೆಗಳು | ದೂರ ವಸಾಹತು ನಾಗರಿಕತೆಗಳು |
| ೪. | ಪ್ರಾಕೃತ ಶಕ್ತಿಗಳು | ಸಂಸ್ಕೃತ ಶಕ್ತಿಗಳು | ವಿಕೃತ ಶಕ್ತಿಗಳು |
| ೫. | ಪಂಚಭೂತಗಳೆಂಬ ಮೂಲವಸ್ತುಗಳು | ಅವು 'ಸಂಯುಕ್ತ ವಸ್ತು'ಗಳೆಂಬ ಗ್ರಹಿಕೆ | ಅವು 'ವಿಷವಸ್ತು'ಗಳಾಗುತ್ತಿರುವ ಸತ್ಯ |
| ೬. | ನಿರ್ ಮಾಲಿನ್ಯದ ಯುಗ | ಗೋಚರ ಮಾಲಿನ್ಯದಾರಂಭ | ಅಗೋಚರ ಮಾಲಿನ್ಯದೆಡೆಗೆ |
| ೭. | ಉತ್ಪಾದನೆ ಮತ್ತು ವಿತರಣೆಗಳಲ್ಲಿ ಕಾಲ-ದೇಶಗಳ ಅಂತರಕ್ಕೆ ಬದ್ಧವಾಗಿರುವುದು | ಕಾಲ-ದೇಶಗಳ ಅಂತರ ಮೀರುವುದು | ಕಾಲ-ದೇಶಗಳ ಅಂತರ ಇಲ್ಲವಾಗಿಸುವುದು |
| ೮. | ಸ್ಥಳೀಯ ಭೂಗೋಳ | ಅಂತರ್‌ರಾಷ್ಟ್ರೀಯತೆ | ವಿಶ್ವಗ್ರಾಮ |
| ೯. | ಇದ್ದೆಡೆಯಲ್ಲೆ ಇರುತ್ತಿದ್ದ ನಿಸರ್ಗ ಸಂಪತ್ತು | ಒಂದೆಡೆಯಿಂದ ಇನ್ನೊಂದೆಡೆಗೆ ನಿಸರ್ಗಸಂಪತ್ತಿನ ವರ್ಗಾವಣೆ | ದೂರದಲ್ಲಿದ್ದುಕೊಂಡೇ ನಿಸರ್ಗಸಂಪತ್ತಿನ ಮೇಲೆ ಆಧಿಪತ್ಯ |
| ೧೦. | ಫ್ಯೂಡಲಿಸಂ | ಕಲೋನಿಯಲಿಸಂ | ಕ್ಯಾಪಿಟಲಿಸಂ |
| ೧೧. | ಯಜಮಾನರು ಮತ್ತು ಗುಲಾಮರು | ಉಳ್ಳವರು ಮತ್ತು ಬಡವರು | ಶಕ್ತಿಮದೋನ್ಮತ್ತರು ಮತ್ತು ದುರ್ಬಲರು |

ಈ ಮೇಲಿನ ಮೂರೂ ವಿಭಾಗಗಳನ್ನು ಸೂಕ್ಷ್ಮವಾಗಿ ವಿವೇಚಿಸಿದರೆ ಮನುಕುಲವು ಬೆಳೆದುಬಂದ ಬಗೆ, ಸಂಸ್ಕೃತಿಯ ನಿರಂತರ ಚಲನೆ, ಪರಸ್ಪರ ವೈರುಧ್ಯಗಳು ಮತ್ತು ಪರಿವರ್ತನೆಯ ಮಹಾನ್‌ಘಟ್ಟಗಳು ಸುಸ್ಪಷ್ಟವಾಗಿ ಗೋಚರಿಸುತ್ತವೆ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ, ಒಂದು ಖಂಡದಿಂದ ಮತ್ತೊಂದು ಖಂಡಕ್ಕೆ, ಒಂದು ಗೋಳದಿಂದ ಮತ್ತೊಂದು ಗೋಳಕ್ಕೆ ಸದಾ ತುಡಿಯುತ್ತಾ ಬಂದಿರುವ ಮಾನವನ ಧೀಮಂತಿಕೆಯೂ ಇಲ್ಲಡಗಿದೆ. ವಾಸ್ತವವಾಗಿ ಪರಿಶೀಲಿಸಿದಲ್ಲಿ ಇದೆಲ್ಲವೂ ಜಾಗತೀಕರಣದ ವ್ಯಾಪ್ತಿಗೊಳಪಡುವ ಸಂಗತಿಗಳೇ ಆಗಿವೆ. ಆದ್ದರಿಂದ, 'ಜಾಗತೀಕರಣ'ವನ್ನು ವಿಶ್ವವಾಣಿಜ್ಯ ಪರಿಭಾಷೆಯನ್ನಾಗಿ ಮಾತ್ರ ನೋಡುವುದು 'ವಿಷಯಜ್ಞಾನ'ವನ್ನು ಸಂಕುಚಿತವಾಗಿಸುತ್ತದೆ. ಇದರಿಂದಾಗಿಯೇ 'ಜಾಗತೀಕರಣ'ದ ಪರ-ವಿರೋಧ ಅಥವಾ ಸರಿ-ತಪ್ಪು ಎಂಬ ಚರ್ಚೆಯಲ್ಲಿ ನನಗೆ ಆಸಕ್ತಿಯಿಲ್ಲ. ಬದಲಿಗೆ, ನಮ್ಮ ಬದುಕಿನ ಆರ್ಥಿಕ, ಸಾಮಾಜಿಕ, ರಾಜಕೀಯ, ಭೌಗೋಳಿಕ, ಧಾರ್ಮಿಕ, ಔದ್ಯೋಗಿಕ ಮತ್ತು ಔದ್ಯಮಿಕ ಸಂಗತಿಗಳೆಲ್ಲ 'ಜಾಗತೀಕರಣ'ವೆಂಬ ಮಹಾನ್ ಪ್ರಕ್ರಿಯೆಯಲ್ಲಿ ಹೇಗೆ ಬೆಸೆದುಕೊಂಡಿವೆಯೆಂಬುದನ್ನು ಕಂಡುಕೊಳ್ಳುವುದು ಮತ್ತು ಸ್ವಂತಿಕೆಗಾಗಿ ಶೋಧಿಸಿಕೊಳ್ಳುವುದು ಹೆಚ್ಚು ಉಪಯುಕ್ತವಾಗಬಹುದು.

**ವಸಾಹತೀಕರಣ ಮತ್ತು ನಿರ್‌ವಸಾಹತೀಕರಣ**

ನಮ್ಮ ದೇಶದಲ್ಲಿ ವಿದ್ಯಾರ್ಜನೆಯು ಕುಲೀನರಿಗೆ ಮೀಸಲಾಗಿತ್ತು. ಇಂಥ ವರ್ಣ ವ್ಯವಸ್ಥೆಯನ್ನು ಛಿದ್ರಿಸಿ ಉತ್ತಮ-ಮಧ್ಯಮ-ಅಧಮರೆಲ್ಲರಿಗೆ 'ಸಾರ್ವಜನಿಕ ಶಿಕ್ಷಣ'ದ ಅವಕಾಶ ಕಲ್ಪಿಸಿದ ಶ್ರೇಯಸ್ಸು ಕೂಡ 'ವಸಾಹತೀಕರಣ'ಕ್ಕೆ ಲಭಿಸುತ್ತದೆ. ವಸಾಹತು ಶಾಹಿಯನ್ನು ಒಳಗು ಮತ್ತು ಹೊರಗುಗಳೆರಡೂ ನೆಲೆಯಿಂದ ಕುವೆಂಪು 'ರೈತನ ದೃಷ್ಟಿ' ಎಂಬ ಕವಿತೆಯಲ್ಲಿ ನಿರೂಪಿಸಿದ್ದಾರೆ :

ಕತ್ತಿ ಪರದೇಸಿಯಾದರೆ ಮಾತ್ರ ನೋವೆ?
ನಮ್ಮವರೆ ಹದಹಾಕಿ ತಿವಿದರದು ಹೂವೆ?

'ಹೊರ ವಸಾಹತು' ಮತ್ತು 'ಒಳ ವಸಾಹತು' ಗಳೆರಡರ ವಿರುದ್ಧವೂ ವಿಚಾರ ಕ್ರಾಂತಿಯ ಆಹ್ವಾನ ಕೊಟ್ಟವರು ಕುವೆಂಪು. ಇದು ಅವರ ಸಾಹಿತ್ಯ ಸಮಸ್ತದಲ್ಲಿ ಹಾಸುಹೊಕ್ಕಾಗಿ ಮೂಡಿಬಂದಿದೆ. ಒಟ್ಟಿನಲ್ಲಿ 'ಆಂತರಿಕ ವಸಾಹತುಶಾಹಿ' ಮತ್ತು 'ಬಾಹ್ಯ ವಸಾಹತುಶಾಹಿ' ಗಳೆರಡರಿಂದ ಬಿಡುಗಡೆ ಪಡೆಯುವ ದಿಟ್ಟ ಆಲೋಚನಾ ಕ್ರಮವನ್ನೇ 'ನಿರ್ ವಸಾಹತೀಕರಣ' ಎಂದು ಕರೆಯಬಹುದು. ಇಂಥ ಪ್ರಕ್ರಿಯೆಯಲ್ಲಿ ವಸಾಹತೀಕರಣದ ಉತ್ತಮಾಂಶಗಳನ್ನು ಒಳಗೊಳ್ಳುವುದರ ಜೊತೆಗೆ, ವಸಾಹತೀಕರಣದ ವಿರುದ್ಧ ನಿಲ್ಲುವ ಸ್ವಂತಿಕೆಯ ಸ್ಥೈರ್ಯವನ್ನು ಗುರುತಿಸಬಹುದು. ಆದರೆ, 'ವಸಾಹತುಶಾಹಿ'ಯನ್ನು ಪರಮ ಶತ್ರುವೆಂಬಂತೆ ಭಾವಿಸುವ ಚಿಂತಕನು ಬದುಕಿನ ಸೂಕ್ಷ್ಮಾತಿಸೂಕ್ಷ್ಮಗಳಿಗೆ ಕುರುಡಾಗಿಬಿಡುತ್ತಾನೆ. ಏಕಪಕ್ಷೀಯ ವಿಚಾರ - ವಿಮರ್ಶೆ ಯಾರಿಗೂ ಒಳ್ಳೆಯದಲ್ಲ !

**ಜಾಗತೀಕರಣ ಮತ್ತು ನಿರ್‌ಜಾಗತೀಕರಣ**

'ವಸಾಹತೀಕರಣ'ಕ್ಕೂ 'ಕೈಗಾರಿಕೀಕರಣ'ಕ್ಕೂ ಜನ್ಯ- ಜನಕ ಸಂಬಂಧವಿರುವಂತೆಯೇ 'ನವ-ವಸಾಹತೀಕರಣ'ಕ್ಕೂ 'ಜಾಗತೀಕರಣ'ಕ್ಕೂ ಜನ್ಯ-ಜನಕ ಸಂಬಂಧವಿದೆ. ವಸಾಹತೀಕರಣದ ಪಾಠಗಳಿಗೆ ಚೆನ್ನಾಗಿ ಒಗ್ಗಿಹೋಗಿದ್ದ ನವ-ಭಾರತವು ಹಿಂದೆ ಮುಂದೆ ನೋಡದೆ ''ಕೈಗಾರಿಕೀಕರಣ ಅಥವಾ ಸರ್ವನಾಶ'' ಎಂಬ ಘೋಷ ವಾಕ್ಯವನ್ನು ವಿಧಾಯಕ ವೆಂದು ಭಾವಿಸಿಬಿಟ್ಟಿತು. ನಮ್ಮ ದೇಶದ ಕೃಷಿ ಪ್ರಾಧಾನ್ಯತೆಯನ್ನು ನಿಧಾನವಾಗಿ ಅರಿತುಕೊಳ್ಳುವ ಸಮಯಕ್ಕೆ ಸರಿಯಾಗಿ ಇದೀಗ ''ಜಾಗತೀಕರಣ ಅಥವಾ ಸರ್ವನಾಶ'' ಎಂಬ ಘೋಷ ವಾಕ್ಯ ಎಲ್ಲೆಡೆ ಗಟ್ಟಿಯಾಗಿ ಮೊಳಗುತ್ತಿದೆ. 'ಜಾಗತೀಕರಣ'ವನ್ನು ವಿರೋಧಿಸುವವರನ್ನು ಸಂಪ್ರದಾಯವಾದಿಗಳೆಂದೋ, ದೇಸೀಯವಾದಿಗಳೆಂದೋ ಕರೆಯುತ್ತಿರುವುದುಂಟು. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ವಸಾಹತೀಕರಣವು 'ಸಾರ್ವಜನಿಕ ಶಿಕ್ಷಣ'ದ ಸಂದೇಶವನ್ನೂ ಜೊತೆಯಲ್ಲಿ ತಂದಂತೆಯೇ ಜಾಗತೀಕರಣವು 'ವಿದ್ಯುನ್ಮಾನ ಶಿಕ್ಷಣ'ದ ಸಂದೇಶವನ್ನು ಬಿತ್ತರಿಸುತ್ತಿದೆ. ಇದನ್ನೊಪ್ಪದವರ ಆಲೋಚನಾ ಕ್ರಮವನ್ನು ಕಂಪ್ಯೂಟರ್ ಅನಕ್ಷರತೆ, ಕಂಪ್ಯೂಟರ್ ಅಸ್ಪೃಶ್ಯತೆ ಎಂದೆಲ್ಲಾ ಕರೆಯಲಾಗುತ್ತಿದೆ. ಅತ್ಯಾಧುನಿಕ ತಂತ್ರಜ್ಞಾನ ಮತ್ತು ಸಂವಹನ ವ್ಯವಸ್ಥೆಗಳಿಂದ 'ಗ್ರಾಮ'ವೊಂದನ್ನು ವಿಶ್ವಮಟ್ಟಕ್ಕೆ ಹಿಗ್ಗುವಂತೆಯೂ, 'ವಿಶ್ವ'ವನ್ನು ಗ್ರಾಮ ಮಟ್ಟಕ್ಕೆ ಕುಗ್ಗುವಂತೆಯೂ ಮಾಡಬಲ್ಲ ಹೈಟೆಕ್ ದೃಷ್ಟಿಯ ವಿಜೃಂಭಣೆ 'ಜಾಗತೀಕರಣ' ದಲ್ಲಿ ಕಂಡುಬರುತ್ತದೆ. ಇಡೀ ಭೂಗೋಳವೇ 'ಕರತಲಾಮಲಕ' (=ಅಂಗೈ ಮೇಲಣ ನೆಲ್ಲಿಕಾಯಿ) ಎಂಬ ಇಂಗಿತವಿಲ್ಲಿದೆ.

'ಪರಿಸರ ದರ್ಶನ' ವೆನ್ನಬಹುದಾದ ಗಾದೆಮಾತೊಂದು ಹೀಗಿದೆ: ಬೇರೆ ಬೇರೆ

**ಸಾಮಾನ್ಯರ ಸಂದರ್ಶನ**

## ರಸ್ತೆ ಬದಿಯ ಶಿಲ್ಪಿ ಅಯ್ಯಾದೊರೆ



ಶ್ರೀರಂಗಪಟ್ಟಣದ ರಂಗನಾಥ ಸ್ವಾಮಿ ದೇವಾಲಯದ ಎದುರು, ರಸ್ತೆ ಬದಿಯ ಕಾರ್ಯಾಗಾರದಲ್ಲಿ ಕಾರ್ಯನಿರತನಾಗಿರುವ ಯುವ ಶಿಲ್ಪಿಯನ್ನು ಕಾಣಬಹುದು. ಆತ ಅಯ್ಯಾದೊರೆ. ನೀವು ನೋಡುತ್ತಿದ್ದಂತೆ ಅಯ್ಯಾದೊರೆಯ ಉಳಿಯ ಮೊನೆಯಿಂದ ವಿಘ್ನ ನಿವಾರಕ ಗಣಪ ತನ್ನ ಡೊಳ್ಳುಹೊಟ್ಟೆ, ಸೊಂಡಿಲು, ಕಿರೀಟ, ಅಭಯ ಹಸ್ತಗಳ ಸಹಿತ ರೂಪು ತಳೆಯುತ್ತಾನೆ.

ಸುಮಾರು ಐವತ್ತರವತ್ತು ವರ್ಷಗಳ ಹಿಂದೆ, ಅಯ್ಯಾದೊರೆಯ ತಾತ ಸೇಲಮಿನಿಂದ ಕರ್ನಾಟಕದತ್ತ ಬಂದು ಶ್ರೀರಂಗಪಟ್ಟಣದಲ್ಲಿ ನೆಲೆನಿಂತ. ಆಗ ಅವರು ಬಳಪದ ಕಲ್ಲಿನಿಂದ ದೋಸೆ ತವೆಯನ್ನು ತಯಾರಿಸು ತ್ತಿದ್ದರು. ಅವುಗಳ ಬಳಕೆ ಕಡಿಮೆಯಾದ ನಂತರ ಬೇರೆ ಬೇರೆ ಕೆಲಸ ಮಾಡಿ ಜೀವಿಸಬೇಕಾಯಿತು.

ಆದರೂ ಬಳಪದ ಕಲ್ಲಿನ ಸಹವಾಸ ಬಿಟ್ಟು ಹೋಗಲಿಲ್ಲ. ಅಯ್ಯಾದೊರೆ ಸಣ್ಣ ಹುಡುಗನಾಗಿದ್ದಾಗ ಕಲ್ಲಿನಿಂದ ಗೊಂಬೆಗಳನ್ನು ಕೆತ್ತಲಾರಂಭಿಸಿದ. ಮುಂದೆ ಅದು ಜೀವನೋಪಾಯದ ವೃತ್ತಿಯಾಯಿತು. ದೀಪ, ಶಿವಲಿಂಗದಿಂದ ಪ್ರಾರಂಭಿಸಿ ಬೇರೆ ಬೇರೆ ದೇವತಾ ಶಿಲ್ಪಗಳನ್ನು ಕೊರೆಯುವುದನ್ನು ರೂಢಿಸಿಕೊಂಡ.

ಹೆಗ್ಗಡದೇವನ ಕೋಟೆಯಿಂದ ಬಳಪದಕಲ್ಲು ತರಿಸುತ್ತಾರೆ. ಕಪ್ಪು ಮತ್ತು ಬೂದಿ ಬಣ್ಣದ ಕಲ್ಲುಗಳು ದೊರಕುತ್ತವೆ. ಕಲ್ಲುಗಳ ಪ್ರಮಾಣಕ್ಕೆ ತಕ್ಕಂತೆ ಅತ್ಯಂತ ಸಣ್ಣ ಹಾಗೂ ಸುಮಾರು ದೊಡ್ಡ ಗಾತ್ರದ ಬಸವ, ಮಂಟಪ, ದೀಪ, ಶಿವಲಿಂಗ, ಗೌರಮ್ಮ, ಗಣಪ ಶಿಲ್ಪಗಳು ತಯಾರಾಗುತ್ತವೆ.

ರಂಗನಾಥನ ಆವರಣದಲ್ಲಿ ಶಿವನ ಬಳಗದವರದೇ ಮೇಲುಗೈ!

ಪ್ರತಿದಿನ ಸಾವಿರಾರು ಭಕ್ತಾದಿಗಳು ಬಂದು ಹೋಗುವ ಸ್ಥಳ. ಬೇರೆಯವರ ಸ್ಪರ್ಧೆ ಇಲ್ಲ. ಅಯ್ಯಾದೊರೆಗೆ ಕೈ ತುಂಬಾ ವ್ಯಾಪಾರವಾಗಬಹುದಲ್ಲವೆ?

''ಭಕ್ತಾದಿಗಳು ಬಹಳ ಚೌಕಾಶಿ ಮಾಡ್ತಾರೆ. ನಾವೂ ಮಾಡ್ತೀವಿ. ನಾವು ಹೇಳುವ ಬೆಲೆ ಅವರು ಕೊಡೋದಿಲ್ಲ. ಒಂದೊಂದು ದಿನ ಮನೆಗೆ ನೂರು ರೂಪಾಯಿ ಒಯ್ಯ ಬಹುದು. ಎರಡು ಮೂರು ದಿನ ಬೋಣಿಯೇ ಆಗದಿರಬಹುದು'' ಎನ್ನುತ್ತಾನೆ ಅಯ್ಯಾದೊರೆ.

''ಇಲ್ಲಿ ಮನೆ, ಬೇರೆ ಆಸ್ತಿ ಏನಾದರೂ ಉಂಟೋ!''

''ನನ್ನ ತಂದೆಯ ಕಾಲದಲ್ಲಿ ಮಾಡಿದ ಮನೆ. ಅದೂ ಗುಡಿಸಲು. ಅಷ್ಟೇ ಸಾರ್. ನನ್ನ ವೃತ್ತಿಯೇ ನನ್ನ ಆಸ್ತಿ''.

ದೇವಾಲಯದ ರಸ್ತೆಯಲ್ಲಿ ಎರಡು ಕಡೆ ಶಿಲ್ಪದ ಸಣ್ಣ ಅಂಗಡಿಗಳಿವೆ. ಮಾರಾಟದಲ್ಲಿ ಅಯ್ಯಾದೊರೆಯ ಅತ್ತೆ ನಾದಿನಿ, ಭಾವಮೈದುನ ಸಹಕರಿಸುತ್ತಾರೆ. ಅಯ್ಯಾದೊರೆ ಶ್ರೀರಂಗಪಟ್ಟಣದಲ್ಲಿಯೇ ಹುಟ್ಟಿ ಬೆಳೆದವನಾದರೂ ಸ್ವಂತ ಊರಿನ ಸಂಪರ್ಕ ಕಳೆದುಹೋಗಿಲ್ಲ.

ಬೆಳಗಿನ ಉಪಹಾರಕ್ಕೆಂದು ಮನೆಯಿಂದ ಕರೆ ಬರುತ್ತದೆ. ಅರ್ಧ ಕೊರೆದಿದ್ದ ಗಣಪತಿಯನ್ನು ಅಲ್ಲಿಯೇ ಬಿಟ್ಟು ಮನೆಯ ಕಡೆ ಹೊರಡುತ್ತಾನೆ ಅಯ್ಯಾದೊರೆ. ನನಗೂ ಉಪಹಾರದ ಆಮಂತ್ರಣ ನೀಡಲು ಮರೆಯುವುದಿಲ್ಲ. ಫೋಟೋ ಕಳಿಸಿಕೊಡಬೇಕೆಂದು ಎರಡೆರಡು ಬಾರಿ ನೆನಪು ಮಾಡಿ ಮನೆಯ ದಾರಿ ಹಿಡಿಯುತ್ತಾನೆ.

-ಕೆ. ಪಿ. ಸ್ವಾಮಿ

ಹುಲ್ಲುಗಾವಲುಗಳಲ್ಲಿ ಬೇರೆ ಬೇರೆ ಮಿಡಿತೆಗಳೂ, ಬೇರೆ ಬೇರೆ ಆಳದ ನೀರುಗಳಲ್ಲಿ ಬೇರೆ ಬೇರೆ ಮೀನುಗಳೂ, ಬೇರೆ ಬೇರೆ ಕಾಲ-ದೇಶಗಳಲ್ಲಿ ಬೇರೆ ಬೇರೆ ಕ್ರಿಯೆಗಳೂ ಕಂಡುಬರುತ್ತವೆ. ಈ ಪರಿಸರ ಗಾದೆಯನ್ನು ಅಪಮೌಲ್ಯಗೊಳಿಸುವಂತೆ 'ಜಾಗತೀಕರಣ'ವು ಎಲ್ಲ ಕಾಲ-ದೇಶಗಳಲ್ಲಿ ಒಂದೇ ರೀತಿಯ ಕ್ರಿಯೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿದೆ. ಸಾಕು ಪ್ರಾಣಿಗಳು ಮತ್ತು ಸಮ್ಮಿಶ್ರ ಹಾಗೂ ಕುಲಾಂತರಿ ಸಸ್ಯ ತಳಿಗಳನ್ನೊಳಗೊಂಡ ಏಕರೂಪಾತ್ಮಕ ಕೃಷಿ-ಸಂಸ್ಕೃತಿ ಇದಕ್ಕೊಂದು ಬಾಹ್ಯ ನಿದರ್ಶನವಾಗಿದೆ. ನರಭಕ್ಷಕರು ಮತ್ತು ನರಭಕ್ಷಣೆಯ ಪ್ರಸಂಗಗಳನ್ನು ಕುರಿತು ಮಾತನಾಡಿಕೊಳ್ಳುವಂತೆಯೇ ನಾವಿಂದು 'ಪರಿಸರ ಭಕ್ಷಕರು' (= ಇಕೋ-ಕ್ಯಾನಿಬಾಲಿಸಂ) ಮತ್ತು 'ಸಂಸ್ಕೃತಿಯ ಭಕ್ಷಕ'ರನ್ನು (ಕಲ್ಚರ್ ಕ್ಯಾನಿಬಾಲಿಸಂ) ಗುರುತಿಸಬೇಕಾಗಿದೆ. ಪೂರ್ವ ಕಾಲದಲ್ಲಿ ಗೋಮೇಧ, ಅಶ್ವಮೇಧ, ನರಮೇಧಗಳು ನಡೆಯುತ್ತಿದ್ದಂತೆಯೇ ಇಂದು 'ಸಂಸ್ಕೃತಿಮೇಧ'ವೇ ನಡೆಯುತ್ತಿದೆ. ಏಕರೂಪಾತ್ಮಕ ಸಂಸ್ಕೃತಿಯ ಅಧ್ವರ್ಯುಗಳಿಗೆ ಬಹುರೂಪಾತ್ಮಕ ಸಂಸ್ಕೃತಿಗಳು ಬಲಿಪಶುಗಳಾಗುತ್ತಿವೆ. ಗ್ಲೋಬಲ್ ಅಧ್ವರ್ಯುಗಳು, ಇಂಗ್ಲಿಷ್ ಭಾಷೆ, ಡಾಲರ್, ವ್ಯಾಪಾರಧರ್ಮ, ಕಂಪ್ಯೂಟರ್ ಮಂತ್ರ ಮತ್ತು ಜಗದೇಕ ಸ್ವಾಮ್ಯ- ಇವೆಲ್ಲ ಸೇರಿ ಹೊರ ಜಾಗತಿಕ ಶಕ್ತಿಗಳಾಗುತ್ತವೆ. ಅದೇ ರೀತಿ ಗ್ಲೋಕಲ್ ಅಧ್ವರ್ಯುಗಳು, ಸಂಸ್ಕೃತ ಭಾಷೆ, ರೂಪಾಯಿ, ಮತಧರ್ಮ, ರಾಮ ಮಂತ್ರ- ಮಂದಿರ ಮಂತ್ರ, ಏಕರೂಪ ಸಂಹಿತೆ-ಇವೆಲ್ಲ ಸೇರಿ ಒಳಜಾಗತಿಕ ಶಕ್ತಿಗಳಾಗುತ್ತವೆ. 'ಜಾಗತೀಕರಣ'ದ ಬೆನ್ನಿಗಂಟಿ ಅತ್ಯಾಧುನಿಕ ತಂತ್ರಜ್ಞಾನ ಮತ್ತು ಸಂವಹನ ವ್ಯವಸ್ಥೆಗಳು ಪ್ರಕಟಗೊಳ್ಳುತ್ತಿರುವ ಸಂದರ್ಭದಲ್ಲಿ, ಕನ್ನಡ ಸಂಸ್ಕೃತಿಯು ಏಕಕಾಲಕ್ಕೆ ಒಳಜಾಗತಿಕ ಮತ್ತು ಹೊರಜಾಗತಿಕ ಶಕ್ತಿಗಳ ಕುಯುಕ್ತಿಗೆ ಬಲಿಪಶುವಾಗದಂತೆ 'ನಿರ್ ಜಾಗತೀಕರಣ'ದೆಡೆಗೆ ಹೊಸ ಹೆಜ್ಜೆಗಳನ್ನಿಡಬೇಕಾಗಿದೆ.

### ವಿಶ್ವಶಾಂತಿ ಮತ್ತು ವಿಶ್ವಗ್ರಾಮ

ವಿಶ್ವ ಮೈತ್ರಿ ಭಾವ ಮತ್ತು ವಿಶ್ವ ಮಾನವ ಧರ್ಮಗಳು ತಂತಾನೆ ಪ್ರಕಟಗೊಳ್ಳುವ ವಿದ್ಯಮಾನವಲ್ಲ! ನಿರಂತರವಾದ ಶಿಕ್ಷಣ, ಸಂಘಟನೆ ಮತ್ತು ಹೋರಾಟಗಳಿಂದ ಮೂಡುವಂತಹುದು. ಕಾಲ-ದೇಶಗಳನ್ನು ಕೂಡಿಸಿದ 'ಇಂಧನದ ನೆಟ್‌ವರ್ಕ್' ವಸಾಹತೀಕರಣದ ಆಯುಧವಾಗಿದ್ದರೆ, ಕಾಲ-ದೇಶಗಳ ಆಯಾಮವನ್ನೇ ಅಳಿಸಿರುವ 'ಸೈಬರ್ ನೆಟ್‌ವರ್ಕ್' ಜಾಗತೀಕರಣದ ಆಯುಧವಾಗಿದೆ. ಇಂಧನದ ನೆಟ್‌ವರ್ಕ್ ಸಾಧಿಸಲಾಗದ 'ವಿಶ್ವಶಾಂತಿ'ಯನ್ನು, ಸೈಬರ್ ನೆಟ್‌ವರ್ಕ್ ಸಾಧಿಸಬಲ್ಲುದೆಂಬ ವಿಶ್ವಾಸ ಹಲವರಲ್ಲಿರುವುದರಿಂದಲೇ 'ವಿಶ್ವಗ್ರಾಮ'ದ ಮಾತಾಡುತ್ತಿದ್ದಾರೆ. ಇದೊಂದು ಹುಸಿ ಕಲ್ಪನೆ! ಪೆಟ್ರೋಲ್ ಸಾಧಿಸಲಾರದ್ದನ್ನು ಅಣುಶಕ್ತಿ ಸಾಧಿಸಬಲ್ಲುದೇ? - ಎಂಬ ಗುಮಾನಿಯನ್ನು ಲೋಹಿಯಾ ಬಹು ಹಿಂದೆಯೇ ವ್ಯಕ್ತಪಡಿಸಿದ್ದಾರೆ :

''....ಪ್ರಗತಿ ಹಾಗೂ ಸಮೃದ್ಧಿಯ ಕಲ್ಪನೆಗಳನ್ನು ಸುವ್ಯವಸ್ಥಿತವಾದ ವೈಜ್ಞಾನಿಕ ಪರೀಕ್ಷೆಗೆ ಗುರಿಪಡಿಸಿ ನೋಡಬೇಕಾದ್ದು ಅಗತ್ಯವಿದೆ. ವಿಜ್ಞಾನವು ಪ್ರಗತಿ, ಸಮೃದ್ಧಿಗಳನ್ನು ಸತತ ಅಭಿವೃದ್ಧಿಗೊಳ್ಳುತ್ತಲೇ ಹೋಗುವಂತೆ ಮಾಡಿದೆ. ವಿಜ್ಞಾನದಿಂದ ಮನುಷ್ಯ ಪ್ರಗತಿ, ಸಮೃದ್ಧಿಗಳನ್ನು ಈಗಾಗಲೇ ಸಾಕಷ್ಟು ಪಡೆದುಕೊಂಡಿದ್ದಾನೆ ಅಥವಾ ಇನ್ನೇನು ಇಷ್ಟರಲ್ಲೇ ಪಡೆಯಲಿದ್ದಾನೆ ಎಂಬಂಥ ಒಂದು ಮೂಢನಂಬಿಕೆ ನಮ್ಮಲ್ಲಿ ಬೆಳೆದುಕೊಳ್ಳಲು ಬಿಟ್ಟಿದ್ದೇವೆ. ಉಗಿಯೋ, ವಿದ್ಯುಚ್ಛಕ್ತಿಯೋ ಅಥವಾ ಪೆಟ್ರೋಲ್ ಎಣ್ಣೆಯೋ ಆರಂಭದಲ್ಲಿ ಏನನ್ನು ಸಾಧಿಸುತ್ತದೆ ಎಂದು ಊಹಿಸಲಾಗಿತ್ತೋ ಅಂಥದನ್ನು ಅವು ಸಾಧಿಸದೆ ಹೋಗಿದ್ದಾಗ ಅಣುಶಕ್ತಿಯ ಬಗ್ಗೆ ಈಗ ಮತ್ತೆ ಅಂಥದೇ ಊಹೆಗಳನ್ನು ಮಾಡಿಕೊಳ್ಳಲು ಎಲ್ಲಿಂದ ವಿಶ್ವಾಸ ಬಂದೀತು?''

(-ಇಂಡಿಯಾದ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆ)

### ಗ್ಲೋಬಲ್ ಮತ್ತು ಗ್ಲೋಕಲ್ ಸೈಬರ್ ವ್ಯವಸ್ಥೆ

ಮಾನವನ ಮಿದುಳಿಗೆ ಸಹಜವಾಗಿರುವ 'ಚಿತ್ರನಿರ್ಮಾಣ' ಶಕ್ತಿಯನ್ನು ಮೌಖಿಕ ಪರಂಪರೆಯ ಕಥನಗಳು (= ಜನಪದ ಕತೆಗಳು, ಐತಿಹ್ಯಗಳು, ದಂತಕತೆಗಳು, ಸ್ಥಳ ಪುರಾಣಗಳು, ಅನುಭವಗಳು, ಮಾತುಕತೆಗಳು, ಗಾದೆ-ಒಗಟು-ನಗೆ ಹನಿಗಳು ಇತ್ಯಾದಿ) ಹೇಗೆ ಹೆಚ್ಚಿಸಬಲ್ಲವೆಂಬುದು ಎಲ್ಲರಿಗೂ ತಿಳಿದಿದೆ. ಈ ದೃಷ್ಟಿಯಿಂದ ಜಾನಪದ ಜಗತ್ತಿನ ರಮ್ಯಾದ್ಭುತ ಲೋಕದಂತೆಯೇ ಕಲಿಯದವರಿಗೂ ಕಾಮಧೇನುವಾದ 'ಗದುಗಿನ ಭಾರತ'ವೂ ಬಹುಮುಖ್ಯ ಪಾತ್ರ ವಹಿಸಿದೆ. ಇದರೊಂದಿಗೆ ಸಾರ್ವವರ್ಣಿಕವೆನ್ನಬಹುದಾದ ಜಾನಪದ ಕಲಾ ಪ್ರಕಾರಗಳ ದೃಶ್ಯವೈಭವವೂ ಮಾನವ ಮನಸ್ಸಿನ 'ಚಿತ್ರನಿರ್ಮಾಣ' ಶಕ್ತಿಯನ್ನು ಸಮೃದ್ಧವಾಗಿ ಪೋಷಿಸುತ್ತಾ ಬಂದಿದೆ. ಇಂಥ ಸಹಜ ಸಂಸ್ಕಾರ ಮತ್ತು ಅಭಿರುಚಿಗಳ ಮೇಲೆ ಇಂದು ಜಾಗತಿಕ ವಿದ್ಯುನ್ಮಾನ ಮಾಧ್ಯಮಗಳು ಬಿತ್ತರಿಸುತ್ತಿರುವ 'ಸಿದ್ಧ ಚಿತ್ರ'ಗಳು ಧಾಳಿಯಿಡುತ್ತಿವೆ. ಪೂರ್ವಸಿದ್ಧ ಅಥವಾ ಸದ್ಯೋಜಾತ ವಿದ್ಯುನ್ಮಾನ ಚಿತ್ರಗಳು (=ವಿದೇಶಿಯಿರಲಿ, ಸ್ವದೇಶಿಯಿರಲಿ!) ಒಟ್ಟು ಪರಿಣಾಮದಲ್ಲಿ ಮಾನವ ಮನಸ್ಸಿನ ಸಹಜ ಚಿತ್ರ ನಿರ್ಮಾಣ ಶಕ್ತಿಯನ್ನು ನಿಷ್ಕ್ರಿಯಗೊಳಿಸುತ್ತವೆ.

'ಚಿತ್ರನಿರ್ಮಾಣ' ಕ್ಕೆ ಸಂಬಂಧಪಟ್ಟಂತೆ ಇಲ್ಲಿ ನೀಡಿರುವ ವಿವರಣೆಯನ್ನು 'ವಸ್ತು' ಉತ್ಪಾದನೆ ಮತ್ತು ವಿಚಾರ ಶಕ್ತಿಯ ಕ್ಷೇತ್ರಗಳಿಗೂ ಅನ್ವಯಿಸಿಕೊಳ್ಳಬೇಕಾಗಿದೆ. ಜಾಗತಿಕ ಜಾಲವುಳ್ಳ ವಸ್ತುಗಳ ಉತ್ಪಾದನೆ ಮತ್ತು ವಿತರಣೆಗಳು ಸ್ಥಳೀಯ ವಸ್ತುಗಳ ಉತ್ಪಾದನೆ ಮತ್ತು ವಿತರಣೆಗಳ ಮೇಲೆ ದುಷ್ಪಭಾವ ಬೀರುತ್ತವೆ. ನಮ್ಮ ರೈತರು ಉತ್ಪಾದಿಸುವ ಎಳನೀರು ಮತ್ತು ಹಾಲಿಗಿಂತಲೂ ಅಧಿಕ ಬೆಲೆಯುಳ್ಳ ಪೆಪ್ಸಿಕೋಲಾ, ಬಿಸ್ಲೇರಿ ಮುಂತಾದ ಪೇಯಗಳನ್ನು ಈ ದೃಷ್ಟಿಯಿಂದಲೂ ವಿಮರ್ಶಿಸಬೇಕಾಗಿದೆ. ಡಾಲರ್ ದೇಶಗಳಲ್ಲಿ ನಿಷೇಧಕ್ಕೊಳಗಾಗಿರುವ ವಸ್ತುಗಳು (= ಕ್ರಿಮಿನಾಶಕಗಳು, ಔಷಧಿಗಳು) ಡಾಲರೇತರ ದೇಶಗಳಲ್ಲಿ ವಿಜೃಂಭಿಸುತ್ತಿರುವುದು ಹೇಗೆ ಸಾಧ್ಯ?

ಇನ್ನು ವಿಚಾರ ಶಕ್ತಿಯ ಮಾತು : ಜಾಗತಿಕ ಸುದ್ದಿ ಸಂಸ್ಥೆಗಳು ಮತ್ತು ಜಾಗತಿಕ ಬುದ್ಧಿ ಸಂಸ್ಥೆಗಳು ವಿಚಾರ ಶಕ್ತಿಯ ಗುತ್ತಿಗೆ ಹಿಡಿದವರಂತೆ ವರ್ತಿಸುತ್ತಿವೆ. ಅಂತರರಾಷ್ಟ್ರೀಯ ಕಳ್ಳವಿಜ್ಞಾನಿಗಳು ಮತ್ತು ಬುದ್ಧಿ ಜೀವಿಗಳು ಇವುಗಳ ಏಜೆಂಟರಾಗಿದ್ದಾರೆ. ನಮ್ಮ ಬದುಕಿನ ವಸ್ತು ವಿಷಯಗಳೆಲ್ಲವನ್ನು ಜಾಗತಿಕ ದೃಷ್ಟಿಯ ಸುಲೋಚನಗಳಿಂದಲೇ ನೋಡುವುದು ಉಚಿತವಲ್ಲ. ನಮ್ಮ ದೇಶದ ಸಾಮುದಾಯಿಕ ಬದುಕು ಮತ್ತು ನಿಸರ್ಗದ ನಿಕಟಮೈತ್ರಿಯೇ ಸಕಲ ವಸ್ತುವಿಷಯಗಳನ್ನು ಹೇಗೆ ಗ್ರಹಿಸಬೇಕೆಂಬ ದರ್ಶನವನ್ನು ನೀಡಬಲ್ಲುದು. ಒಟ್ಟಿನಲ್ಲಿ, ಜಾಗತೀಕರಣದ ಪ್ರಕ್ರಿಯೆಯಿಂದ ಬೇರ್ಪಡಿಸಲಾಗದ ಏಕರೂಪಾತ್ಮಕ ಕೃಷಿ ಮತ್ತು ಸಂಸ್ಕೃತಿ ಉತ್ಪಾದನೆಗಳ ವಿಸ್ತೃತ ಜಾಲವು ನಿಸರ್ಗ ಸಹಜವಾದ ಬಹುರೂಪತೆಗೆ ಮಾರಕವಾಗಿರುವುದು ಸುಸ್ಪಷ್ಟವಾಗಿದೆ.

ಆಗಲೆ ಹೇಳಿದಂತೆ ಚಿತ್ರ ನಿರ್ಮಾಣಶಕ್ತಿ, ವಸ್ತುಗಳ ಉತ್ಪಾದನೆ, ವಿಚಾರ ಶಕ್ತಿಗಳಿಗೆ ಸಂಬಂಧಪಟ್ಟ ಹಾಗೆ ಮನುಷ್ಯರಲ್ಲಿರುವ ಸಹಜ 'ಉತ್ಪಾದಕ' ಶಕ್ತಿಯನ್ನು ಕುಂಠಿತಗೊಳಿಸಿ, ಸಮಸ್ತ ಮಾನವ ಜನಪದವನ್ನು ಜಡಬುದ್ಧಿಯ 'ಗ್ರಾಹಕ'ರನ್ನಾಗಿ ಪರಿವರ್ತಿಸುವ ಉದ್ದೇಶ ಗ್ಲೋಬಲ್ ಮತ್ತು ಗ್ಲೋಕಲ್ ವಿದ್ಯುನ್ಮಾನ ಮಾಧ್ಯಮಗಳಲ್ಲಿದೆ. 'ಉತ್ಪಾದಕ'ರಾಗಿದ್ದವರನ್ನು ಕೇವಲ 'ಗ್ರಾಹಕ'ರನ್ನಾಗಿ ಪರಿವರ್ತಿಸುವ ಬಗೆಯಲ್ಲಿ ಯಥಾ ಸ್ವೇಚ್ಛೆಯನ್ನು ಇಲ್ಲವಾಗಿಸುವ ಕುಯುಕ್ತಿಯಿದೆ. ಮಾನವ ಜನಪದದ ಪಂಚೇಂದ್ರಿಯಗಳನ್ನು ದೂರ ನಿಯಂತ್ರಣಕ್ಕೊಳಪಡಿಸುವ ಮೋಹಕ ಮಾಯೆಯಿದು. ಏನನ್ನು ತಿನ್ನಬೇಕು, ಏನನ್ನು ನೋಡಬೇಕು, ಏನನ್ನು ಕೇಳಬೇಕು ಎಂಬಿತ್ಯಾದಿಗಳು ನಮ್ಮ ಆಯ್ಕೆಯಾಗದ ಏಕರೂಪಾತ್ಮಕ ಜೀವನ ಶೈಲಿಯತ್ತ ಕರೆದೊಯ್ಯುವ ಹುನ್ನಾರವಿಲ್ಲಿದೆ.

'ಜಾಗತೀಕರಣ'ದ ಬಗೆಗಿನ ನಿಷ್ಠೆಯನ್ನೆ 'ಭಕ್ತಿ' ಎಂದು ಭಾವಿಸಿ ಈ ವಚನವನ್ನು ಓದಿಕೊಂಡರೆ ಹೊಸ ಒಳ ನೋಟಗಳು ಸಾಧ್ಯವಾಗುತ್ತದೆ :

ಭಕ್ತಿಯೆಂಬುದು ಮಾಡಬರದು!
ಗರಗಸದಂತೆ ಹೋಗುತ್ತ ಕೊರೆವುದು,
ಬರುತ್ತ ಕೊಯ್ವುದು.
ಘಟಸರ್ಪನಲ್ಲಿ ಕೈದುಡುಕಿದರೆ
ಹಿಡಿಯದೆ ಮಾಬುದೆ ಕೂಡಲಸಂಗಮದೇವ.

'ಹಾವಿನ ಹೆಡೆ' ಎಷ್ಟು ಮೋಹಕವೋ 'ಹಾವಿನ ಬಾಯ ಹಲ್ಲು' ಅಷ್ಟೇ ಮಾರಕ! ಇದನ್ನು ಯಥಾವತ್ತಾಗಿ 'ಜಾಗತೀಕರಣ'ಕ್ಕೆ ಅನ್ವಯಿಸಿಕೊಳ್ಳಬೇಕು. ಜಾಗತೀಕರಣದ ಪ್ರಕ್ರಿಯೆಯಿಂದ ಬೇರ್ಪಡಿಸಲಾಗದ ಅತ್ಯಾಧುನಿಕ ತಂತ್ರಜ್ಞಾನ ಮತ್ತು ಸಂವಹನ ವ್ಯವಸ್ಥೆಗಳು 'ಹಾವಿನ ಹೆಡೆ'ಯಂತೆ ಮೋಹಕವಾಗಿದ್ದರೆ, ಏಕರೂಪಾತ್ಮಕ ಕೃಷಿ ಮತ್ತು ಸಂಸ್ಕೃತಿಯ ಉತ್ಪಾದನೆಗಳು ಹಾವಿನ ಬಾಯ ಹಲ್ಲಿನಂತೆ ಮಾರಕವಾಗಿದೆ: ''ಹಾವಿನ ಬಾಯ ಹಲ್ಲು ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ'' - ಎಂಬ ಅಕ್ಕಮಹಾದೇವಿಯ ವಚನದಲ್ಲಿ 'ಜಾಗತೀಕರಣ ಮತ್ತು ಭಾರತ'ದ ಸಂಬಂಧಗಳನ್ನು ಕುರಿತು ಸ್ವಂತ ಎಚ್ಚರದ ಸಂದೇಶವನ್ನೂ ಕಂಡುಕೊಳ್ಳಬಹುದು.

ಎ. ಚಂದ್ರಶೇಖರ ನಂಗಲಿ
೩೮೮೪, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧.

# ಹೆಪಟೈಟಿಸ್-ಬಿ

ಡಾ|| ಡಿ. ಕೆ. ಮಹಾಬಲರಾಜು

**ವೈದ್ಯಕೀಯ ಪರಿಭಾಷೆಯಲ್ಲಿ ''ಹೆಪಟೈಟಿಸ್'' ಎಂದರೆ ಯಕೃತ್‌ನ ಉರಿಯೂತ ಎಂದು ಅರ್ಥ. ಮದ್ಯ, ಔಷಧಿ ಮತ್ತು ಹಲವಾರು ರಾಸಾಯನಿಕಗಳಿಂದ ಯಕೃತ್ ಉರಿಯೂತಕ್ಕೊಳಗಾಗುತ್ತದೆ. ಹಳದಿಜ್ವರ, ಎಪ್‌ಸ್ಟಿನ್‌ಬಾರ್, ಸೈಟೋಮೆಗಲೊ, ರುಬೆಲ, ಅಡಿನೋ, ಎನ್‌ಥಿರೊ, ಹೆಪಟೈಟಿಸ್ ಮುಂತಾದ ವೈರಸ್‌ಗಳ ಸೋಂಕಿನಿಂದಲೂ ಯಕೃತ್ ಉರಿಯೂತಕ್ಕೊಳಗಾಗುತ್ತದೆ. ಯಕೃತ್ತಿನ ಉರಿಯೂತದ ಪ್ರತಿಫಲವಾಗಿ ಜಾಂಡೀಸ್ (ಕಾಮಾಲೆ) ಉಂಟಾಗುತ್ತದೆ.**

ಆದಾಗ್ಯೂ ಯಕೃತ್‌ನ ಮೇಲೆಯೇ ಬ್ರಹ್ಮಾಸ್ತ್ರ ಬೀರುತ್ತ ಅದರ ಕಾರ್ಯಕ್ಷಮತೆಯನ್ನು ಹಾಳುಗೆಡಹುವ ಗುಣ ಹೊಂದಿದ ಕೆಲ ವೈರಸ್‌ಗಳನ್ನು ಮಾತ್ರ ಹೈಪಟೈಟಿಸ್ ವೈರಸ್‌ಗಳೆಂದು ಪರಿಗಣಿಸಲಾಗಿದೆ. ಇವುಗಳಲ್ಲಿಯೇ ಎ,ಬಿ,ಸಿ,ಡಿ,ಇ ಮತ್ತು ಜಿ ಎಂಬ ಆರು ವಿಧದವನ್ನು ಗುರುತಿಸಲಾಗಿದೆ. ಇವುಗಳಲ್ಲಿ ಎ ಮತ್ತು ಇ ಜಾತಿಯ ವೈರಸ್‌ಗಳು ಕಲುಷಿತಗೊಂಡ ಆಹಾರ ಮತ್ತು ನೀರು ಸೇವನೆಯೊಂದಿಗೆ ನಮ್ಮ ದೇಹ ಸೇರುತ್ತವೆ. ಉಳಿದವು ಏಯ್ಡ್ಸ್‌ನಂತೆಯೇ ರಕ್ತ ಹಾಗೂ ಲೈಂಗಿಕ ಸಂಪರ್ಕದಿಂದ ಪ್ರಸರಣಗೊಳ್ಳುತ್ತವೆ. ಇವುಗಳಲ್ಲಿ ಈಗ ನಮ್ಮನ್ನು ಸಮಸ್ಯಾತ್ಮಕವಾಗಿ ಕಾಡುತ್ತಿರುವುದೇ ೧೯೬೬ರಲ್ಲಿ ಪತ್ತೆಯಾದ ''ಹೆಪಟೈಟಿಸ್-ಬಿ'' ಎನ್ನುವ ವೈರಸ್.

ವಿಶ್ವದಲ್ಲಿ ಎರಡು ಸಾವಿರ ಮಿಲಿಯನ್ ಜನರಿಗೆ ಹೆಪಟೈಟಿಸ್-ಬಿ ಸೋಂಕು ತಗಲಿದೆ ಎಂದು ಅಂದಾಜು ಮಾಡಲಾಗಿದೆ. ರೋಗದಿಂದ ಚೇತರಿಸಿಕೊಂಡರೂ ಇತರರಿಗೆ ವೈರಸ್ ಅಂಟಿಸುವ ವಾಹಕರಾಗಿರುವವರ ಸಂಖ್ಯೆಯೇ ನಲವತ್ತು ಕೋಟಿ ಅಂತೆ. ಸೋಂಕಿನ ಕಾರಣದಿಂದಾಗಿ ಉಂಟಾಗುವ ಯಕೃತ್ ಕ್ಯಾನ್ಸರ್‌ಗೆ ಬಲಿಯಾದವರ ಸಂಖ್ಯೆ ಸಣ್ಣದೇನಲ್ಲ, ಇದು ಏಳು ಕೋಟಿ.

ಹೆಪಟೈಟಿಸ್-ಬಿ ಸೋಂಕಿಗೆ ತುತ್ತಾಗಿರುವ ದೇಶಗಳಲ್ಲಿ ಭಾರತಕ್ಕೆ ದ್ವಿತೀಯ ಸ್ಥಾನವಿದೆ. ಚೀನ ಪ್ರಥಮ ಸ್ಥಾನವನ್ನು ಅಲಂಕರಿಸಿದೆ. ನಮ್ಮ ದೇಶದಲ್ಲಿ ಪ್ರತಿವರ್ಷ ಇಪ್ಪತ್ತು ಲಕ್ಷ ಜನರಿಗೆ ಸೋಂಕು ಅಂಟುತ್ತಿದೆ. ದೇಹದಲ್ಲಿ ರೋಗಾಣುಗಳನ್ನು ಹೊತ್ತುಕೊಂಡಿರುವ ವಾಹಕರ ಸಂಖ್ಯೆಯೇ ನಾಲ್ಕು ಕೋಟಿ ಮೀರುತ್ತದೆ. ಕನಿಷ್ಠ ೮-೯ ಲಕ್ಷ ಜನರಾದರೂ ಯಕೃತ್ತಿನ ಕ್ಯಾನ್ಸರ್‌ನಿಂದ ಅಸುನೀಗುತ್ತಿದ್ದಾರೆ.

ಹೆಪಟೈಟಿಸ್ ಸೋಂಕು ಇಷ್ಟು ಬಿರುಸಾಗಿ ಹರಡುತ್ತಿದ್ದರೂ, ಸೋಂಕಿಗೆ ಗುರಿಯಾದವರಲ್ಲಿ ಶೇಕಡಾ ೯೦ರಷ್ಟು ಜನರು, ಕೆಲ ತಿಂಗಳ ಬವಣೆಯನ್ನನುಭವಿಸಿ ಸಂಪೂರ್ಣ ಗುಣಮುಖರಾಗುತ್ತಾರೆ. ಅಷ್ಟೇ ಅಲ್ಲ, ಸೋಂಕಿನ ಪ್ರಚೋದನೆಯಿಂದ ಇವರ ರಕ್ತದಲ್ಲಿ ಮೂಡುವ ರೋಗ ನಿರೋಧಕ ಶಕ್ತಿ (ಆಂಟಿಬಾಡಿ) ಇವರನ್ನು ಜೀವನ ಪರ್ಯಂತ ಹೆಪಟೈಟಿಸ್ - ಬಿ ಸೋಂಕಿನಿಂದ ರಕ್ಷಿಸುತ್ತದೆ. ಉಳಿದ (ಶೇಕಡಾ ೧೦) ಜನರು ಕಾಯಿಲೆಯಿಂದ ಸಂಪೂರ್ಣವಾಗಿ ಗುಣಮುಖರಾದರೂ ಅವರ ರಕ್ತದಲ್ಲಿ ವೈರಸ್‌ಗಳು ಜೀವಂತವಾಗಿ ವೃದ್ಧಿಗೊಳ್ಳುತ್ತಿರುತ್ತವೆ. ಹೀಗಾಗಿ ಇವರು ಜೀವನ ಪರ್ಯಂತ ರೋಗಾಣುಗಳ ಆಗರವಾಗಿ ರೋಗ ಹರಡುವ ಕೈಂಕರ್ಯ ಕೈಗೊಂಡಿರುತ್ತಾರೆ. ಪಾಪ, ಅವರಿಗೂ ಈ ವಿಷಯ ಗೊತ್ತೇ ಇರುವುದಿಲ್ಲ. ಇಂತಹ ವ್ಯಕ್ತಿಗಳನ್ನು ವೈದ್ಯಲೋಕ ''ರೋಗವಾಹಕರು'' ಎಂದು ಕರೆಯುತ್ತಿದೆ.

ಹೃದಯ, ಶ್ವಾಸಕೋಶ, ಮೆದುಳು, ಮೂತ್ರಪಿಂಡಗಳಂತೆಯೇ ಯಕೃತ್ ಕೂಡ ಮಾನವನ ಜೀವಂತಿಕೆಗೆ ಅತ್ಯಗತ್ಯವಾದ ಅಂಗ. ಕ್ಯಾನ್ಸರ್‌ಜನ್ಯ ಗುಣವನ್ನು ಮೈಗೂಡಿಸಿಕೊಂಡಿರುವ ಹೆಪಟೈಟಿಸ್-ಬಿ ವೈರಸ್, ದೇಹದಲ್ಲಿ ಬೆಳೆ ಬೆಳೆಯುತ್ತಿದ್ದಂತೆಯೇ ಯಕೃತ್‌ನಲ್ಲಿ ಕ್ಯಾನ್ಸರ್ ಉಂಟುಮಾಡುತ್ತದೆ. ಪರಿಸ್ಥಿತಿ ಚಿಂತಾಜನಕವಾಗುವವರೆಗೂ ರೋಗಿಗೆ ಇದು ಗೊತ್ತಾಗದು. ಹೀಗಾಗಿ ಹೆಪಟೈಟಿಸ್-ಬಿ ಸೋಂಕನ್ನು ''ಮೌನ ವಂಚಕ ಕೊಲೆಗಾರ'' ಎಂದು ವರ್ಣಿಸಲಾಗಿದೆ.

**ಸೋಂಕಿನ ಮೂಲ:** ಮಾನವನನ್ನು ಹೊರತುಪಡಿಸಿ ಇನ್ನಾವ ಪ್ರಾಣಿಗಳಲ್ಲೂ ಈ ಸೋಂಕು ಕಂಡಿಲ್ಲ. ಹೀಗಾಗಿ ವೈರಸ್‌ಗಳ ಮೂಲ ಹೆಪಟೈಟಿಸ್-ಬಿ ಸೋಂಕಿಗೊಳಗಾದ, ಇಲ್ಲವೇ ರೋಗವಾಹಕವಾದ ಮಾನವ ಮಾತ್ರ. ಇವರ ರಕ್ತ ಹಾಗೂ ಲೈಂಗಿಕ ದ್ರವದಲ್ಲಿ ವೈರಸ್‌ಗಳ ದಂಡೇ ಮೇಳೈಸಿರುತ್ತದೆ. ಜೊಲ್ಲು, ಮೂತ್ರ, ಎದೆಹಾಲಿನಲ್ಲಿಯೂ ವೈರಸ್ ಗಳಿರುವುದು ಕಂಡುಬಂದಿದೆ. ರೋಗವಾಹಕರ ರಕ್ತದಲ್ಲಿ (ಹೆಪಟೈಟಿಸ್ ಪಾಸಿಟೀವ್) ಹೆಚ್.ಬಿ.ಎಸ್.ಎ.ಜಿ. ಎಂಬ ವೈರಸ್ ಅಂಶವಿರುತ್ತದೆ.

**ಸೋಂಕು ಹರಡುವ ಹಾದಿಗಳು:** ರಕ್ತ ಸಂಪರ್ಕ, ಲೈಂಗಿಕ ಸಂಪರ್ಕ ಹಾಗೂ ಸೋಂಕು ಪೀಡಿತ ಗರ್ಭಿಣಿಯಿಂದ ಮಗುವಿಗೆ, ಹೀಗೆ ಮೂರು ಮುಖ್ಯವಾದ ಹಾದಿಗಳಲ್ಲಿ ಸಾಗಿಬರುವ ವೈರಸ್ ಆರೋಗ್ಯವಂತನನ್ನು ಬಿಡದೆ ಅಂಟಿಕೊಳ್ಳುತ್ತದೆ.

ಹೆಪಟೈಟಿಸ್-ಬಿ ಸೋಂಕಿನ ಮುಖ್ಯ ಹೆಬ್ಬಾಗಿಲೇ ರಕ್ತ. ಸೋಂಕಿಗೊಳಗಾದವರ ರಕ್ತ ಸ್ವೀಕರಿಸಿದಾಗ ಇಲ್ಲವೆ ಅವರ ಮೇಲೆ ಬಳಸಲಾದ ಹರಿತ ಉಪಕರಣಗಳನ್ನು ವೈಜ್ಞಾನಿಕ ರೀತಿ ಶುದ್ಧೀಕರಿಸದೆ ಆರೋಗ್ಯವಂತರ ಮೇಲೆ ಬಳಸುವುದರಿಂದ ಸೋಂಕು ಸುಲಭವಾಗಿ ಹಸ್ತಾಂತರ ಗೊಳ್ಳುತ್ತದೆ. ಏಯ್ಡ್ಸ್ ಸೋಂಕು ತಗಲಲು ಕನಿಷ್ಠ ೦.೧ ಮಿ.ಲೀ. ರಕ್ತ ಅಗತ್ಯವಾದರೆ, ಹೆಪಟೈಟಿಸ್ ಬಿ ಸೋಂಕಿಗೆ ಕೇವಲ ೦.೦೦೦೦೧ ಮಿ.ಲೀ. ರಕ್ತ ಸಾಕು. ಅಂದಮೇಲೆ ಸೋಂಕಿನ ತೀಕ್ಷ್ಣತೆ ಎಂತಹವರಿಗಾದರೂ ಗಾಬರಿ ತರುವಂತಹದ್ದೇ.

ಅಚ್ಚೆ ಹಾಕುವುದು, ಕಿವಿ, ಮೂಗು ಚುಚ್ಚುವುದು, ಸುನ್ನತಿ, ಕ್ಷೌರದ ಬ್ಲೇಡ್, ಉಗುರು ಕತ್ತರಿಸುವುದು ಈ ಎಲ್ಲ ಕಾರ್ಯಕ್ಕೆ ಬಳಸುವ ಹರಿತ ಉಪಕರಣಗಳು ಹೆಪಟೈಟಿಸ್ ಸೋಂಕಿನ ವರಿಗೆ ಬಳಸಿದ್ದೇ ಆಗಿದ್ದಲ್ಲಿ, ಇದರಿಂದ ಸೋಂಕು ತಗಲುವುದು ತಡವಾಗುವುದಿಲ್ಲ. ವೈದ್ಯಕೀಯ ಚಿಕಿತ್ಸೆಯಲ್ಲಿ ಬಳಸುವ ಇಂಜೆಕ್ಷನ್ ಸೂಜಿ, ಆಕ್ಯುಪಂಚರ್ ಸೂಜಿ, ಹಲ್ಲು ಕೀಳುವ ಉಪಕರಣ, ಶಸ್ತ್ರಚಿಕಿತ್ಸಾ ಸಲಕರಣೆ, ಸರಿಯಾಗಿ ಶುದ್ಧವಾಗಿರದಿದ್ದರೆ ಹೆಪಟೈಟಿಸ್ ಸೋಂಕು ತಗಲುವ ಭೀತಿ ತಪ್ಪಿದ್ದಲ್ಲ.

ರೋಗಿಗಳ ರಕ್ತದೊಡನಾಟಕ್ಕೆ ಸುಲಭವಾಗಿ ಒಳಗಾಗುವ ವೈದ್ಯ ಸಿಬ್ಬಂದಿ (ವೈದ್ಯ, ನರ್ಸ್, ಲ್ಯಾಬ್ ತಂತ್ರಜ್ಞ, ವೈದ್ಯಕೀಯ ವಿದ್ಯಾರ್ಥಿ)ಗಳಿಗೆ ಸೋಂಕು ಅಂಟುವ ಸಾಧ್ಯತೆ ಅಧಿಕವಾಗಿರುತ್ತದೆ. ಆಕಸ್ಮಿಕವಾಗಿ (ಹರಿತ ಪರಿಕರ ತಗಲಿ) ಏಯ್ಡ್ಸ್ ಉಂಟಾಗುವ ಸಾಧ್ಯತೆ ಶೇ.೦.೫ ಇದ್ದರೆ ಹೆಪಟೈಟಿಸ್-ಬಿ ಉಂಟಾಗುವ ಸಂಭವನೀಯತೆ ಇದರ ಹದಿನಾರು ಪಟ್ಟು ಹೆಚ್ಚಾಗಿದೆ. ಗುಂಪಾಗಿ ಕಲೆತು ಒಂದೇ ಸಿರಿಂಜ್‌ನಿಂದ ಮಾದಕ ಔಷಧಿಯನ್ನು ಚುಚ್ಚಿಕೊಳ್ಳುವ ಚಟದವರು ಸೋಂಕಿಗೆ ಸೆರೆಯಾಗುವುದು ಸಾಮಾನ್ಯ. ಪದೇ ಪದೇ ರಕ್ತ ಸ್ವೀಕರಿಸುವವರು ಮತ್ತು ಡಯಾಲಿಸಿಸ್‌ಗೆ ಒಳಗಾಗುವವರು ಸಹ ಸೋಂಕಿಗೆ ಸುಲಭವಾಗಿ ಪಕ್ಕಾಗುತ್ತಾರೆ.

'ಹೆಪಟೈಟಿಸ್-ಬಿ' ಸೋಂಕಿನ ಮತ್ತೊಂದು ಹಾದಿ, ಸೋಂಕಿನವರೊಂದಿಗೆ ನಡೆಸುವ ಲೈಂಗಿಕ ಸಂಪರ್ಕ. ಹೀಗಾಗಿ ವೇಶ್ಯೆಯರು, ವಿಟರು, ಲೈಂಗಿಕ ಸ್ವೇಚ್ಛಾಚಾರಿಗಳು, ಸಲಿಂಗ ಕಾಮಿಗಳು ಈ ಸೋಂಕನ್ನು ಅಂಟಿಸಿಕೊಳ್ಳುವುದು ವಿಶೇಷವೇನಲ್ಲ.

ಹೆಪಟೈಟಿಸ್-ಬಿ ಸೋಂಕು ಏಯ್ಡ್ಸ್ ಸೋಂಕಿನಂತೆ ಮರಣಾಂತಕವಾಗಿರದಿದ್ದರೂ, ಈ ಸೋಂಕು ದೀರ್ಘಕಾಲದ ಕಾಮಾಲೆ ಉಂಟುಮಾಡುತ್ತದೆ. ಯಕೃತ್ತಿನ ಕಾರ್ಯಕ್ಷಮತೆಯನ್ನು ಕ್ಷೀಣಿಸುತ್ತದೆ. ಯಕೃತ್‌ನಲ್ಲಿ ಕ್ಯಾನ್ಸರ್ ಗಡ್ಡೆ ಬೆಳೆಯುವಂತೆ ಮಾಡುತ್ತದೆ. ಸೋಂಕಿಗೆ ಒಳಗಾದ ಸಾವಿರ ಜನರಲ್ಲಿ ಆರು ಜನ ಯಕೃತ್ ಕ್ಯಾನ್ಸರಿಗೆ ಬಲಿಯಾಗುತ್ತಾರೆ.

**ರೋಗಲಕ್ಷಣಗಳು:** ವೈರಸ್‌ಗಳು ದೇಹ ಹೊಕ್ಕ ಆರು ತಿಂಗಳ ಅನಂತರವೇ ರೋಗ ಲಕ್ಷಣಗಳು ಕಾಣಲಾರಂಭಿಸುತ್ತವೆ. ಪ್ರಾರಂಭದಲ್ಲಿ ಜ್ವರ, ತಲೆನೋವು, ಮೈಕೈ ನೋವು, ಅಶಕ್ತತೆ, ಹಸಿವಾಗದಿರುವುದು, ವಾಂತಿ, ಆಹಾರದ ಬಗ್ಗೆ ಹೇವರಿಕೆ ಮುಂತಾದ ತೊಂದರೆಗಳು ರೋಗಿಯನ್ನು ಹಾಸಿಗೆ ಹಿಡಿಯುವಂತೆ ಮಾಡುತ್ತದೆ. ಧೂಮಪಾನ ಪ್ರಿಯರಿಗೆ ತಂಬಾಕಿನ ವಾಸನೆಯೇ ಅಸಹ್ಯವಾಗುತ್ತದೆ. ಮೂತ್ರದ ಬಣ್ಣ ಹಳದಿಯಾಗುತ್ತದೆ. ಕಣ್ಣುಗುಡ್ಡೆಗೂ ಹಳದಿ ರಂಗು ಬರುತ್ತದೆ. ಬಲಹೊಟ್ಟೆ (ಯಕೃತ್ ಇರುವ ಸ್ಥಳ)ಯಲ್ಲಿ ನೋವಿರುತ್ತದೆ.

*ವಿಶ್ವ ಆರೋಗ್ಯ ಸಂಸ್ಥೆಯ ಗಮನ ಸೆಳೆದಿರುವ ಪ್ರಸ್ತುತ ಸಮಸ್ಯೆಗಳಲ್ಲಿ ''ಹೆಪಟೈಟಿಸ್-ಬಿ'' ಸೋಂಕಿಗೆ ಅಗ್ರಸ್ಥಾನ ದೊರಕಿದೆ. ಏಯ್ಡ್ಸ್‌ನಷ್ಟು ಬೀಭತ್ಸವಾಗಿರದಿದ್ದರೂ ಏಯ್ಡ್ಸ್‌ಗಿಂತ ನೂರುಪಟ್ಟು ಹೆಚ್ಚು ಕ್ಷಿಪ್ರವಾಗಿ ಹರಡುವ ಸಾಮರ್ಥ್ಯ ಪಡೆದಿರುವ ಈ ವೈರಸ್ ಸೋಂಕು ಈಗಾಗಲೇ ಕಾಡ್ಗಿಚ್ಚಿನಂತೆ ಹಬ್ಬಿ ಇಡೀ ಧರಣಿಮಂಡಲವನ್ನೇ ವ್ಯಾಪಿಸಿಕೊಂಡಿದೆ. ತನ್ನ ಅಸ್ತಿತ್ವಕ್ಕೆ ಪೂರಕವಾದ ಪರಿಸರವಿರುವುದನ್ನು ಮನಗಂಡು ಭಾರತದಲ್ಲಿ ಭದ್ರವಾಗಿ ಬೇರೂರಿ ತನ್ನ ಪ್ರಾಬಲ್ಯ ಸಾಧಿಸುವ ಹುನ್ನಾರ ನಡೆಸುತ್ತಿದೆ. ಬೂದಿ ಮುಚ್ಚಿದ ಕೆಂಡದಂತೆ ಕಾಣುವ ಈ ಸೋಂಕು ನಮ್ಮ ಒಡಲನ್ನು ಸುಡುವ ಮುನ್ನ ಪ್ರಜ್ಞಾವಂತರಾಗಿ ಎಚ್ಚತ್ತುಕೊಳ್ಳುವ ಜವಾಬ್ದಾರಿಯುತ ಹೊಣೆಗಾರಿಕೆ ನಮ್ಮ ಮೇಲಿದೆ.*

ಸೂಕ್ತ ಚಿಕಿತ್ಸೆಯಿಂದ ಬಹುತೇಕ ರೋಗಿಗಳು ಸಂಪೂರ್ಣ ಗುಣಮುಖರಾಗುತ್ತಾರೆ. ಆದಾಗ್ಯೂ ದೀರ್ಘಕಾಲದ ವೇದನೆಯಿಂದ ಚೇತರಿಸಿಕೊಳ್ಳಲು ಒಂದೆರಡು ತಿಂಗಳ ಸಮಯ ಬೇಕಾಗುತ್ತದೆ.

ಹೆಪಟೈಟಿಸ್-ಬಿ ವೈರಸ್‌ಗಳನ್ನು ಕೊಲ್ಲಬಲ್ಲ ಮದ್ದು ನಮಗಿನ್ನೂ ಲಭ್ಯವಾಗಿಲ್ಲ. ಆದಾಗ್ಯೂ ವಿಶ್ರಾಂತಿ ಮತ್ತು ಸಂದರ್ಭೋಚಿತ ಚಿಕಿತ್ಸೆಯಿಂದ ಪರಿಹಾರ ಸಿಗುತ್ತದೆ. ರೋಗದ ಆರಂಭದ ಹಂತದಲ್ಲೇ ಬಳಸಬಹುದಾದ ಇಂಟರ್‌ಫಿರಾನ್ ಚಿಕಿತ್ಸೆ ಇದೆ. ''ಇಂಟರ್‌ಫಿರಾನ್ ಆಲ್ಫ-ಬಿ'' ಔಷಧಿಗೆ ಹಲವಾರು ಲಕ್ಷರೂಪಾಯಿಗಳ ಖರ್ಚಾಗುತ್ತದೆ. ಆದಾಗ್ಯೂ ಇದರ ಪರಿಣಾಮ ಅಷ್ಟು ತೃಪ್ತಿಕರವಾಗಿಲ್ಲ. ಫಿಯಲುಡಿಡೈನ್, ರಿಬವೂರಿನ್, ಲ್ಯಾಮಿವಿರಡಿನ್, ವೈಮಿಸಿಕ್ಲೋವಿರ್ ಮುಂತಾದ ವೈರಸ್‌ನಾಶಕ ಔಷಧಿಗಳ ಪ್ರಭಾವದ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿದೆ. ಕೆಲ ಸಸ್ಯಜನ್ಯ ಔಷಧಿಗಳು ಹೆಪಟೈಟಿಸ್ ಸೋಂಕನ್ನು ನಿವಾರಿಸುವ ಆಶಾಕಿರಣ ಮೂಡಿಸಿವೆ.

ಚಿಕಿತ್ಸೆಯೊಂದಿಗೆ ರೋಗಿ ಹೆಚ್ಚು ಸಕ್ಕರೆ, ಕಡಿಮೆ ಕೊಬ್ಬು ಇರುವ ಆಹಾರ ಸೇವಿಸಬೇಕಾಗುತ್ತದೆಯಲ್ಲದೆ ಮಾನಸಿಕ ಒತ್ತಡದಿಂದಲೂ ಬಿಡುಗಡೆ ಹೊಂದಬೇಕು. ಮದ್ಯಪಾನವನ್ನು ಸಂಪೂರ್ಣವಾಗಿ ಮರೆತೇಬಿಡಬೇಕು. ಏಕೆಂದರೆ ಮದ್ಯ ಯಕೃತ್ತಿಗೆ ವಿಷ.

**ನಿವಾರಣಾ ಉಪಾಯಗಳು:** ರೋಗ ಬಂದ ನಂತರ ಪರಿತಪಿಸುವುದಕ್ಕಿಂತ ರೋಗ ಬಾರದಂತೆ ಎಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳುವುದರಿಂದ ಹೆಪಟೈಟಿಸ್ ಸೋಂಕಿನಿಂದ ಸಂಪೂರ್ಣ ರಕ್ಷಣೆ ಪಡೆಯಬಹುದು. ಇದಕ್ಕಾಗಿ ನಾವು ಹೆಚ್ಚಿಗೆ ಶ್ರಮ ಪಡಬೇಕಾಗಿಲ್ಲ. ಸುರಕ್ಷಿತ ಲೈಂಗಿಕತೆ ಪಾಲಿಸಬೇಕು. ಇಂಜೆಕ್ಷನ್ ಪಡೆವಾಗ ಸೂಜಿ ಶುದ್ಧವಾಗಿರುವಂತೆ ಎಚ್ಚರವಹಿಸಬೇಕು. ಇದಕ್ಕಾಗಿ ಬಳಸಿ ಬಿಸಾಡುವ ಹೊಸ ಸಿರಂಜ್ ಬಳಸುವುದು ಕ್ಷೇಮ. ರಕ್ತ ಸ್ವೀಕರಿಸುವ ಸಂದರ್ಭ ಒದಗಿದಾಗ ನಾವು ಸ್ವೀಕರಿಸುವ ರಕ್ತ 'ಹೆಪಟೈಟಿಸ್-ಬಿ'ಯಿಂದ ಮುಕ್ತವಾಗಿರಬೇಕು. ಜೊತೆಗೆ ಇತರರು ಬಳಸಿದ ಕತ್ತಿ, ಚಾಕು, ಸೂಜಿ, ಕ್ಷೌರದ ಉಪಕರಣಗಳನ್ನು ನಾವು ಬಳಸಬಾರದು.

ಈಗಾಗಲೇ ಸೋಂಕಿಗೆ ಒಳಗಾಗಿರುವವರ ಕೈಕುಲುಕುವುದರಿಂದ, ಅವರು ಬಳಸಿದ ಫೋನ್, ಪಾತ್ರೆ, ಪರಿಕರ, ಶೌಚಾಲಯ ಬಳಸುವುದರಿಂದ ಹೆಪಟೈಟಿಸ್ ಸೋಂಕು ತಗಲುವುದಿಲ್ಲ.

ಹೆಪಟೈಟಿಸ್ ಸೋಂಕಿನಿಂದ ರಕ್ಷಣೆ ದೊರಕಿಸುವ ಲಸಿಕೆ ಲಭ್ಯವಿದೆ. ಈ ಲಸಿಕೆ (ಎನ್‌ಜಿರೆಕ್ಸ್ - ಬಿ) ಸುರಕ್ಷಿತವಾಗಿದೆಯಲ್ಲದೆ ಸಂಪೂರ್ಣ ಸುರಕ್ಷೆಯನ್ನು ಒದಗಿಸುತ್ತದೆ. ನಿಗದಿತ ವೇಳಾಪಟ್ಟಿಯಂತೆ ಲಸಿಕೆಯನ್ನು ಪಡೆದಲ್ಲಿ 'ಹೆಪಟೈಟಿಸ್-ಬಿ' ವೈರಸ್‌ಗಳು ನಮ್ಮನ್ನು ಸೋಂಕಲಾರವು.

**ಹೆಪಟೈಟಿಸ್-ಬಿ ಲಸಿಕೆ**

| | | | |
|---|---|---|---|
| ೧ನೇ ಇಂಜೆಕ್ಷನ್ | ...... | ೧ ಸಿ.ಸಿ (ಮಕ್ಕಳಿಗೆ ೧/೨ ಸಿ.ಸಿ) | ಇಚ್ಛಿತ ದಿನ |
| ೨ನೇ ಇಂಜೆಕ್ಷನ್ | ...... | ೧ ಸಿ.ಸಿ (ಮಕ್ಕಳಿಗೆ ೧/೨ ಸಿ.ಸಿ) | ಒಂದು ತಿಂಗಳ ನಂತರ |
| ೩ನೇ ಇಂಜೆಕ್ಷನ್ | ...... | ೧ ಸಿ.ಸಿ. (ಮಕ್ಕಳಿಗೆ ೧/೨ ಸಿ.ಸಿ) | ಆರು ತಿಂಗಳ ನಂತರ |

ದೊಡ್ಡವರಿಗಿಂತ ಚಿಕ್ಕಮಕ್ಕಳಿಗೆ ಈ ಲಸಿಕೆಯ ಅವಶ್ಯಕತೆ ಹೆಚ್ಚು; ಏಕೆಂದರೆ, ಸೋಂಕು ತಗಲಿದ ಮಕ್ಕಳು ರೋಗವಾಹಕರಾಗುವ ಪ್ರಮಾಣ ಹೆಚ್ಚು. ಅಲ್ಲದೆ, ಮಗುವಿಗೆ ಚಿಕ್ಕವಯಸ್ಸಿನಲ್ಲೇ ತಗಲಿದ ಸೋಂಕಿನ ಪರಿಣಾಮವಾಗಿ ಯಕೃತ್ ಕ್ಯಾನ್ಸರ್ ಉಂಟಾಗಿ ನಲವತ್ತು ವರ್ಷದೊಳಗೆ ಅಕಾಲಿಕ ಮರಣ ಸಂಭವಿಸುವ ಸಾಧ್ಯತೆಯೂ ಹೆಚ್ಚು. ಈ ಕಾರಣದಿಂದಾಗಿ ನವಜಾತ ಶಿಶುವಿಗೆ ಹುಟ್ಟಿದ ದಿನವೇ ಮೊದಲನೆ ಹೆಪಟೈಟಿಸ್-ಬಿ ಲಸಿಕೆ ಕೊಡಿಸುವುದು ಒಳ್ಳೆಯದು. ಮಧ್ಯವಯಸ್ಸು ಮೀರಿದವರಿಗೆ ಇದರಿಂದ ಆಗುವ ಉಪಯೋಗ ನಗಣ್ಯವೆಂದು ಕೆಲವು ವೈದ್ಯ ವಿಜ್ಞಾನಿಗಳ ಅಭಿಪ್ರಾಯ.

ಚೈನ, ಜಪಾನ್, ಸಿಂಗಪುರ್ ಮುಂತಾದ ಹಲವಾರು ದೇಶಗಳು ಲಸಿಕೆಯ ಅಸ್ತ್ರದೊಂದಿಗೆ ದಾಪುಗಾಲು ಹಾಕಿ ತಮ್ಮ ದೇಶದ ಹೆಪಟೈಟಿಸ್ ಸಮಸ್ಯೆಯನ್ನು ಗಣನೀಯವಾಗಿ ತಗ್ಗಿಸಿ ಕೊಂಡಿದ್ದಾರೆ. ನಾವೂ ಈಗ ಇದೇ ಹಾದಿ ಹಿಡಿಯುವುದು ಲೇಸಲ್ಲವೆ ?

**ಡಾ|| ಡಿ. ಕೆ. ಮಹಾಬಲರಾಜು**
ಪ್ರಾಧ್ಯಾಪಕ, ಸಮುದಾಯ ಆರೋಗ್ಯ ವಿಭಾಗ
ಜೆ. ಜೆ. ಎಂ. ಮೆಡಿಕಲ್ ಕಾಲೇಜು, ದಾವಣಗೆರೆ - ೪

*ಕರ್ನಾಟಕದಲ್ಲಿ ಸುಸ್ಥಿರ ಆಂದೋಲನ ಹುಟ್ಟು ಹಾಕಲು ತನ್ನದೇ ನಿಲುವು ದೃಷ್ಟಿಕೋನಗಳಿಂದ ಕರ್ನಾಟಕದ ಮೂಲೆಗಳಲ್ಲಿರುವ ಕೃಷಿಕರಲ್ಲಿ ಹೊಸ ಚೈತನ್ಯ ಮೂಡಿಸಲು ಸಫಲವಾಗಿರುವ*

**ಸಿರಿಸಮೃದ್ಧಿ**

ಮಾಸಿಕ ಕೃಷಿ ಪತ್ರಿಕೆ














ಗ್ರಾಮೀಣಾಭಿವೃದ್ಧಿಯಲ್ಲಿ ಅಭೂತಪೂರ್ವ ಪ್ರಯೋಗಗಳನ್ನು ಕೈಗೊಂಡಿರುವ ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ ಪ್ರಕಟಿತ ಪತ್ರಿಕೆ

ಚಂದಾ ವಿವರ

| | | | | | |
|---|---|---|---|---|---|
| ವಾರ್ಷಿಕ | ರೂ. | 75 | ಪಂಚವಾರ್ಷಿಕ | ರೂ. | 375 |
| ತ್ರೈವಾರ್ಷಿಕ | ರೂ. | 225 | ಆಜೀವ | ರೂ. | 1000 |

ಆಜೀವ ಸದಸ್ಯರಿಗೆ 'ನಾಡ ಹಸುಗಳಿಂದ ಮಿಶ್ರತಳಿ ಸಂವರ್ಧನೆ' ಎಂಬ ಪುಸ್ತಕವನ್ನು ಉಚಿತವಾಗಿ ಕಳುಹಿಸಲಾಗುವುದು

*ನಿಮ್ಮ ಚಂದಾ ಹಣವನ್ನು ಡಿ.ಡಿ./ ಎಂ.ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಿ*

**ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆ**

ಅಂಚೆ ಚೀಲ ನಂ. 3, ಶಾರದಾ ನಗರ, ತಿಪಟೂರು - 572 202, ತುಮಕೂರು ಜಿಲ್ಲೆ
ಫೋನ್ : 08134-50659, ಫ್ಯಾಕ್ಸ್ : 08134-51337
e-mail : baif@bgl.vsnl.net.in

# ಯೋಗಪ್ರವೇಶ-೧೬

ಜಿ. ರಾಮಕೃಷ್ಣ

ಹಿಂದೆಯೇ ಹೇಳಿದಂತೆ ಹಲಾಸನದ ನಂತರ ಭುಜಂಗಾಸನವನ್ನು ಮಾಡುವುದು ಹಿತವಾಗಿರುತ್ತದೆ ಹಾಗೂ ಪ್ರಯೋಜನಕಾರಿ. ಶರೀರವನ್ನು ಒಂದು ರೀತಿ ಬಗ್ಗಿಸಿದ್ದಾದ ಮೇಲೆ ಅದಕ್ಕೆ ಪ್ರತಿಯಾದ ರೀತಿಯಲ್ಲಿ ಬಗ್ಗಿಸುವುದು ಹಿತಕರವೆಂಬರ್ಥದಲ್ಲಿ ಅಲ್ಲ; ಅಂಗಾಂಗಗಳನ್ನು ಮೆತುವಾಗಿ ಎರಡು ಕಡೆಗಳಿಂದಲೂ ನೀವಿದಂತಾಗುತ್ತದೆಯೆಂಬ ಅರ್ಥದಲ್ಲಿ. ಹಲಾಸನದಲ್ಲಿ ಏನೇನು ಎಚ್ಚರ ಅಗತ್ಯವೋ ಈ ಆಸನದಲ್ಲೂ ಅವೆಲ್ಲಾ ಅಗತ್ಯ. 'ಭುಜಂಗ' ಎಂದರೆ 'ಹಾವು'. ಶರೀರವು ಹೆಡೆಯೆತ್ತಿದ ಹಾವಿನಂತೆ ಕಾಣುತ್ತದೆಯೆಂಬ ಕಾರಣದಿಂದ ಈ ಹೆಸರು ಕೊಟ್ಟಿದ್ದಾರೆ.

ಘೇರಂಡ ಸಂಹಿತೆಯಲ್ಲಿ ಇದರ ವಿಧಾನವನ್ನು ಹೇಳಲಾಗಿದೆ: ಅಂಗುಷ್ಠನಾಭಿಪರ್ಯಂತಂ ಅಧೋ ಭೂಮೌ ಚ ವಿನ್ಯಸೇತ್। ಧರಾಂ ಕರತಲಾಭ್ಯಾಂ ಧೃತ್ವೋರ್ಧ್ವಶೀರ್ಷಃ ಫಣೀವ ಹಿ॥ (೨.೪೨). ಕಾಲ್ಬೆರಳುಗಳಿಂದ ಹೊಕ್ಕಳವರೆಗಿನ ಭಾಗ ನೆಲದ ಮೇಲಿರುತ್ತದೆ. ಎರಡು ಹಸ್ತಗಳೂ ಶರೀರದ ಪಾರ್ಶ್ವಗಳಲ್ಲಿ, ಎದೆಯ ರೇಖೆಗೆ ಬರುವಂತೆ, ನೆಲದ ಮೇಲಿರುತ್ತವೆ. (ಹೆಬ್ಬೆಟ್ಟು ಕಂಕುಳಿಗೆ ತಾಕುವಂತಿರುತ್ತದೆ). ತಲೆಯನ್ನೆತ್ತಿ ಹಿಡಿಯಲಾಗುತ್ತದೆ. (ಕೈಗಳನ್ನು ಎದೆಯ ಸಮರೇಖೆಯಲ್ಲಿಡದೆ ಇನ್ನೂ ಕೆಳಕ್ಕೆ ಇಟ್ಟರೆ ಹೊಕ್ಕಳಿಗಿಂತಲೂ ಹಿಂದಿನ ಭಾಗವನ್ನು ಸಹ ಎತ್ತುವ ಸಂಭವವಿರುತ್ತದೆ. ಅದು ಹಾಗಾಗಬಾರದು). ನಾಭಿಯು ನೆಲದ ಮೇಲೆಯೇ ಉಳಿದಿರುತ್ತದೆಂಬುದನ್ನು ವಿಶೇಷವಾಗಿ ಗಮನಿಸಬೇಕು.

ಯಥಾಪ್ರಕಾರ ಸ್ನಾಯುಗಳೆಲ್ಲಾ ಸಡಿಲವಾಗಿರುವಂತೆ



ಶಲಭಾಸನ

ಮುಕ್ತವಾಗಿರಬೇಕು. ಕೈಗಳನ್ನು ಶರೀರದಿಂದ ದೂರದಲ್ಲೆಲ್ಲೋ ಇಟ್ಟಿರುವುದಿಲ್ಲ. ನೊಸಲು (ಹಣೆ) ಭೂಮಿಯನ್ನು ಮುಟ್ಟುವಂತಿರಬೇಕು. ಹಿಮ್ಮಡಿಯು ಮೇಲಕ್ಕೆ ಎತ್ತಿದಂತೆ ಇರಬೇಕು. ಈಗ ಕ್ರಮೇಣ ಹಣೆಯನ್ನೆತ್ತಿ ಕತ್ತನ್ನು ಹಿಂದಕ್ಕೆ ಸಾವಧಾನವಾಗಿ ಬಗ್ಗಿಸಬೇಕು. ಕೊನೆಯವರೆಗೂ ಇದೇ ಸ್ಥಿತಿ ಇರುತ್ತದೆ. ಇನ್ನೂ ನೆಲದ ಮೇಲೇ ಇರುವ ಎದೆಯನ್ನು ನಿಧಾನವಾಗಿ ಎತ್ತಬೇಕು. ಬೆನ್ನಿನ ಸ್ನಾಯುಗಳ ಆಕುಂಚನ ಇದರಿಂದ ಉಂಟಾಗುತ್ತದೆ. ಕೈಗಳ ಮೇಲಿನ ಒತ್ತಡದಿಂದ ಎದೆಯನ್ನು ಎತ್ತುವಂತೆ ಪ್ರಾರಂಭದಲ್ಲಿ ತೋರಿದರೂ ಕ್ರಮೇಣ ಅದು



ಭುಜಂಗಾಸನ

ಬೆನ್ನಿನ ಮಾಂಸಖಂಡಗಳ ಪ್ರಭಾವವೆಂಬ ಅರಿವುಂಟಾಗುತ್ತದೆ. ಒಂದೇ ಬಾರಿಗೆ ಬೆನ್ನುಹುರಿಯನ್ನು ಬಗ್ಗಿಸುವಂತೆ ಈ ಚಲನೆ ಇರಬಾರದು. ಪಕ್ಕೆಯ ಎಲುಬುಗಳು ಒಂದೊಂದಾಗಿ, ನಿಧಾನವಾಗಿ, ಭೂಮಿಯಿಂದ ಮೇಲಕ್ಕೆ ಏಳುತ್ತಿವೆಯೋ ಎಂಬ ರೀತಿಯ ಚಲನೆ ಆಗತ್ಯ. ಹಾಗಾದಾಗ ಬೆನ್ನುಹುರಿಯ ಮೇಲಿನ ಪ್ರಭಾವ ಹೆಜ್ಜೆ ಹೆಜ್ಜೆಯಾಗಿ ಕೆಳಕ್ಕೆ ಸರಿಯುತ್ತಿರುವಂತೆ ಭಾಸವಾಗುತ್ತದೆ. ಕಣ್ಣಿನಿಂದ ಹಿಂದಿನದೇನನ್ನೋ ನೋಡುತ್ತಿರುವಂತೆಯೂ, ಎದೆಯ ಭಾಗವು ವಕ್ರಾಕೃತಿಯಂತಿರುವುದೂ ಅನುಭವವಾಗಬೇಕು. 'ಸೇಕ್ರಂ' ಎಂದು ಕರೆಯಲಾಗುವ ವಸ್ತಿಕುಹರದಲ್ಲಿ ಒತ್ತಡವಿರುವುದು ತಿಳಿಯುತ್ತದೆ. ಹೊಟ್ಟೆಯ ಮಾಂಸಖಂಡಗಳು, ವಿಶೇಷವಾಗಿ ಗುದನಾಳದ ಮಾಂಸಖಂಡಗಳು, ಚಾಚಿದಂತಾಗಿ ಜಠರದ ಭಾಗದಲ್ಲಿ ಒತ್ತಡ ಏರಿರುತ್ತದೆ. ಅವನ್ನು ಸಂಕುಚಿಸಲು ಯತ್ನಿಸಿದರೆ ಒತ್ತಡ ಇನ್ನೂ ಜಾಸ್ತಿಯಾಗುತ್ತದೆ. ಉಸಿರಾಟವನ್ನು ತಡೆಯುವ ಪ್ರಮೇಯವಿಲ್ಲ. ಸಾಕಷ್ಟು ಪ್ರೌಢಿಮೆ ಗಳಿಸಿದ ನಂತರ ಬೇಕಾದರೆ ಶ್ವಾಸವನ್ನು ಒಳಗೇ ಹಿಡಿದಿಡಬಹುದು. ಕೆಲವು ಸೆಕೆಂಡುಗಳ ನಂತರ ಯಥಾಸ್ಥಿತಿಗೆ ನಿಧಾನವಾಗಿ ಮರಳಬೇಕು. ಹಣೆಯು ನೆಲವನ್ನು ಮುಟ್ಟುವುದು ಕಡೆಯಲ್ಲಿಯೇ. ಹೀಗೆ ಮೂರರಿಂದ ಏಳರವರೆಗೆ ಈ ಆಸನವನ್ನು ಪುನರಾವೃತ್ತಿ ಮಾಡುವುದು ಒಳ್ಳೆಯದು.

ಬೆನ್ನುಹುರಿಯ ಸ್ಥಿತಿಸ್ಥಾಪಕತ್ವವನ್ನು ಹೆಚ್ಚಿಸುವ ಹಲಾಸನ ಮತ್ತು ಭುಜಂಗಾಸನಗಳು ಬೆನ್ನಿನ ಮಾಂಸಖಂಡಗಳಿಗೆ ರಕ್ತ ಸಂಚಾರವನ್ನೂ ಹೆಚ್ಚಿಸುತ್ತವೆಂಬುದು ಒಂದು ವಿಶೇಷ. ಸಾಮಾನ್ಯವಾಗಿ ಅಲ್ಲಿಗೆ ರಕ್ತಸಂಚಾರ ಕಡಿಮೆಯೇ. ಶ್ರಮದಿಂದಾಗಿ ಬೆನ್ನು ನೋವು ಬಂದಿದ್ದರೆ ಭುಜಂಗಾಸನವು ಅದಕ್ಕೆ ಶಮನ ತರುತ್ತದೆ. ಬೆನ್ನುಹುರಿ ಹಾಗೂ ಪಕ್ಕೆಯ ಎಲುಬುಗಳಿಗೆ ಗಾಢವಾದ ಸಂಬಂಧವಿದೆ. ಅಲ್ಲಿ ರಕ್ತ ಸಂಚಾರವನ್ನು ಅಧಿಕಗೊಳಿಸುವುದು ಸಹ ಈ ಆಸನದಿಂದ ಉಂಟಾಗುವ ಒಂದು ಪ್ರಯೋಜನ. ಊಟದ ನಂತರ ಹೊಟ್ಟೆ ಉಬ್ಬಿದಂತಾಗುವ ಸಂಭವವಿದ್ದರೆ ಈ ಆಸನ ಒಳ್ಳೆಯ ಔಷಧಿ. (ಅಂದರೆ, ಊಟವಾದ ನಂತರ ಈ ಆಸನ ಮಾಡಬೇಕೆಂದಲ್ಲ. ಹಿಂದೆಯೇ ಹೇಳಿರುವಂತೆ ಏನನ್ನಾದರೂ ತಿಂದಿದ್ದರೆ ಕನಿಷ್ಠ ಎರಡು-ಮೂರು ಗಂಟೆಗಳ ಕಾಲ ಆಸನಗಳನ್ನು ಮಾಡಬಾರದು).

ಹಲಾಸನ - ಭುಜಂಗಾಸನ - ಶಲಭಾಸನ - ಧನುರಾಸನ ಇವು ಒಂದು ಸರಣಿಯಲ್ಲಿ ಅಭ್ಯಾಸ ಮಾಡಬೇಕಾದ ಆಸನಗಳು. ಭುಜಂಗಾಸನದ ನಂತರ ಶಲಭಾಸನ ಉಚಿತವಾಗಿರುತ್ತದೆ. 'ಶಲಭ' ಎಂದರೆ 'ಮಿಡತೆ'. ಘೇರಂಡ ಸಂಹಿತೆಯು ಈ ಆಸನವನ್ನು ಹೀಗೆ ವ್ಯಾಖ್ಯಾನಿಸುತ್ತದೆ: ಅಧ್ಯಾಸ್ಯ ಶೇತೇ ಕರಯುಗ್ಮವಕ್ಷಂ। ಆಲಂಬ್ಯ ಭೂಮಿಂ ಕರಯೋಸ್ತಲಾಭ್ಯಾಂ॥ ಪಾದೌ ಚ ಶೂನ್ಯೇ ಚ ವಿತಸ್ತಿ ಚೋರ್ಧ್ವಂ। ವದಂತಿ ಪೀಠಂ ಶಲಭಂ ಮುನೀಂದ್ರಾಃ ॥ (೨.೩೯). ಎದೆಯ ಪಾರ್ಶ್ವಗಳಲ್ಲಿ ಹಸ್ತಗಳನ್ನಿಟ್ಟು ಹೊಟ್ಟೆಯ ಮೇಲೆ ಮಲಗಿ. ಕಾಲುಗಳನ್ನು ಗಾಳಿಯಲ್ಲಿರುವಂತೆ ಮೇಲಕ್ಕೆತ್ತಿರಿ (ಸುಮಾರು ಒಂದು ಅಡಿ). ಅದೇ ಶಲಭಾಸನ.

ಎದೆಯ ಮೇಲೆ ಮಲಗಿದಾಗ ಕಾಲುಗಳು ಕೂಡಿಕೊಂಡಿರಬೇಕು; ಎತ್ತಿದಾಗಲೂ ಅಷ್ಟೆ. ಕಾಲುಗಳನ್ನೆತ್ತುವಾಗ ಮಂಡಿಯ ಬಳಿ ಬಗ್ಗಿಸಬಾರದು. ಘೇರಂಡ ಸಂಹಿತೆಯ ನಿರ್ದೇಶನಕ್ಕೆ ಭಿನ್ನವಾಗಿ ಅಭ್ಯಾಸದ ಒಂದು ಪದ್ಧತಿಯಲ್ಲಿ ಕೈಗಳನ್ನು ಮುಷ್ಟಿಗಳನ್ನಾಗಿ ಮಾಡಿ ಅವು ಮೇಲ್ಭಾಗಕ್ಕೆ ಬಂದಿರುವಂತೆ ಇಟ್ಟುಕೊಳ್ಳುತ್ತಾರೆ. ಕಾಲುಗಳನ್ನೆತ್ತುವಾಗ ಒತ್ತಡವು ಮುಷ್ಟಿಗಳ ಮೇಲಿರುತ್ತದೆ. ಪ್ರಾರಂಭದಲ್ಲಿ ಬೇಕಾದರೆ ಮುಷ್ಟಿಗಳನ್ನು ತೊಡೆಗಳಡಿ ಇಟ್ಟುಕೊಳ್ಳಬಹುದು. ಅದರಿಂದ ಕಾಲುಗಳನ್ನೆತ್ತುವುದು ಸುಲಭವಾಗುತ್ತದೆ. ಕಾಲುಗಳನ್ನು ಎತ್ತಿ ಇಳಿಸುವಾಗ



ಅರ್ಧ-ಶಲಭಾಸನ

ಸರ್ವಥಾ ನಿಧಾನ ಗತಿ ಇರಬೇಕು. ತೀರಾ ನಿಧಾನವಂತೂ ಶಕ್ಯವಲ್ಲ. ಮೂರು-ನಾಲ್ಕು ಬಾರಿ ಇದನ್ನು ಅಭ್ಯಾಸ ಮಾಡಬಹುದು. (ಗಲ್ಲವು ನೆಲವನ್ನು ಮುಟ್ಟುವಂತಿರುತ್ತದೆ. ತಲೆಯು ಸ್ವಲ್ಪ ಮಾತ್ರ ಹಿಂದಕ್ಕೆ ವಾಲಿದಂತಿರುತ್ತದೆ. ಆಸನದಲ್ಲಿ ಈ ಅಂಗಗಳಿಗೆ ಚಲನೆ ಇಲ್ಲ). ಈ ಆಸನ ಮಾಡುವಾಗ ಸಾಮಾನ್ಯವಾಗಿ ಉಸಿರನ್ನು ಕಟ್ಟಿರುವುದು ರೂಢಿಯಲ್ಲಿದೆ. ಶ್ವಾಸಕೋಶಕ್ಕೆ ತೊಂದರೆಯಾಗದಷ್ಟು ಮಾತ್ರವೇ ಈ ಆಸನ ಯೋಗ್ಯ. ಹತ್ತು ಬಾರಿ ಹುಮ್ಮಸ್ಸಿನಿಂದ ಮಾಡಿ, ಒಂದೊಂದು ಬಾರಿಯೂ ಹಲವು ಸೆಕೆಂಡುಗಳ ಕಾಲ ಉಸಿರು ಬಿಗಿಹಿಡಿದರೆ ಅದರಿಂದ

(೬೧ನೇ ಪುಟ ನೋಡಿ)

# ವಿಶಿಷ್ಟ ಶಕ್ತಿಯ ತದ್ರೂಪಿಗಳು

ಬೇದ್ರೆ ಎನ್. ಮಂಜುನಾಥ

ಹಲೋ ಫ್ರೆಂಡ್ಸ್,

ನಿಮಗೆ ಗೊತ್ತಲ್ಲಾ, ನಮ್ಮ ಶಾಲೆಯಲ್ಲಿ ಪ್ರತಿವಾರ ಒಂದು ಸ್ಟೋರಿ ಟೆಲ್ಲಿಂಗ್ ಪೀರಿಯಡ್ ಇರುತ್ತೆ ಅಂತ. ಈ ವಾರ ಸ್ಟೋರಿ ಟೆಲ್ಲಿಂಗ್ ಪೀರಿಯಡ್‌ನಲ್ಲಿ ನನ್ ಫ್ರೆಂಡ್ ನಂದಿತಾ ಇದ್ದಾಳಲ್ಲಾ ಅವಳು ತುಂಬಾ ಮಜಾ ಅನ್ನೋ ದೊಡ್ಡ ಕಥೆ ಹೇಳಿದ್ಲು. ಅವರ ಚಿಕ್ಕಪ್ಪ ಆ ಕಥೆಯನ್ನು ಅವಳಿಗೆ ಹೇಳಿದ್ದಂತೆ. ಚೀನಾದೇಶ ಅಂತ ಇದೆಯಂತಲ್ಲಾ ಆ ದೇಶದ ಒಂದು ಜಾನಪದ ಕಥೆಯಂತೆ ಅದು. ಅವಳು ಹೇಳಿದ ಕಥೇನ ನನಗೆ ಅವಳಷ್ಟು ಚೆನ್ನಾಗಿ ನಿಮಗೆ ಹೇಳಲಿಕ್ಕೆ ಬರುತ್ತೋ ಇಲ್ವೋ ಗೊತ್ತಿಲ್ಲ. ಆದ್ರೂ ಪ್ರಯತ್ನ ಮಾಡ್ತೀನಿ. ಹಾಗಾದ್ರೆ, ಕಥೆ ಶುರುಮಾಡ್ಲಾ?

ಒಂದಾನೊಂದು ಕಾಲದಲ್ಲಿ ಚೀನಾದೇಶದ ಒಂದು ಪುಟ್ಟ ಹಳ್ಳಿಯಲ್ಲಿ ಐದು ಜನ ಸಹೋದರರು ಅವರ ಅಮ್ಮನ ಜೊತೆ ವಾಸ ಮಾಡ್ತಾ ಇದ್ರಂತೆ. ಅವ್ರೆಲ್ಲಾ ನೋಡ್ಲಿಕ್ಕೆ ಒಂದೇ ಥರಾ ಇದ್ರಂತೆ! ಒಬ್ಬೊಬ್ಬನಿಗೂ ಒಂದೊಂದು ವಿಶೇಷ ಶಕ್ತಿ ಬೇರೆ ಇತ್ತಂತೆ! ಅವರ ಹೆಸರೂ ಅಷ್ಟೇನೇ. ನಮಗೆ ನಗು ಬರುತ್ತೆ. ಮೊದಲನೆಯವನು **ಲೀ**, ಎರಡನೆಯವನು **ಲೂ**, ಮೂರನೆಯವನು **ತಾವೋ**, ನಾಲ್ಕನೆಯವನು **ಮಾವೋ** ಮತ್ತು ಐದನೆಯವನು **ಜಿಯಾಂಗ್**.

ದೊಡ್ಡಣ್ಣ ಲೀಗೆ ಇಡೀ ಸಮುದ್ರವನ್ನೇ ಕುಡಿದು ಖಾಲಿ ಮಾಡುವಷ್ಟು ಸಾಮರ್ಥ್ಯ ಇತ್ತು. ಎರಡನೆಯವ **ಲೂ**ನ ಕುತ್ತಿಗೆ ಕಬ್ಬಿಣಕ್ಕಿಂತಲೂ ಗಟ್ಟಿಯಾಗಿತ್ತು. ಮೂರನೆಯವ **ತಾವೋ**ಗೆ ತನ್ನ ಕಾಲುಗಳನ್ನು ಎಷ್ಟುದ್ದ ಬೇಕೋ ಅಷ್ಟು ಉದ್ದಕ್ಕೆ ಬೆಳೆಸುವ ಶಕ್ತಿ ಇತ್ತು. ನಾಲ್ಕನೆಯವ **ಮಾವೋ** ಬೆಂಕಿಯಿಂದ ಸುಡಲು ಸಾಧ್ಯವೇ ಆಗದಷ್ಟು ಫೈರ್‌ಪ್ರೂಫ್ ಆಗಿದ್ದ. ಇನ್ನು ಕೊನೆಯವ **ಜಿಯಾಂಗ್** ತನ್ನ ಉಸಿರಾಟವನ್ನು ಎಷ್ಟು ಹೊತ್ತು ಬೇಕೋ ಅಷ್ಟು ಹೊತ್ತು ಹಿಡಿದು ನಿಲ್ಲಿಸಿಕೊಳ್ಳಬಲ್ಲವನಾಗಿದ್ದ. ಇವರ ಈ ವಿಶಿಷ್ಟಶಕ್ತಿಯ ಬಗ್ಗೆ ಆ ಊರಿನ ಜನರಿಗೆ ಏನೂ ಗೊತ್ತಿರಲಿಲ್ಲ.

ಲೀಗೆ ಸಮುದ್ರದಲ್ಲಿ ಮೀನು ಹಿಡಿಯುವುದು ಅಂದರೆ ಪಂಚಪ್ರಾಣ. ಒಂದು ದಿನ ಒಬ್ಬ ಚಿಕ್ಕ ಹುಡುಗ ಬಂದು, "ಮೀನು ಹಿಡಿಯಲು ಹೋಗೋಣವೇ, ಅಣ್ಣ ಲೀ?" ಎಂದು ಕೇಳಿದ.

ಲೀಗೆ ಏಕೋ ಹುಡುಗನೊಡನೆ ಹೋಗಿ ಮೀನು ಹಿಡಿಯುವುದು ಬೇಡವೆನಿಸಿತು. "ಬೇಡ, ನಾನು ಬರೋಲ್ಲ," ಎಂದ. ಆದರೆ ಆ ಹುಡುಗ ಗೋಗರೆದ. ಒತ್ತಾಯ ಹೆಚ್ಚಾಯ್ತು.

"ಸರಿ, ಆದರೆ ಒಂದು ಕಂಡೀಷನ್. ನಾನು ನಿನಗೆ ಸೂಚನೆ ಕೊಟ್ಟ ಕೂಡಲೇ ನೀನು ಮೀನು ಹಿಡಿಯುವುದನ್ನು ನಿಲ್ಲಿಸಿ ಹಿಂದಕ್ಕೆ ಬರಬೇಕು. ಹಾಗಾದರೆ ಮಾತ್ರ ನಾನು ಬರ್ತೀನಿ," ಎಂದು ಹೇಳಿದ.

"ಓ, ಅದಕ್ಕೇನಂತೆ. ಹಾಗೇ ಮಾಡ್ತೇನೆ," ಎಂದು ಹುಡುಗನೂ ಮಾತು ಕೊಟ್ಟ.

ಲೀ ಮತ್ತು ಹುಡುಗ ಇಬ್ಬರೂ ಕಡಲ ಕಿನಾರೆಯುದ್ದಕ್ಕೂ ಸಾಗಿದರು. ದಾರಿಯಲ್ಲಿ ಲೀ, "ನಾನು ಸೂಚನೆ ಕೊಟ್ಟ ಕೂಡಲೇ ಹಿಂತಿರುಗಿ ಬರಬೇಕು, ಆಯ್ತಾ," ಎಂದು ಮತ್ತೆ ಹುಡುಗನನ್ನು ಎಚ್ಚರಿಸಿದ.

"ಖಂಡಿತಾ ಬರ್ತೇನೆ, ಪ್ರಾಮಿಸ್," ಎಂದ ಹುಡುಗ.

ನಡೆಯುತ್ತಿದ್ದವರು ಒಂದೆಡೆ ನಿಂತರು. ಹುಡುಗ ತನ್ನ ಗಾಳವನ್ನು ತೆಗೆದ. ಇನ್ನೇನು ನೀರಿಗೆ ಗಾಳವನ್ನು ಬೀಸಿ ಒಗೆಯಬೇಕು ಎನ್ನುವಾಗ "ಅದೇನು ಬೇಡ ಬಿಡು, ನಾನು ಈ ಸಮುದ್ರದ ನೀರನ್ನು ನನ್ನ ಬಾಯಲ್ಲಿ ಹಿಡಿದಿಟ್ಟುಕೊಳ್ತೀನಿ. ಆಮೇಲೆ ನೀನು ನಿನಗೆ ಬೇಕಾದ ಮೀನು ಆರಿಸಿಕೊಂಡುಬಿಡು. ನಾನು ನಿನಗೆ ಸೂಚನೆ ಕೊಟ್ಟ ಕೂಡಲೇ ನೀನು ಓಡಿ ಹಿಂದಕ್ಕೆ ಬಂದು ನನ್ನ ಜೊತೆಗೂಡಬೇಕು. ಇಲ್ಲದೇ ಹೋದರೆ ಅಪಾಯ ತಪ್ಪಿದ್ದಲ್ಲಾ ನೋಡು. ಪ್ರಾಮಿಸ್ ಮಾಡಿದ್ದೀಯಾ ಬೇರೆ," ಎಂದು ಹೇಳಿದ ಲೀ ತನ್ನ ಬಾಯನ್ನು ಎಷ್ಟಗಲ ಮಾಡಲು ಸಾಧ್ಯವೋ ಅಷ್ಟಗಲಕ್ಕೆ ತೆರೆದು ಸಮುದ್ರದ ನೀರನ್ನೆಲ್ಲಾ ಕುಡಿದು ತನ್ನ ಬಾಯಲ್ಲಿಟ್ಟುಕೊಂಡ. ನೀರಿಲ್ಲದ ಸಮುದ್ರದ ತಳದಲ್ಲಿ ಬಗೆಬಗೆಯ ಮೀನುಗಳು, ಶಂಖಗಳು, ಕಪ್ಪೆಚಿಪ್ಪುಗಳು, ಮುತ್ತುಗಳು ಕಂಡವು. ಹುಡುಗ ಎಲ್ಲವನ್ನೂ ಆರಿಸಿ ತರುವ ಕಾತುರದಲ್ಲಿದ್ದ. ಬೇಗಬೇಗನೇ ಆಯ್ದುಕೊಳ್ಳತೊಡಗಿದ. ಒಂದಕ್ಕಿಂತ ಒಂದು ಚೆನ್ನಾಗಿ ಕಂಡದ್ದರಿಂದ ಅದನ್ನು ಬಿಟ್ಟು ಇದು ಇದನ್ನು ಬಿಟ್ಟು ಅದು ಎಂದು ಆಯ್ದುಕೊಳ್ಳುತ್ತಾ ದೂರ ದೂರಕ್ಕೆ ನಡೆದ.

ಸಮುದ್ರವನ್ನು ಬಾಯಲ್ಲಿ ಬಹಳ ಹೊತ್ತು ಹಿಡಿದಿಟ್ಟುಕೊಳ್ಳುವುದು ತುಂಬಾ ಕಷ್ಟದ ಕೆಲಸ ಅಲ್ವಾ? ಸ್ವಲ್ಪ ಹೊತ್ತಾದ ಮೇಲೆ ಬಾಯಿ ನೋಯತೊಡಗಿತು. ಹುಡುಗ ಇನ್ನೂ ಹಿಂದಕ್ಕೆ ಬರುವ ಲಕ್ಷಣ ಕಾಣಿಸ್ತಾ ಇಲ್ಲ ಬೇರೆ. ಸರೀ, ಲೀ ಕೈಗಳನ್ನು ಬೀಸಿ ಹಿಂದಕ್ಕೆ ಬರಲು ಸೂಚನೆ ಕೊಟ್ಟ. ಚಪ್ಪಾಳೆ ಕೂಡ ತಟ್ಟಿದ. ಅಪೂರ್ವವಾದ ಶಂಖ, ಚಿಪ್ಪುಗಳನ್ನು ಆಯ್ದುಕೊಳ್ಳುವುದರಲ್ಲೇ ಮಗ್ನನಾಗಿದ್ದ ಹುಡುಗ ಈ ಸೂಚನೆಯನ್ನು ಗಮನಿಸಲೇ ಇಲ್ಲ!

ಬಾಯಲ್ಲಿದ್ದ ಸಮುದ್ರ ಉಕ್ಕುವಂತಾಯ್ತು. ಇನ್ನು ಹೆಚ್ಚು ತಡೆಯಲು ಆಗುವುದಿಲ್ಲ ಅನ್ನಿಸ್ತು. ಕೊನೆಯ ಬಾರಿಗೆ ಮತ್ತೆ ಪ್ರಯತ್ನಿಸಿದ, ಚಪ್ಪಾಳೆ ತಟ್ಟಿದ, ಕೈಗಳನ್ನು ಬೀಸಿ ಸೂಚನೆ ನೀಡಿದ. ಬಾಯಲ್ಲಿ ನೀರು ಇದ್ದಿದ್ರಿಂದ ಕೂಗಿ ಕರೆಯಲು ಸಾಧ್ಯವಿರಲಿಲ್ಲವಲ್ಲಾ! ತುಂಬಾ ತಳಮಳಗೊಂಡ. ಹುಡುಗನನ್ನು ಉಳಿಸಲೇಬೇಕು ಅಂತ ಎದ್ದು ಓಡೋಣ ಅಂದರೆ ಬಾಯಲ್ಲಿಯ ಸಮುದ್ರ ಎಲ್ಲಿ ಉಕ್ಕಿಬಿಡುತ್ತೋ ಅಂತ ಭೀತಿ. ಯಾವ ಸೂಚನೆಯೂ ತಲುಪದಷ್ಟು ದೂರ ಹೋಗಿದ್ದ ಹುಡುಗ. ಸಮುದ್ರ ಬಾಯಿಯಲ್ಲಿ ಉಕ್ಕಿ ಧಾರೆಯಾಗಿ ಹೊರಬರತೊಡಗಿತು. ನಂತರ ದೊಡ್ಡ ಅಲೆಗಳಾಗಿ ಹೊಮ್ಮಿ ಮೊದಲು ತಾನಿದ್ದ ಜಾಗವನ್ನು ಆವರಿಸಿಕೊಂಡಿತು. ಹುಡುಗ ಆ ಅಲೆಗಳ ರಭಸಕ್ಕೆ ಸಿಕ್ಕಿ ಮುಳುಗಿಹೋದ.

ಹುಡುಗನಿಲ್ಲದೇ ಲೀ ಒಬ್ಬನೇ ಹಿಂದಿರುಗಿದಾಗ ಹಳ್ಳಿಯ ಜನಕ್ಕೆ ಅನುಮಾನ ಬಂತು. ಲೀ ನಡೆದ ಘಟನೆಯನ್ನು ಪ್ರಾಮಾಣಿಕವಾಗಿ ವಿವರಿಸಿದರೂ ಅವರು ನಂಬಲಿಲ್ಲ. ಪಂಚಾಯಿತಿ ಸೇರಿಸಿ ಅವನ ಶಿರಚ್ಛೇದನಕ್ಕೆ ಆಜ್ಞೆ ಮಾಡಲಾಯ್ತು.

ಮಾರನೆಯ ದಿನ ಬೆಳಿಗ್ಗೆ, ಇನ್ನೇನು ಲೀಯ ತಲೆ ಕಡಿದುರುಳಿಸಬೇಕು. ಆಗ ಲೀ, "ಮಾನ್ಯ ಪಂಚ ಪ್ರಧಾನರೆ, ನನ್ನ ತಾಯಿಯನ್ನು ಒಮ್ಮೆ ನೋಡಿ ಮಾತಾಡಿಸಿ, ವಿದಾಯ ಹೇಳಿ ಬರಲು ಅವಕಾಶ ಕೊಡಬೇಕು," ಎಂದು ಕೇಳಿದ. ಸಾಯುವ ಮನುಷ್ಯನ ಕೊನೆಯ ಇಚ್ಛೆಯನ್ನು ಪೂರೈಸುವುದು ಕರ್ತವ್ಯ ತಾನೇ? ಸರಿ ಮತ್ತೆ. ಅನುಮತಿ ಸಿಕ್ಕಿತು.

ಓಡೋಡಿ ಮನೆಗೆ ಬಂದ ಲೀ ತನ್ನ ತಾಯಿಗೆ ಮತ್ತು ಸೋದರರಿಗೆ ನಡೆದ ಘಟನೆಯನ್ನು ವಿವರಿಸಿದ. ಎಲ್ಲರೂ ಸೇರಿ ಆಪತ್ತಿನಿಂದ ಪಾರಾಗುವ ಬಗೆ ಯೋಚಿಸಿದರು. ಹೇಗೂ ಐದೂ ಜನ ಒಂದೇ ತರಹ ಇದ್ದಾರಲ್ವಾ! ಒಬ್ಬರ ಬದಲಿಗೆ ಮತ್ತೊಬ್ಬ ಹೋಗಿ ಉಪಾಯದಿಂದ ಶಿಕ್ಷೆಯನ್ನು ತಪ್ಪಿಸಿ ಕೊಳ್ಳಲು ಬರುತ್ತೇನೋ ಎಂದು ಒಂದು ಪ್ಲಾನ್ ಮಾಡಿದರು. ಶಿರಚ್ಛೇದನಕ್ಕೆ ತಾನೆ ಆಜ್ಞೆಯಾಗಿದ್ದು. ಸರಿ, ಕಬ್ಬಿಣದಂತಹ ಕುತ್ತಿಗೆಯವ ಲೂನನ್ನು ಕಳಿಸಿದರೆ ಅವನ



ತಲೆ ಕಡಿಯಲು ಸಾಧ್ಯವಾಗದು, ಅಲ್ಲವೇ ? ಎಂದು ತೀರ್ಮಾನಿಸಿ **ಲೀ** ಬಟ್ಟೆಗಳನ್ನು **ಲೂ**ಗೆ ತೊಡಿಸಿ ಹೊರಕಳಿಸಿದರು.

ತಲೆ ಕಡಿಸಿಕೊಳ್ಳಲು ಸಿದ್ಧನಾಗಿ ಬಂದ **ಲೂ**ನನ್ನು **ಲೀ** ಎಂದೇ ತಿಳಿದ ಹಳ್ಳಿಯ ಜನರು ಅವನನ್ನು ವಧಾಸ್ಥಾನಕ್ಕೆ ಕರೆದೊಯ್ದರು. ಅವನ ತಲೆಯನ್ನು ಬಲಿಪೀಠದಲ್ಲಿಟ್ಟು ಕಟುಕ ತನ್ನ ದೊಡ್ಡ ಗಂಡುಗೊಡಲಿಯಿಂದ ಬಲವಾಗಿ ಕತ್ತಿನ ಮೇಲೆ ಹೊಡೆದ. ತಲೆ ಉರುಳುವ ಬದಲು ''ಖಣಿಲ್'' ಎಂಬ ಶಬ್ದದೊಂದಿಗೆ ಕೊಡಲಿಯೇ ಪುಟಿದು ಹಿಂದಕ್ಕೆ ಬಂತು. ಮತ್ತೆ ಮತ್ತೆ ಬೀಸಿದಾಗಲೂ ಅದೇ ರೀತಿಯಾಯ್ತು, ಅವನ ತಲೆ ಕಡಿಯಲು ಆಗಲೇ ಇಲ್ಲ!

ಹಳ್ಳಿಗರಿಗೆ ಸಿಟ್ಟು ಬಂತು. ''ಇವನ ಅಪರಾಧಕ್ಕೆ ಶಿಕ್ಷೆ ಆಗಲೇಬೇಕು. ಇವನನ್ನು ಸಮುದ್ರದಲ್ಲಿ ಮುಳುಗಿಸಿ ಬಿಡಿರಿ,'' ಎಂದು ಪಂಚಪ್ರಧಾನರು ಕೂಗಿ ಹೇಳಿದರು.

ಸರಿ. ಸಾಯುವುದಕ್ಕೆ ಮುನ್ನ ತನ್ನ ತಾಯಿಯನ್ನು ಕಂಡು ವಿದಾಯ ಹೇಳಲು ಮನೆಗೆ ಹೋಗಿಬರಲು ಅನುಮತಿ ಕೇಳಿದ. ಪ್ರಧಾನರು ಒಪ್ಪಿದರು.

**ಲೂ** ಸುರಕ್ಷಿತವಾಗಿ ಮನೆಗೆ ಬಂದರೂ ಶಿಕ್ಷೆ ತೊಲಗಿರಲಿಲ್ಲ. ಸಮುದ್ರದಲ್ಲಿ ಮುಳುಗಿಸಲು ಸನ್ನಾಹ ಮಾಡಿದ್ದು ತಿಳಿದು ಮೂರನೇ ಸೋದರ **ತಾವೋ** ಕೂಡಲೇ ಲೀಯ ಬಟ್ಟೆಗಳನ್ನು ಧರಿಸಿ ಹೊರಬಂದ. ಹೇಗೂ ಆತ ತನ್ನ ಕಾಲುಗಳನ್ನು ಮೈಲುಗಟ್ಟಲೇ ಉದ್ದಕ್ಕೆ ಬೆಳೆಸಬಲ್ಲವನಾಗಿದ್ದನಲ್ಲವೇ ? ಇನ್ನು ಮುಳುಗುವ ಹೆದರಿಕೆ ಎಲ್ಲಿಯದು ?

**ತಾವೋ**ನನ್ನು ಲೀ ಎಂದೇ ಭಾವಿಸಿದ ಹಳ್ಳಿಯ ಜನ ಅವನನ್ನು ಹಡಗಿಗೆ ಹತ್ತಿಸಿ ದೂರ ಸಮುದ್ರಕ್ಕೆ ಕರೆದೊಯ್ದು ನೀರಿಗೆ ಎಸೆದರು. ಮೇಲಿಂದ ಬಿದ್ದ ರಭಸಕ್ಕೆ ನೀರಿನೊಳಗೆ ಮುಳುಗಿದ **ತಾವೋ** ಸ್ವಲ್ಪ ಹೊತ್ತಿನಲ್ಲೇ ತನ್ನ ತಲೆಯನ್ನು ನೀರಮೇಲಕ್ಕೆ ತಂದ. ಕಾಲುಗಳನ್ನು ಉದ್ದಕ್ಕೆ ಬೆಳೆಸಲಾರಂಭಿಸಿದ. ಕಾಲುಗಳು ಸಾಗರತಳ ತಲುಪಿದವು. ಹಾಗೇ ನಡೆಯುತ್ತಾ ಹಡಗನ್ನು ಹಿಂಬಾಲಿಸತೊಡಗಿದ.

ಹಳ್ಳಿಗರಿಗೆ ಆಶ್ಚರ್ಯ. ಜೊತೆಗೆ ಸಿಟ್ಟು. ಏನು ಮಾಡಿದರೂ ಇವನನ್ನು ಸಾಯಿಸಲು ಆಗುತ್ತಿಲ್ಲವಲ್ಲಾ! ಖಡ್ಗದಿಂದ ಆಗಲಿಲ್ಲ, ನೀರಿನಿಂದ ಆಗಲಿಲ್ಲ. ಮತ್ತೆ? ಬೆಂಕಿಯಲ್ಲಿ ಹಾಕಿ ಸುಟ್ಟುಬಿಟ್ಟರೆ ? ಸರಿ. ಮರುದಿನ ಅವನನ್ನು ಬೆಂಕಿಯಲ್ಲಿ ಸುಟ್ಟುಬಿಡಲು ದೊಡ್ಡದೊಂದು ಕೊಂಡ ಸಿದ್ಧಮಾಡಿದರು.

ಸಾಯುವ ಮೊದಲು ಮತ್ತೆ ತನ್ನಮ್ಮನಿಗೆ ವಿದಾಯ ಹೇಳುವುದಾಗಿ ಅನುಮತಿ ಕೇಳಿದ. ಸಾಯುವವನ ಕೊನೆಯ ಆಸೆ ಪೂರೈಸಲೇ ಬೇಕಲ್ವೇ ? ಸರಿ. **ತಾವೋ** ಮನೆಯೊಳಗೆ ಹೋದ. ಹೊರಬಂದವನು ಅವನ ತಮ್ಮ **ಮಾವೋ**. ನಿಮಗೆ ಗೊತ್ತಲ್ವೇ, **ಮಾವೋ**ನನ್ನು ಬೆಂಕಿ ಏನೂ ಮಾಡದು ಅಂತ.

ಅಪರಾಧಿ ತಪ್ಪಿಸಿಕೊಳ್ಳಲು ಅವಕಾಶ ಕೊಡಲೇಬಾರದು ಅಂತ ಹಳ್ಳಿಗರು **ಮಾವೋ**ನ ಕೈ ಕಾಲುಗಳನ್ನು ಬಿಗಿಯಾಗಿ ಕಟ್ಟಿಹಾಕಿ ಆ ಕೊಂಡದ ನಡುವೆ ದೂಡಿದರು. ನಿಗಿನಿಗಿ ಕೆಂಡ. ಭುಗಿಲೆದ್ದ ಜ್ವಾಲೆಗಳು. ಎಲ್ಲರೂ ನೋಡುತ್ತಿದ್ದಂತೆಯೇ **ಮಾವೋ**ನನ್ನು ಅಗ್ನಿ ಆವರಿಸಿತು. ಬೆಂಕಿಯಲ್ಲಿ ಬೇಯುತ್ತಿದ್ದರೂ ಆತ ನಗುತ್ತಲೇ ಇದ್ದ. ''ಇನ್ನಷ್ಟು ಹೆಚ್ಚು ಕಟ್ಟಿಗೆ ಹಾಕಿರಿ, ಬೆಂಕಿಯನ್ನು ಧಗಧಗ ಉರಿಸಿರಿ,'' ಎಂದು ಹೇಳುತ್ತಿದ್ದ. ಹಳ್ಳಿಯ ಜನಕ್ಕೆ ಇದನ್ನು ನಂಬಲಿಕ್ಕೇ ಆಗಲಿಲ್ಲ! ಬೆಂಕಿ ತಣ್ಣಗಾದಮೇಲೆ ಹೊರಬಂದವನನ್ನು ಹೇಗಾದರೂ ಮಾಡಿ ಶಿಕ್ಷಿಸಲೇಬೇಕಲ್ಲ ಎಂದು ಬೇರೆ ವಿಧಾನಗಳ ಬಗ್ಗೆ ಚಿಂತಿಸಿದರು.

''ಅವನನ್ನು ಕುಲುಮೆಯಲ್ಲಿ ಹಾಕಿ ಉಸಿರುಗಟ್ಟಿಸಿ ಸಾಯಿಸೋಣ,'' ಎಂದು ಗುಂಪಿನಿಂದ ಯಾರೋ ಕೂಗಿದರು.

''ಆಗಲೂ ಸಾಯಲಿಲ್ಲವೆಂದರೆ ಅವನು ನಿರಪರಾಧಿಯೇ ಸರಿ ಅಂತ ತೀರ್ಮಾನಕ್ಕೆ ಬರಬೇಕಾಗುತ್ತೆ. ಯಾಕೆಂದರೆ ದೇವರು ನಿರಪರಾಧಿಗೆ ಯಾವಾಗಲೂ ಸಹಾಯ ಮಾಡ್ತಾನೆ ಅಲ್ವಾ ?'' ಎಂದರು ಇನ್ನೊಬ್ಬರು.

ಸರಿ, ಕೊನೆಯ ಬಾರಿಗೆ ತನ್ನಮ್ಮನಿಗೆ ವಿದಾಯ ಹೇಳಿಬರಲು ಪ್ರಧಾನರ ಅಪ್ಪಣೆ ಪಡೆದು ಮನೆಗೆ ಹೋದ **ಮಾವೋ** ತನ್ನ ತಮ್ಮ **ಜಿಯಾಂಗ್**‌ಗೆ **ಲೀ**ಯ ಬಟ್ಟೆ ಉಡಿಸಿ ಹೊರಕಳಿಸಿದ. ಹೇಗೂ **ಜಿಯಾಂಗ್** ಉಸಿರನ್ನು ಎಷ್ಟು ಹೊತ್ತು ಬೇಕೋ ಅಷ್ಟು ಹೊತ್ತು ಬಿಗಿಹಿಡಿಯುವ ಸಾಮರ್ಥ್ಯ ಇರುವವನಲ್ಲವೇ !

ಈ ಬಾರಿ ಮಾತ್ರ ಹಳ್ಳಿಗರು ತುಂಬಾ ಜಾಗರೂಕರಾಗಿದ್ದರು. ಉಸಿರುಗಟ್ಟಿಸಲು ಒಂದು ಕುಲುಮೆಯನ್ನು ಆಯ್ದುಕೊಂಡು ಅದರಲ್ಲಿ ಹೊಗೆಯ ಬದಲಾಗಿ ದಪ್ಪನಾಗಿ ಬೆಣ್ಣೆ ಮುದ್ದೆಯಂತಹ ಮೆದುಕ್ರೀಮ್ ತುಂಬಿದ್ದರು. ಅದರಲ್ಲಿ ಮುಳುಗಿದವನಿಗೆ ಉಸಿರಾಡಲು ಸಾಧ್ಯವೇ ಇಲ್ಲ ಅನ್ನಿ! ಇನ್ನೇನು ಅಪರಾಧಿ ಸತ್ತೇ ಹೋಗ್ತಾನೆ ಎನ್ನುವ ದೃಢ ನಂಬಿಕೆಯಿಂದ **ಜಿಯಾಂಗ್**‌ನನ್ನು **ಲೀ** ಎಂದೇ ತಿಳಿದು ಆ ಕ್ರೀಮ್ ರಾಶಿಯೊಳಗೆ ಮುಳುಗಿಸಿಬಿಟ್ಟರು. ಕುಲುಮೆಯ ಸುತ್ತಲಿದ್ದ ಕಿಂಡಿಗಳನ್ನು, ಬಾಗಿಲನ್ನು ಭದ್ರವಾಗಿ ಮುಚ್ಚಿದರು.



ಇಡೀ ರಾತ್ರಿ ಆ ಕುಲುಮೆಯ ಸುತ್ತ ಕುಳಿತು ಕಾದರು. ಬೆಳಗಿನ ಜಾವ ಕುಲುಮೆಯ ಬಾಗಿಲನ್ನು ತೆರೆದರು. ಹೆಣವನ್ನು ನಿರೀಕ್ಷಿಸಿದ್ದವರಿಗೆ ಮತ್ತೆ ಆಘಾತ ! **ಜಿಯಾಂಗ್** ಹಾಯಾಗಿ ಮುಗುಳ್ನಗುತ್ತಾ ''ಆSS ! ಎಂಥಾ ಸೊಗಸಾದ ನಿದ್ದೆ, ಇಂಥ ನಿದ್ದೆ ಮಾಡದೆ ಬಹಳ ದಿನಗಳೇ ಆಗಿತ್ತು,'' ಎನ್ನುತ್ತಾ ಆಕಳಿಸುತ್ತಾ ಹೊರಬಂದ.

ಹಳ್ಳಿಗರಿಗೆ ಸಾಕು ಸಾಕಾಯ್ತು. ಶಿಕ್ಷೆ ನೀಡುವ ವಿಧಾನಗಳೆಲ್ಲವನ್ನೂ ಅವರು ಪ್ರಯೋಗಿಸಿದ್ದರು. ಇವನಿಗೆ ಶಿಕ್ಷೆ ನೀಡಲೆಂದೇ ಎಲ್ಲರೂ ಎರಡು ಮೂರು ದಿನ ಕೆಲಸಗಳನ್ನೆಲ್ಲಾ ಬಿಟ್ಟುಬಂದಿದ್ದರು. ಎಲ್ಲವೂ ನಿಷ್ಫಲ.

''ನಾವು ಕೊಟ್ಟ ಶಿಕ್ಷೆಗಳೆಲ್ಲವನ್ನೂ ನೀನು ಸುಲಭವಾಗಿ ಜಯಿಸಿದ್ದರಿಂದ ನೀನು ನಿರಪರಾಧಿಯೇ ಇರಬೇಕು. ನಿನ್ನನ್ನು ಬಿಡುಗಡೆ ಮಾಡಲು ಪಂಚಾಯ್ತಿ ಒಪ್ಪಿದೆ. ನೀನೀಗ ಸ್ವತಂತ್ರ,'' ಎಂದು ಪಂಚಪ್ರಧಾನರು ಘೋಷಿಸಿದರು.

ಐವರು ಸೋದರರಿಗೆ ಮತ್ತು ಅವರ ಅಮ್ಮನಿಗೆ ತುಂಬಾ ಸಂತೋಷವಾಯ್ತು. ನಿಜ, ಅವರು ಯಾವಾಗಲೂ ನಿರಪರಾಧಿಗಳೇ. ಯಾರಿಗೂ ಕೇಡು ಬಗೆದವರಲ್ಲ, ಆ ಪುಟ್ಟ ಹುಡುಗನದೇ ತಪ್ಪು. ಮೀನು ಹಿಡಿಯಲು ಹೋದವನು ಬೆಲೆಬಾಳುವ ಶಂಖ, ಚಿಪ್ಪುಗಳನ್ನು ಆಯ್ದುಕೊಳ್ಳುವ ಭರದಲ್ಲಿ ಲೀ ನೀಡಿದ ಎಚ್ಚರಿಕೆಯನ್ನು ಮರೆತು, ಸರಿಯಾದ ಸಮಯಕ್ಕೆ ಹಿಂದಕ್ಕೆ ಬರದೆ ಮುಳುಗಿಹೋಗಿದ್ದ. ಲೀ ಮಾತನ್ನು ಕೇಳಿದ್ದರೆ ಇಷ್ಟೆಲ್ಲಾ ರಾದ್ಧಾಂತ ಆಗುತ್ತಲೇ ಇರಲಿಲ್ಲ, ಅಲ್ವೇ ? ನೀವೇನಂತೀರಿ ?

ನಂದಿತಾ ಹೇಳಿದ ಕಥೆ ಇಷ್ಟು. ಹೇಗಿದೆ ಕಥೆ ? ಇಷ್ಟ ಆಯ್ತ? ನಿಮಗೂ ಇಂತಹ ಕಥೆಗಳು ಗೊತ್ತಿದ್ರೆ, ನಿಮ್ಮ ತರಗತಿಗಳಲ್ಲಿ ಹೇಳಿ. ಬಹಳ ವಿಶೇಷ ಅನ್ನೋ ಕಥೆ ಇದ್ರೆ ಮತ್ತೆ ನಮಗೆ ಕಳಿಸಬಹುದಲ್ಲಾ ? ಬರೀರಿ ಮತ್ತೆ. ಬೈ.. ಬೈ...

*(ಚೀನಾ ದೇಶದ ಜಾನಪದ ಕಥೆಯೊಂದರ ರೂಪಾಂತರ).*

ಬೇದ್ರೆ ಎನ್. ಮಂಜುನಾಥ
ನಂ ಸಿ-೩, ಆಕಾಶವಾಣಿ ಸಿಬ್ಬಂದಿ ವಸತಿ ಗೃಹಗಳು
ಚಿತ್ರದುರ್ಗ - ೫೭೭ ೫೦೧

## ದೃಷ್ಟಿ ಭ್ರಮೆ

**ಇಟ್ಟಿಗೆಗಳ ಕತೆ**

ಇಲ್ಲಿರುವ ಬಿಳಿ ಇಟ್ಟಿಗೆ ಸ್ವಲ್ಪ ದೊಡ್ಡದಾಗಿದೆ

ಈ ಬಿಳಿ ಇಟ್ಟಿಗೆಗಿಂತಲೂ

-ಅಲ್ಲವೇ ?

***ವಿವರಣೆ***

ತಪ್ಪು : ಎರಡರ ಗಾತ್ರವೂ ಒಂದೇ. ಹಾಗೇನಾದರೂ ಒಂದು ಚಿಕ್ಕದು ಒಂದು ದೊಡ್ಡದೆಂದು ಕಾಣಿಸಿದರೆ ಅದಕ್ಕೆ ಅವುಗಳಲ್ಲಿನ ಬದಿಗಿರುವ ಕಪ್ಪು ಚೌಕಟ್ಟಿನ ಉದ್ದಳತೆಯಲ್ಲಿನ ವ್ಯತ್ಯಾಸವೇ ಕಾರಣ.



## ದಲಿತ ಲೋಕ (ಕಿರುನಾಟಕ)

ಎಸ್. ಮಾಲತಿ

**ಪುಟ : 24** **ಬೆಲೆ : ರೂ. 10**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

''ದಲಿತರು ಬರುವರು ದಾರಿಬಿಡಿ''! ಎಂಬ ಕೂಗಿನೊಂದಿಗೆ ಪ್ರಾರಂಭವಾದ ದಲಿತ ಚಳುವಳಿ ನಿರೀಕ್ಷೆಯ ಗುರಿ ಮುಟ್ಟಿಲ್ಲದಿರುವುದು ಆದಕ್ಕೊಂದು ಹಿನ್ನಡೆ. ಇಂಥ ಹೋರಾಟಗಳಿಗೆ ಇನ್ನೂ ಕೆಲವು ಮಾಧ್ಯಮಗಳು ಸಜ್ಜಾಗಿದ್ದರೂ ರಂಗ ಮಾಧ್ಯಮಗಳ ಮೂಲಕ ಬೆಳಕು ಚೆಲ್ಲುವುದು ಹೆಚ್ಚು ಪರಿಣಾಮಕಾರಿ ಎಂಬುದು ಈ ಚಿಕ್ಕ ಕೃತಿಯ ಲೇಖಕಿಯ ಅನಿಸಿಕೆ. ದಲಿತರ ಶೋಷಣೆ ನಮ್ಮ ಸಮಾಜಕ್ಕೆ ಎಂದೂ ಭೂಷಣವಲ್ಲವೆಂಬ ಸತ್ಯದ ಅರಿವು ಮೂಡಿಸುತ್ತದೆ.




## ಸಾವಿರದ ಬೇವಿನ ನೆರಳು

ಡಾ|| ಸಂಜೀವ ಕುಲಕರಣಿ

**ಪುಟ : 76** **ಬೆಲೆ : ರೂ. 20**

**ಶ್ರೀಹರಿ ಪ್ರಕಾಶನ,** ನವೋದಯ ನಗರ, ಧಾರವಾಡ-3

ಸ್ವದೇಶಿ, ಸ್ವಾವಲಂಬನೆ, ಸ್ವರಾಜ್ಯ ಇಂಥ ಮೌಲಿಕ ಸುಂದರ ಶಬ್ದಗಳನ್ನು ಅಂದಗೆಡಿಸಿ ಮಲಿನಗೊಳಿಸುತ್ತಿರುವ ಹಾಗೂ ಜನರನ್ನು ದಿಕ್ಕು ತಪ್ಪಿಸುತ್ತಿರುವ ಇಂದಿನ ಸನ್ನಿವೇಶದಲ್ಲಿ ತುಂಬ ಉಪಯುಕ್ತವಾದ ಪುಸ್ತಕ. ಸ್ವದೇಶೀ ತತ್ವವನ್ನು ಪ್ರಾರಂಭದಲ್ಲಿ ಸರಿಯಾಗಿ ಅರ್ಥೈಸಿ ಕೊಳ್ಳದಿದ್ದಲ್ಲಿ ಮುಂದಿನ ಹೆಜ್ಜೆಗಳನ್ನು ಗೊಂದಲಮಯ ದಾರಿಯಲ್ಲಿ ಕ್ರಮಿಸಬೇಕಾಗ ಬಹುದೆಂದು ಬಹಳ ಎಚ್ಚರಿಕೆಯಿಂದ ಇಲ್ಲಿ ತಿಳಿಸಲಾಗಿದೆ.



## ಜಂಗಮದ ಬದುಕು (ನಾಟಕ)

ಪ್ರಸನ್ನ

**ಪುಟ : 76** **ಬೆಲೆ : ರೂ. 40**

**ಒಂಟಿದನಿ ಪ್ರಕಾಶನ,** ಹೆಗ್ಗೋಡು-577417, ಸಾಗರ ತಾಲ್ಲೂಕು

ವಿಭಿನ್ನ ಶೈಲಿಯಲ್ಲಿ ನಾಟಕಗಳ ರಚನೆಗೆ ತೊಡಗಿದ ಪ್ರಸನ್ನರವರದ್ದು ರಂಗಭೂಮಿಯಲ್ಲೊಂದು ಹೊಸ ಹೆಜ್ಜೆ! ಕೇವಲ ಮೂರು ಪಾತ್ರಗಳಲ್ಲೇ ಮುಕ್ತಾಯಗೊಳಿಸಿದ ಈ ನಾಟಕದ ಕಥಾವಸ್ತು ಸಮಕಾಲೀನವಾದದ್ದು. ನಗರ ಜೀವನದಿಂದ ಪ್ರಾರಂಭವಾಗುವ ಪಾತ್ರಗಳು ಬದುಕಿನ ಎಲ್ಲ ಸ್ತರಗಳಲ್ಲೂ ಹಾಯ್ದು ಬಂದು ನಮ್ಮ ನಿಮ್ಮ ನಡುವೆ ರಿಂಗಣ ಸುತ್ತುತ್ತಾ ನಮ್ಮ ಮಧ್ಯೆಯೇ ಉಳಿದುಬಿಡುತ್ತವೆ. ಮನರಂಜನೆಯ ಕೈಗಾರಿಕೆಯತ್ತ ಮನುಷ್ಯ ದೌಡಾಯಿಸುತ್ತಿರುವ ಈ ದಿನಗಳಲ್ಲಿ, ಬದುಕಿನ ಕುರೂಪದತ್ತ ಸಹ ಕಣ್ಣುಹಾಯಿಸಬೇಕೆನ್ನುವ ಇಂಗಿತ.



## ಸಾಹಿತ್ಯ ಬಿಲ್ವ (ವಿಚಾರ-ವಿಮರ್ಶೆ)

ಡಾ|| ಮಂದಾಕಿನಿ ಪುರೋಹಿತ

**ಪುಟ : 132** **ಬೆಲೆ : ರೂ. 75**

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರ ಕೊಡ್ಲ, ಅಂಕೋಲಾ - 581 314 (ಉತ್ತರ ಕನ್ನಡ)

ಸಾಹಿತ್ಯ ವಿಮರ್ಶೆ, ಸಾಹಿತ್ಯಾವಲೋಕನ, ಸಾಹಿತಿಗಳ ವ್ಯಕ್ತಿತ್ವದ ಚಿತ್ರಣ ಈ ಮೂರು ಪ್ರಕಾರಗಳ ತ್ರಿವೇಣಿ ಸಂಗಮದಂತಿರುವ ಈ ಪುಸ್ತಕವು ಲೇಖಕಿಯ ಬಹುಮುಖ ಪ್ರತಿಭೆಗೊಂದು ಉದಾಹರಣೆ. ಆಳವಾದ ಅಧ್ಯಯನದಿಂದ ವಿಮರ್ಶಕ ದೃಷ್ಟಿಯಿಂದ ಆಕೆ ಸಾಹಿತ್ಯವನ್ನು ಕಂಡ ರೀತಿ ಅದ್ಭುತವೆನಿಸುತ್ತದೆ.



## ಫೈಝ್ ಅಹ್ಮದ್ ಫೈಝ್ (ಆಯ್ದ ಕವನಗಳು)

ಮೂಲ : ಫೈಝ್ ಅಹ್ಮದ್ ಫೈಝ್, ಅನು : ಎಲ್. ಕೆ. ಅತೀಕ್

**ಪುಟ : 72** **ಬೆಲೆ : ರೂ. 40**

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಕೋಲಾ - 581 314

ಫೈಝ್ ಅಹ್ಮದ್ ಫೈಝ್ ಉರ್ದು ಪ್ರಗತಿಪರ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ನಿರ್ಭೀತಿಯಿಂದ ಅಧಿಕಾರಶಾಹಿ, ದಬ್ಬಾಳಿಕೆಗಳ ವಿರುದ್ಧ ದನಿಯೆತ್ತಿದವರು. ಅವರ ಕಾವ್ಯಗಳಲ್ಲಿದ್ದ ಎಡಪಂಥೀಯ ಧೋರಣೆಗಳಿಂದಾಗಿ ಶೋಷಿತ ಜನರ ಮೆಚ್ಚುಗೆಗೆ ಪಾತ್ರರಾದವರು. ಅಂಥ ಅಪೂರ್ವ ಉರ್ದು ಕವಿಯ ಎದೆಯಾಳದ ಭಾವನೆಗಳನ್ನು ಶ್ರೀ ಎಲ್. ಕೆ. ಅತೀಕ್ ಕನ್ನಡಕ್ಕೆ ಅನುವಾದಿಸಿ ಓದುವ ಅವಕಾಶ ಕಲ್ಪಿಸಿದ್ದಾರೆ.



## ಪ್ರಭಾವತಿ (ಎರಡು ನಾಟಕಗಳು)

ಭಾಗೀರಥಿ ಹೆಗಡೆ

**ಪುಟ : 62** **ಬೆಲೆ : ರೂ. 40**

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಕೋಲಾ - 581 314

ಸನ್ನಿವೇಶ ನಿರ್ಮಾಣ ಹಾಗೂ ಪಾತ್ರಗಳ ಪ್ರೌಢತೆಯಿಂದಾಗಿ ಇಲ್ಲಿರುವ ಎರಡೂ ನಾಟಕಗಳು ಪ್ರತಿಭಾ ಶಿಖರಗಳಂತೆ ಮೇಲ್ಮಟ್ಟದಲ್ಲಿ ನಿಲ್ಲುತ್ತವೆ. ಈ ನಾಟಕದ ವಸ್ತುವನ್ನು, ಪಾತ್ರಗಳನ್ನು ಹುಡುಕಲು ಬಹುದೂರವೇನೂ ಹೋಗಬೇಕಾಗಿಲ್ಲ. ಕತ್ತಲ ರಾಜನ ಕತ್ತಲ ಸಾಮ್ರಾಜ್ಯದ ನಿತ್ಯ ಪ್ರಜೆಗಳಾದ ನಮ್ಮೆಲ್ಲರಿಗೂ ಅರ್ಥವಾಗುವಂತಹ, ಸುತ್ತು ಬಳಸು ಮಾತುಗಳಿಲ್ಲದ ನೇರ ಸಂಭಾಷಣೆ ಇದೆ. ಈ ನಾಟಕಗಳನ್ನು ಓದಿ ಆನಂದಿಸಬಹುದು.




## ನಮ್ಮ ಪರಿಸರ

ಡಾ|| ಪಿ. ಶಿವರಾಮ ರೈ

**ಪುಟ : 120** **ಬೆಲೆ : ರೂ. 40**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

ಜೀವಿಗಳಲ್ಲಿ ಅತ್ಯಂತ ಮೇಧಾವಿ ಮಾನವ ತನ್ನ ಸ್ವಾರ್ಥಕ್ಕಾಗಿ ಸಹಜೀವಿಗಳನ್ನು ಕಡೆಗಣಿಸಿ, ಸುಂದರ ಪರಿಸರವನ್ನೂ ಕೆಡಿಸಿ ತಾನೂ ಕೇಡುಗಾಲ ತಂದುಕೊಂಡಿದ್ದಾನೆ. ಪ್ರಗತಿಯ ಹೆಸರಿನಲ್ಲಿ ಪ್ರಕೃತಿಯ ಮೇಲಿನ ದೌರ್ಜನ್ಯ ಮೇರೆ ಮೀರುತ್ತಿದೆ. ಆರೋಗ್ಯಕರ ಪರಿಸರದ ಉಳಿವಿಗಾಗಿ ನಾವು ತಿಳಿದುಕೊಳ್ಳಬೇಕಾದ ಬಹಳಷ್ಟು ವಿಷಯಗಳು ಇಲ್ಲಿವೆ. ರೇಖಾಚಿತ್ರಗಳು ಮತ್ತು ಛಾಯಾಚಿತ್ರಗಳ ನೆರವಿನಿಂದ ಓದುಗರಿಗೆ ವಿಷಯ ಮತ್ತಷ್ಟು ಮನದಟ್ಟಾಗುವಂತೆ ಮಾಡಿದ್ದಾರೆ.




## ಹದ್ದು ಮೀರಿದ ಹಾದಿ (ನಾಟಕ)

ಪ್ರಸನ್ನ

**ಪುಟ : 88** **ಬೆಲೆ : ರೂ. 40**

**ಒಂಟಿದನಿ ಪ್ರಕಾಶನ,** ಹೊನ್ನೇಸರ ಅಂಚೆ, ಸಾಗರ ತಾಲ್ಲೂಕು

ಎರಡು ಶತಮಾನಗಳ ಹಿಂದೆ ಕಾಶಿಯಲ್ಲಿದ್ದ ನಾಟಕಕಾರ ಭರತೇಂದು ಹರಿಶ್ಚಂದ್ರರ ಕೊನೆಯ ದಿನಗಳನ್ನೇ ಈ ನಾಟಕದ ವಸ್ತುವಾಗಿ ಆಯ್ಕೆ ಮಾಡಲಾಗಿದೆ. ಶ್ರೀಮಂತ ದುಂದುಗಾರ ಭರತೇಂದು ಸಾವಿನೊಂದಿಗೇ ಪಗಡೆಯಾಟದ ಸರಸಮಾಡಿ ಸೋತು ಶರಣಾದ ವ್ಯಕ್ತಿತ್ವದ ಚಿತ್ರಣ. ಮಾನವ ಸಹಜವಾದ ಎಲ್ಲ ಭಾವನೆಗಳನ್ನೂ ಪಾತ್ರಗಳಲ್ಲಿ ಸಾಂಕೇತಿಕವಾಗಿ ತುಂಬಲಾಗಿದೆ.

- ಇಂದಿರಾ ಕುಮಾರಿ

# ಹತ್ತು ಶತಮಾನಗಳ ಕನ್ನಡ ಸಾಹಿತ್ಯ - ಇಪ್ಪತ್ತೈದು ಅಧ್ಯಾಯಗಳು

ಮ.ನ.ಜ ಅವರ ಈ ಪುಸ್ತಕದ ಮೊದಲ ಲೇಖನ ''ಶೈವ ಸಾಹಿತ್ಯದಲ್ಲಿ 'ಶಿವ', 'ಲಿಂಗ', 'ರುದ್ರ' ನನ್ನು ಕುರಿತು ಅಂಬೇಡ್ಕರ್'' ಎಂಬ ಶೀರ್ಷಿಕೆಯನ್ನು ಹೊಂದಿದೆ. ಮುಖ್ಯವಾಗಿ 'ಶಿವಾಂಶ' ಮತ್ತು ಮೂರ್ತಿ ಪೂಜೆ ಇವುಗಳ ನಡುವಿನ ಅಂತರವನ್ನು ಜವರಯ್ಯನವರು ವಚನ ಸಾಹಿತ್ಯವನ್ನು ಕೇಂದ್ರದಲ್ಲಿಟ್ಟುಕೊಂಡು ವಿಶ್ಲೇಷಿಸಿದ್ದಾರೆ. ಶಿವಾಂಶವು ವೈಯಕ್ತಿಕವಾಗಿ ಪಡೆವ ಅನುಭಾವ. ಅದನ್ನು ಸಾಂಸ್ಥೀಕರಣಗೊಳಿಸಿದಾಗ ಅದು ತನ್ನ ಅನುಭಾವದ ಅರ್ಥಗಳನ್ನು ಕಳೆದುಕೊಳ್ಳುತ್ತದೆ. ಶಿವಶರಣರು ಈ ಮಾತನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ಜವರಯ್ಯ ನವರು ಶಿವ, ಲಿಂಗ, ರುದ್ರ ಈ ಮೂರು ಶಬ್ದಗಳ ವಿವಿಧ ಪ್ರಭೇದಗಳನ್ನು ಲೇಖನದಲ್ಲಿ ಆಧಾರಸಹಿತವಾಗಿ ಬಿಚ್ಚಿಡುತ್ತಾರೆ. ಅಂಬೇಡ್ಕರರು ಬ್ರಹ್ಮ ಮತ್ತು ವಿಷ್ಣು ಇವರಿಬ್ಬರದೇ ಆರಾಧ್ಯವಿದ್ದಾಗ 'ತ್ರಿಮೂರ್ತಿ'ಯ ಕಲ್ಪನೆಯಲ್ಲಿ 'ಶಿವ' ಹೇಗೆ ಬಂದು ಸೇರಿಕೊಂಡ ಎಂಬುದನ್ನು ವಿವರಿಸುತ್ತಾರೆ. ಶಿವನು ಪ್ರಾಯಶಃ ಕೆಳವರ್ಗದವರ ದೇವತೆಯಾಗಿದ್ದ. ಆತನನ್ನು ಬ್ರಹ್ಮ ಮತ್ತು ವಿಷ್ಣುವಿನೊಡನೆ ಸೇರಿಸಿ ತ್ರಿಮೂರ್ತಿ ಕಲ್ಪನೆಯಾಯಿತು. ಆದರೆ ಮುಂದೆ 'ತ್ರಿಮೂರ್ತಿ' ಕಲ್ಪನೆಯೂ ಮಾಯವಾಗಿ ಬ್ರಾಹ್ಮಣರು ಒಬ್ಬೊಬ್ಬ ದೇವತೆಯನ್ನು ಆರಿಸಿಕೊಂಡು ಪ್ರತಿ ಪಕ್ಷಗಳ ಮೇಲೆ ದಾಳಿಯನ್ನೇಕೆ ಆರಂಭಿಸಿದರು ಎಂದು ಅಂಬೇಡ್ಕರ್ ಪ್ರಶ್ನಿಸುತ್ತಾರೆ. ಈ ರೀತಿಯಾಗಿ ಬ್ರಾಹ್ಮಣರ ಒಳಜಗಳದಿಂದಾಗಿ ಅವರು ಧರ್ಮವನ್ನು ರಾಜಕೀಯಗೊಳಿಸಿಬಿಟ್ಟಿರಬಹುದೆ ಎಂಬ ಪ್ರಶ್ನೆಯನ್ನು ಅಂಬೇಡ್ಕರ್ ಎತ್ತುತ್ತಾರೆ. ಧರ್ಮದ ಹೆಸರಿನಲ್ಲಿ ಎಷ್ಟೋ ಮಿಥ್‌ಗಳು ತಮ್ಮ ಸತ್ಯವನ್ನು ಬಿಟ್ಟುಕೊಡದೆ ಉಳಿದುಬಿಟ್ಟಿವೆ. ಶಿವನು ಆರ್ಯರ ದೇವತೆಯಾಗಿರಲಿಲ್ಲ ಎಂದು ಕೆಲವು ಇತಿಹಾಸಕಾರರೂ ಹೇಳಿದ್ದಾರೆ. ಅನಾರ್ಯವಾದುದನ್ನು ಆರ್ಯೀಕರಣಗೊಳಿಸುವ ಪ್ರಕ್ರಿಯೆಯಲ್ಲಿ ಶಿವನನ್ನು 'ತ್ರಿಮೂರ್ತಿ'ಗಳ ಗುಂಪಿಗೆ ಸೆಳೆದುಕೊಂಡಿರಬಹುದು. ಇದನ್ನೆಲ್ಲಾ ಕುರಿತು ಯಾಕೆ ಚರ್ಚೆಯಾಗಬೇಕಿದೆ ಎಂದರೆ ಆರ್ಯಪೂರ್ವ ಕಾಲದಲ್ಲಿ ಒಂದು ಸುಂದರ ಗ್ರಾಮೀಣ ಸಂಸ್ಕೃತಿ ಅಂದರೆ ಪ್ಯಾಸ್ಟೊರಲ್ ಸಂಸ್ಕೃತಿ ನಮ್ಮಲ್ಲಿ ಇತ್ತು. ನಾವು ಯಾರನ್ನು ಇಂದು ಹಿಂದುಳಿದವರೆಂದು ಕರೆಯುತ್ತೇವೋ ಅದು ಅವರ ಸಂಸ್ಕೃತಿಯಾಗಿತ್ತು. ಆರ್ಯರ ದಾಳಿಗೆ ತತ್ತರಿಸಿದ ಈ ಭೂಮಿಯ ಜನ ದಿಕ್ಕಾಪಾಲಾಗಿ ಓಡಿದರು. ಹಾಗೆಯೇ ಆರ್ಯರು ಸಾಧ್ಯವಾದಲ್ಲೆಲ್ಲಾ ಅನಾರ್ಯರನ್ನು ಹೊಸಗಿ ಹಾಕಿದರು. ಎಲ್ಲಿ ಸಾಧ್ಯವಾಗಲಿಲ್ಲವೋ ಅಲ್ಲಿ ಅನಾರ್ಯರ ದೇವತೆಗಳನ್ನು, ಸಂಸ್ಕೃತಿಯನ್ನು ತಮ್ಮ ಸಂಸ್ಕೃತಿಯೊಡನೆ ಮಿಳಿತಗೊಳಿಸಿಕೊಂಡು, ಅನಾರ್ಯರಿಗೆ ದ್ವಿತೀಯ ದರ್ಜೆಯ ಅಥವಾ ಅದಕ್ಕೂ ಕೆಳಗಿನ ನಾಗರಿಕತ್ವ ದಯಪಾಲಿಸಿದರು. ನಮ್ಮ ಇಂದಿನ ಸಂಶೋಧನೆಯ ಗುರಿ ಆ ಗ್ರಾಮೀಣ ಸಂಸ್ಕೃತಿಯ ತಂತುಗಳನ್ನು ಜೋಡಿಸುವುದಾಗಬೇಕು. ಇದನ್ನು ಮ. ನ. ಜವರಯ್ಯನವರು ಅಲ್ಲಲ್ಲಿ ವ್ಯಕ್ತಪಡಿಸಿದ್ದಾರೆ.


## ಏಜೆಂಟರು ಬೇಕಾಗಿದ್ದಾರೆ

*'ಹೊಸತು' ಪತ್ರಿಕೆಗೆ ಏಜೆಂಟರುಗಳಿಲ್ಲದ ಊರುಗಳಲ್ಲಿ ಪತ್ರಿಕೆಯನ್ನು ಮಾರಾಟ ಮಾಡಬಲ್ಲ ಏಜೆಂಟರುಗಳು ಬೇಕಾಗಿದ್ದಾರೆ. ಆಸಕ್ತಿಯುಳ್ಳವರು ಏಜೆನ್ಸಿ ನಿಯಮಗಳಿಗಾಗಿ ಸಂಪರ್ಕಿಸಿ.*

*ವ್ಯವಸ್ಥಾಪಕರು, ಹೊಸತು*


ಪುಟಗಳು : ೪೫೪ ಬೆಲೆ : ರೂ. ೩೦೦
ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು - ೨೩




''ಬಸವಣ್ಣನ ವಚನ ಸಾಹಿತ್ಯ : ಮರು ಚಿಂತನೆ'' ನನ್ನನ್ನು ಆಕರ್ಷಿಸಿದ ಇನ್ನೊಂದು ಲೇಖನ. ಇಲ್ಲಿ ಪ್ರಾರಂಭದಲ್ಲಿ ಬರುವ ಒಂದು ಮಾತು ಬಹಳ ಮಹತ್ವದ್ದು. ಜವರಯ್ಯ ಹೇಳುತ್ತಾರೆ :

''.........ವಚನ ಸಾಹಿತ್ಯದ ವಿಮರ್ಶೆಗೆ ಪ್ರಾಯಶಃ ವಿಮರ್ಶೆಯ ಮಾನದಂಡಗಳೇ ಬದಲಾಗಬೇಕಾಗುತ್ತದೆ; ಇಲ್ಲವೆ ವಚನ ವಿಮರ್ಶೆಯ ಪ್ರಕ್ರಿಯೆಯಲ್ಲಿಯೇ ವಚನ ಸಾಹಿತ್ಯದ ಕುರಿತ ವಿಮರ್ಶಾ ಮಾನದಂಡಗಳು ತನ್ನ ತಾನೇ ಸೃಷ್ಟಿಯಾಗಬೇಕಾಗುತ್ತದೆ. ಪ್ರತಿಯೊಬ್ಬ ಮಹತ್ವದ ವಿಮರ್ಶಕನಲ್ಲೂ ಅಗತ್ಯವಾಗಿ ಇರಬೇಕಾದ ಎಚ್ಚರವನ್ನು ಈ ಮಾತುಗಳು ಗಟ್ಟಿದನಿಯಲ್ಲಿ ಹೇಳುತ್ತವೆ. ವಿಮರ್ಶೆಯ ಮಾನದಂಡಗಳು ಸಾಹಿತ್ಯ ಕೃತಿಗಳಿಂದಲೇ ಹೊರಹೊಮ್ಮಬೇಕು. ಒಂದು ಸಾಹಿತ್ಯ ಕೃತಿಯು ವಿಮರ್ಶಾಮಾನದಂಡಗಳನ್ನು ಬದಲಾಯಿಸಬಹುದಾದಷ್ಟು ಶಕ್ತಿಶಾಲಿಯಾಗಿರಬೇಕು.'' ಜವರಯ್ಯನವರು ವಚನ ಸಾಹಿತ್ಯದ ಇಂಥ ಬಲವನ್ನು ಗುರುತಿಸುತ್ತಾ ಹೇಳುತ್ತಾರೆ : ''.....ಪ್ರಭು ನಿಷ್ಠೆಗೆ ಮಾತ್ರ ಹೆಸರಾಗಿದ್ದ ಶಬ್ದಕಲೆಯಂಥ ಕಾವ್ಯ ಮಾಧ್ಯಮವನ್ನು, ಜನನಿಷ್ಠವನ್ನಾಗಿಸಿ, ಆ ಮಾಧ್ಯಮವನ್ನು ಜನ ತಮಗೆ ತಾವೇ ಬಳಸುವಂತಾದುದರಿಂದ, ಅಕ್ಷರ ಸ್ವಾತಂತ್ರ್ಯದಿಂದ ವಂಚಿತವಾಗಿದ್ದ ವ್ಯವಸ್ಥೆಯು ತನ್ನ ವ್ಯಾಪ್ತಿಯನ್ನು ಅಪೂರ್ವವಾಗಿ ಹಿಗ್ಗಿಸಿಕೊಂಡಿತು....'' 'ಆತ್ಮಜ್ಞಾನ' ದಂಥ ಸಂಕೀರ್ಣ ಅನುಭವಗಳು ಜನರನ್ನು ತಲುಪಲು ವಚನಕಾರರು ಮತ್ತು ಅವರ ವಚನಗಳು ಹೇಗೆ ದುಡಿದವು ಎಂಬುದನ್ನು ಈ ಲೇಖನದುದ್ದಕ್ಕೂ ಗುರುತಿಸಲಾಗಿದೆ. ಎಲ್ಲವನ್ನು ಸ್ವೀಕರಿಸುವ ಮತ್ತು ಅವೆಲ್ಲವನ್ನೂ ಶಿವಸಂಸ್ಕೃತಿಯ ನೆಲೆಯಲ್ಲಿ ನೆಲೆಸುವಂತೆ ಮಾಡುವ ಬಸವಣ್ಣನವರ ವಚನಗಳಲ್ಲಿ 'ಕಾವ್ಯದ ಜಾದೂ' ಇದೆ ಎನ್ನುತ್ತಾರೆ ಜವರಯ್ಯನವರು. ಈ ಲೇಖನದ ಸಂದರ್ಭದಲ್ಲಿ ಜವರಯ್ಯನವರು ಜಾತಿ ನಿರಾಕರಣೆಯು ಎಷ್ಟು ಕಷ್ಟದ ಕೆಲಸ ಎಂಬುದನ್ನು ವಿವರಿಸುತ್ತ, ಬುದ್ಧನ ನಂತರ ಇಂಥ ನಿರಾಕರಣೆಗೆ ಬಸವಣ್ಣನದೇ ಅಪ್ರತಿಮ ಮಾದರಿ ಎನ್ನುತ್ತಾರೆ. ಹೀಗೆ ಜಾತಿಯನ್ನು ನಿರಾಕರಿಸುವ ಕೆಲಸಕ್ಕಷ್ಟೆ ಬದಲಾವಣೆ ಸೀಮಿತವಾಗದೆ 'ಬಂಡಾಯ ಮೂಲದ ಪ್ರತಿ ಸಂಸ್ಕೃತಿಯ ಮೂಲವನ್ನು ಸೈದ್ಧಾಂತಿಕ ನೆಲೆಗಳ ಮೇಲೆ' ಬಸವಣ್ಣ ಸ್ಥಾಪಿಸುತ್ತಾನೆ. ಗೋತ್ರದ ಬಗೆಗೆ ಬಸವಣ್ಣನಾಡಿದ ಮಾತುಗಳು ಮತ್ತು ಬಸವಣ್ಣ ಸ್ಥಾಪಿಸುವ ಹೊಸ ಗೋತ್ರವನ್ನು ಕುರಿತ ಚರ್ಚೆ ಇಲ್ಲಿದೆ.

'ಬೇಂದ್ರೆ ಪ್ರಣಯ ಕಾವ್ಯದ ಸೈದ್ಧಾಂತಿಕ ನೆಲೆಗಳು' - ಇದು ಇನ್ನೊಂದು ಮಹತ್ವದ ಲೇಖನ. ತಮ್ಮ ಪ್ರಣಯ ಕಾವ್ಯಗಳಲ್ಲಿ ಕೂಡ ಬೇಂದ್ರೆಯವರು ನೀಡುವ ಬಡತನದ ಚಿತ್ರಣ ಮತ್ತು ಪ್ರಣಯಕ್ಕೆ ಬಡತನ ಅಡ್ಡಿಯಾಗಲಾರದು ಎಂಬ ಬೇಂದ್ರೆಯವರ ಧೋರಣೆ ಜವರಯ್ಯನವರನ್ನು ಆಕರ್ಷಿಸಿವೆ. ಬೇಂದ್ರೆಯವರ ಕಾವ್ಯ ''ವ್ಯಕ್ತಿ ನೆಲೆಯಿಂದ ಸಮಷ್ಟಿ ನೆಲೆಗೆ'' ಸಾಗಲು ಯತ್ನಿಸುತ್ತದೆ ಎನ್ನುತ್ತಾರೆ. ಅವರ ಕಾವ್ಯ ಮೂಲತಃ ರಸಿಕ ಸಂಸ್ಕೃತಿಯಿಂದ ಬಂದುದಾಗಿದೆ ಎನ್ನುವ ಲೇಖಕರು ಈ ಸಂಸ್ಕೃತಿ ಭಾರತೀಯ ಸಂದರ್ಭದಲ್ಲಿ ಸರ್ವಾದರಣೀಯ ಅಥವಾ ಸರ್ವಪ್ರೇಮಿ ಸತ್ಯವಾಗಿರಲಿಲ್ಲ ಎನ್ನುತ್ತಾರೆ. ಬೇಂದ್ರೆಯವರು ಲೇಖಕರು ಹೇಳುವಂತೆ 'ಅಖಂಡ ಆಶಾವಾದಿ'. ಆತ್ಮಗೌರವವೇ

**ಮಾಧವ ಕುಲಕರ್ಣಿ**

ಪ್ರಧಾನವೆನ್ನಿಸುವ ದಲಿತ ಬಂಡಾಯದ ಸೈದ್ಧಾಂತಿಕ ನೆಲೆಯಲ್ಲಿ ನಿಂತ ಜವರಯ್ಯನವರಿಗೆ ಬೇಂದ್ರೆಯವರ ಕಾವ್ಯದಲ್ಲಿನ 'ಜನಲೋಕ' ಇಷ್ಟವಾಗಿದೆ.

'ಬುದ್ಧನ ಇನ್ನೊಂದು ಕತೆ' ಲೇಖನದಲ್ಲಿ ಹೊರ ಗೆಡಹಿದ ಸಂಗತಿಗಳು ಸಾಂಸ್ಕೃತಿಕ ಮಂಪರಿನಲ್ಲಿರುವ ಏನನ್ನೂ ಬಡಿದೆಬ್ಬಿಸುವ ಸಂಗತಿಗಳು. ಈ ಕತೆಗೆ ಆಧಾರಗಳೇನೆ ಇರಲಿ, ಬುದ್ಧನಲ್ಲಿ ಎಳೆವಯಸ್ಸಿನಲ್ಲಿ ಉಂಟಾಗುವ ಸನ್ಯಾಸಭಾವಕ್ಕೆ ಕೇವಲ ಮರಣ, ದುಃಖ, ಮುಪ್ಪು ಇತ್ಯಾದಿಗಳು ಮಾತ್ರ ಕಾರಣವೆಂದು ಹೇಳುತ್ತಿರುವುದನ್ನು ನನ್ನ ಮನಸ್ಸು ಅದೇಕೋ ಒಪ್ಪುತ್ತಿರಲಿಲ್ಲ. ನಮ್ಮ ಸಾಂಪ್ರದಾಯಿಕ ಪುರಾಣಗಳ ಹಿಂದೆ ಅಡಗಿರುವ ಐತಿಹಾಸಿಕ ಸತ್ಯವೇನೋ ಇರಬೇಕು ಅನ್ನಿಸುತ್ತಿತ್ತು. ಈ ಲೇಖನ ಅದಕ್ಕೆ ಪುರಾವೆ ಒದಗಿಸಿದೆ. ರೋಹಿಣಿ ನದಿಯ ಜಲವಿವಾದದಲ್ಲಿ ಅಹಿಂಸೆಯನ್ನು ಬೋಧಿಸಲು ಹೋಗಿ ತನ್ನ ಜನರಿಂದಲೇ ಬಹಿಷ್ಕಾರಕ್ಕೆ ಒಳಗಾಗಿ ದೇಶತ್ಯಾಗ ಮಾಡಿದ ಬುದ್ಧನ ಕತೆ ಇಲ್ಲಿದೆ. ಬುದ್ಧನು ತನ್ನ ಸುತ್ತಲಿನ ವಿಷಮ ಸ್ಥಿತಿಗೆ ಪರಿಹಾರವೇನು ಎಂಬುದನ್ನು ಅರಸುತ್ತಲೇ ಹೊರಟಿರಬೇಕು. ಮುಖ್ಯವಾಗಿ ನಾವೆಲ್ಲ ನಂಬಿದಂತೆ ಈ ವಿಷಮ ಸ್ಥಿತಿ ಆತನ ಮನಸ್ಸಿನಲ್ಲಿರಲಿಲ್ಲ, ಅದು ಸಮಾಜದಲ್ಲೇ ಇತ್ತು ಎಂಬುದನ್ನು ಈ ಲೇಖನ ತೋರಿಸಿಕೊಡುತ್ತದೆ. ಈ ಕತೆ ಭಾರತವನ್ನು ಬಿಟ್ಟು ಉಳಿದ ಬೌದ್ಧ ಧರ್ಮೀಯ ದೇಶಗಳಲ್ಲಿ ಪ್ರಚಾರದಲ್ಲಿದೆ ಎಂಬ ವಿಷಯ ಕೂಡ ಕಾತುರವನ್ನುಂಟುಮಾಡುತ್ತದೆ.

''ಕನ್ನಡ ಸಾಹಿತ್ಯ ಕಂಡ ದಲಿತ ಚಳವಳಿ : ಕೆಲವು ವಿಚಾರಗಳು'' ಎಂಬ ಲೇಖನ ಬಹಳ ಹರಿತವಾಗಿದೆ. ಕರ್ನಾಟಕದಲ್ಲಿ ಮತ್ತು ಮೈಸೂರು ಸಂಸ್ಥಾನದಲ್ಲಿ ಸಾಮಾಜಿಕವಾಗಿ ದಲಿತ ಚಳವಳಿ ಪ್ರಾರಂಭವಾದ ರೀತಿಯಿಂದ ಹಿಡಿದು, ಇತ್ತೀಚೆಗೆ ಅದು ಸಾಹಿತ್ಯಕವಾಗಿ ಮತ್ತು ಸಾಂಸ್ಕೃತಿಕವಾಗಿ ಒಂದು ಬಾಯಿ ಪಡೆದುದರ ವರೆಗೆ ಈ ಲೇಖನದ ವ್ಯಾಪ್ತಿ ಇದೆ. ಎರಡು ವಿಷಯಗಳಲ್ಲಿ ಲೇಖಕರಲ್ಲಿ ಅತೃಪ್ತಿ ಇದ್ದಂತೆ ಕಾಣುತ್ತದೆ. ಚಳವಳಿಯ ಮುಂಚೂಣಿಯಲ್ಲಿದ್ದ ಜನರು ಅಧಿಕಾರ ಸಿಕ್ಕೊಡನೆ ತಮ್ಮ ಬೆಂಬಲಿಗರನ್ನು ಕೈಬಿಟ್ಟ ರೀತಿ ಮತ್ತು 'ಬಹುಜನ ಸಮಾಜ ಪಕ್ಷ' ಕರ್ನಾಟಕದಲ್ಲಿ ಬೇರೂರದೆ ಇರಲು ಇರುವ ಕಾರಣಗಳು. ಈ ಚಳವಳಿಯನ್ನು ತುಂಬಾ ಸಮೀಪದಿಂದ ಕಂಡ ಮತ್ತು ಅದರ ಭಾಗವಾಗಿದ್ದವರು ಮ. ನ. ಜವರಯ್ಯ. ಅವರ ಕಳಕಳಿ ಈ ಲೇಖನದುದ್ದಕ್ಕೂ ಹರಡಿದೆ. ಇಡೀ ಈ ಗ್ರಂಥದಲ್ಲಿ ಅವರು ದಲಿತ ಬಂಡಾಯದ ಮೂಲ ಪ್ರೇರಣೆ ಆತ್ಮಗೌರವ ಎಂದು ಪ್ರತಿಪಾದಿಸುತ್ತಾರೆ. ಈ ಚಳವಳಿಯ ಮುಖಂಡರು ಆತ್ಮಗೌರವ ಬಿಟ್ಟು ವರ್ತಿಸಿದಾಗ ಜವರಯ್ಯನವರ ಮನಸ್ಸಿಗೆ ಸಹಜವಾಗಿಯೇ ನೋವಾಗಿದೆ. ಒಂದು ರೀತಿಯ ವಿಷಾದದ ಛಾಯೆ ಇಲ್ಲಿದೆ.

''ಸಮಕಾಲೀನ ಕನ್ನಡ ಕಾವ್ಯದಲ್ಲಿ ಅಂಬೇಡ್ಕರ್'' ಮತ್ತು ''ಕೆಲವು ಮುಸ್ಲಿಂ ಕವಿಗಳ ಕನ್ನಡ ಕಾವ್ಯ'' ಇವೆರಡೂ ಲೇಖನಗಳು ಜವರಯ್ಯನವರ ಸಮತೋಲನದ ದೃಷ್ಟಿಕೋನಕ್ಕೆ ಸಾಕ್ಷಿಯಾಗಿವೆ. ಅಂಬೇಡ್ಕರರ ಬಗ್ಗೆ ಅಡಿಗರು, ನಾಡಿಗ, ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ ಮುಂತಾದವರು ಬರೆದ ಪದ್ಯದ ವಿಶ್ಲೇಷಣೆ ಇಲ್ಲಿದೆ. ಅಂಬೇಡ್ಕರರನ್ನು ಈ ಎಲ್ಲ ಕವಿಗಳು ಒಪ್ಪಿಕೊಂಡ ರೀತಿಯ ಬಗ್ಗೆ ಜವರಯ್ಯನವರು ವಿಶ್ಲೇಷಿಸುತ್ತಾ ಹೋಗುತ್ತಾರೆ. ಆದರೆ ಪದ್ಯಗಳು ವಾಚಾಳಿಯಾದಾಗ ಮತ್ತು ಗದ್ಯದ ರೂಪವನ್ನು ಪಡೆಯುತ್ತಾ ಹೋಗುವಾಗ ಅವರು ಅಷ್ಟೇ ತೀವ್ರವಾಗಿ ತಮ್ಮ ಕಾವ್ಯಕಾಳಜಿಯನ್ನು ವ್ಯಕ್ತಪಡಿಸುತ್ತಾರೆ. ಹೀಗೆ ತಮ್ಮ ಸೈದ್ಧಾಂತಿಕ ನೆಲೆಗಳು ಮತ್ತು ಕಾವ್ಯಕಟ್ಟುವ ಕಲೆಯ ಬಗೆಗೆ ಅವರು ರಾಜಿ ಮಾಡಿಕೊಳ್ಳಲಾರೆ ಎಂಬ ನಿಲುವು ತಾಳುತ್ತಾರೆ. ಇದೇ ಗುಣ ನನಗೆ ತುಂಬಾ ಮೆಚ್ಚುಗೆಯಾಗಿದೆ. ಇದು ವಿಮರ್ಶಕನಲ್ಲಿ ಇರಲೇಬೇಕಾದ ಗುಣ. ನಾವು ಮೆಚ್ಚಿದ ವ್ಯಕ್ತಿಯನ್ನು ಪದ್ಯದಲ್ಲಿ ಒಬ್ಬ ಹೊಗಳಲು ಪ್ರಾರಂಭಿಸಿದಾಗ ಆ ಮೆಚ್ಚುಗೆಯ ರೂಪಕ್ಕೆ ಪದ್ಯದ ರೂಪ ಇದೆಯೋ ಇಲ್ಲವೋ ಎಂಬುದನ್ನು ಕುರಿತು ವಿಮರ್ಶಕ ಎಚ್ಚರದಿಂದಿರ ಬೇಕಾಗುತ್ತದೆ. ''ಕೆಲವು ಮುಸ್ಲಿಂ ಕವಿಗಳ ಕನ್ನಡ ಕಾವ್ಯ'' ಲೇಖನದಲ್ಲಿ ಅಕಬರ ಅಲಿ, ಸನದಿ ಮತ್ತು ನಿಸಾರ್ ಅಹಮ್ಮದ್ ಒಂದುಕಡೆಗಿದ್ದರೆ, ದಲಿತ ಬಂಡಾಯದ ಭಾಗವಾಗಿರುವ ಹಲವಾರು ಇತ್ತೀಚಿನ ಮುಸ್ಲಿಂ ಲೇಖಕರು ಇನ್ನೊಂದೆಡೆ ಇದ್ದಾರೆ. ಅಕಬರ ಅಲಿ, ಸನದಿ, ನಿಸಾರ್ ಅಹಮ್ಮದ್ ಇವರನ್ನು ಕಾಡಿರಬಹುದಾದ ಪ್ರತ್ಯೇಕತೆಯ ಪ್ರಜ್ಞೆಗೆ ಅವರ ಕಾವ್ಯದಲ್ಲಿ ಸ್ಥಾನ ಸಿಗಲಿಲ್ಲ. ಆದರೆ ಇತ್ತೀಚಿನ ಮುಸ್ಲಿಂ ಲೇಖಕರು ಅದರಲ್ಲೂ ಮುಸ್ಲಿಂ ಲೇಖಕಿಯರು 'ಮುಸ್ಲಿಂ ಜನ ವರ್ಗದ ಶೋಷಣಾದ ಹಿಂದಿನ ಘೋರ ಚಿತ್ರಗಳನ್ನು' ನೀಡಿದ್ದಾರೆ ಎಂದು ಜವರಯ್ಯನವರು ವಿಶ್ಲೇಷಿಸುತ್ತಾರೆ. ಇಲ್ಲಿ ಅಕಬರ ಅಲಿ, ಸನದಿ ಮತ್ತು ನಿಸಾರ್ ಅಹಮ್ಮದ್ ಅವರ ಕಾವ್ಯದ ಬಗ್ಗೆ ಆಕ್ಷೇಪಣೆಯ ಧ್ವನಿ ಇಲ್ಲ. ಇವರಾರಿಗೂ ಒಂದು ಕಾಲದಲ್ಲಿ ತಾವು ವ್ಯವಸ್ಥೆಯಿಂದ ಭಿನ್ನವಾದವರು ಎಂದು ಅನ್ನಿಸಿರಲಿಕ್ಕಿಲ್ಲ. ಮತ್ತು ಸಾಹಿತ್ಯಿಕ ವಸ್ತುಗಳು ಕೂಡ ಸಾಹಿತ್ಯದ ಮತ್ತು ಸಮಾಜದ ಯುಗಧರ್ಮಗಳನ್ನು ಅನುಸರಿಸಿಯೇ ಹೋಗುತ್ತಿರುತ್ತವೆ. ಬಸವಣ್ಣನ ಪ್ರತಿಭಟನೆ ಹೀಗೆಯೇ ಇರಬೇಕಾಗಿತ್ತು ಎಂದು ಹೇಳುವ ಹಕ್ಕು ನಮಗಿಲ್ಲ. ಜವರಯ್ಯನವರು ಈ ಪ್ರಜ್ಞೆಯನ್ನು ಇಟ್ಟುಕೊಂಡೇ ಮುಸ್ಲಿಂ ಕವಿಗಳ ಕಾವ್ಯವನ್ನು ವಿಶ್ಲೇಷಿಸಿದ್ದಾರೆ.

ಹಳಗನ್ನಡ, ಹೊಸಗನ್ನಡ, ವಚನ ಸಾಹಿತ್ಯ - ಹೀಗೆ ಹತ್ತು ಶತಮಾನಗಳ ಕಾವ್ಯವನ್ನು ಜವರಯ್ಯನವರು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸಿದ್ದಾರೆ. ಕಾವ್ಯ ಮತ್ತು ಕಾದಂಬರಿಗಳನ್ನು ಸಾಮಾಜಿಕವಾಗಿ ಹೇಗೊ ಹಾಗೆಯೇ ಅವುಗಳ ಬಂಧವನ್ನು ಒಳಹೊಕ್ಕು ನೋಡಿದ್ದಾರೆ. ಲಂಕೇಶರ 'ಅವ್ವ' ಕವಿಯು ಬದಲಾಗುತ್ತ ಹೋಗುವ ರೀತಿ, ಬೆಳೆಯುವ ರೀತಿ, ವಿಮರ್ಶೆಯ ಹೊಸ ಮಾನದಂಡಗಳು ಬೇಕಾಗಿರುವ ಹಂಬಲ, ಈ ಲೇಖನಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಒಂದು ವಿಮರ್ಶಾ ಸಿದ್ಧಾಂತವನ್ನು ಪ್ರತಿಪಾದಿಸುವ ಪೂರ್ವಪರಿಯಾಗಿ ಇಲ್ಲಿಯ ಲೇಖನಗಳು ರೂಪಗೊಂಡಂತೆ ತೋರುತ್ತವೆ. ಜವರಯ್ಯನವರ ಸಹೃದಯತೆ, ಸಾಮಾಜಿಕ ಕಳಕಳಿ, ಅಂಬೇಡ್ಕರರ ಅಭ್ಯಾಸದಿಂದ ಪಡೆದ ಜ್ಞಾನ, ಜನರನ್ನು ಕುರಿತು ಬರೆದ ಸಾಹಿತ್ಯದ ಬಗೆಗೆ ಇರುವ ಗೌರವ, ಇವೆಲ್ಲವೂ ಅನನ್ಯವಾಗಿ ಅವರ ವಿಮರ್ಶೆಯಲ್ಲಿ ಏಕೀಭವಿಸುತ್ತವೆ. ಕುಳಿತು ಮಾತನಾಡುತ್ತ, ಚಿಂತಿಸುತ್ತ, ಸಂವಾದದಲ್ಲಿ ಪಡೆಯುತ್ತ ಚಿಂತಿಸಿದ್ದನ್ನು ನಿರ್ಭಯವಾಗಿ ಹೇಳುತ್ತ ನಡೆಯುವ ಇಲ್ಲಿಯ ವಿಶ್ಲೇಷಣೆ ಬಹುದೊಡ್ಡ ಗಾತ್ರದ ಸಾಹಿತ್ಯವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಸೂಚನೆಯನ್ನು ನೀಡುತ್ತದೆ. ಈ ಗ್ರಂಥದಲ್ಲಿಯ ಲೇಖನಗಳಿಗಾಗಿ ಅವರು ಪಟ್ಟಿರಬಹುದಾದ ಶ್ರಮ ಮತ್ತು ಅಭ್ಯಾಸ ಬೆರಗುಗೊಳಿಸುವಂಥದು.

**ಮಾಧವ ಕುಲಕರ್ಣಿ**
ಇ.ಡಬ್ಲ್ಯು.ಎಸ್., ೧೫೫, ೯ನೇ ಮುಖ್ಯ ರಸ್ತೆ, ೧ನೇ ಹಂತ
ಹೆಬ್ಬಾಳ್, ಮೇಟಗಳ್ಳಿ ಅಂಚೆ, ಮೈಸೂರು - ೫೭೦ ೦೧೬

## ಹೊಸತು ಎಚ್‌ಎಮ್‌ಟಿ ಲೇಖನ ಸ್ಪರ್ಧೆ

*ವಿಡಂಬನೆ, ಲಲಿತ ಪ್ರಬಂಧ ಮತ್ತು ಪ್ರವಾಸ ಕಥನ - ಈ ಯಾವುದೇ ಸಾಹಿತ್ಯ ಪ್ರಕಾರದಲ್ಲಿ, 'ಹೊಸತು' ಸಂಪಾದಕರು ಅತ್ಯುತ್ತಮವೆಂದು ಪರಿಗಣಿಸುವ ಒಂದು ಬರಹಕ್ಕೆ ಸಾರ್ವಜನಿಕ ಉದ್ದಿಮೆಗಳಲ್ಲಿ ಪ್ರತಿಷ್ಠಿತ ಸಂಸ್ಥೆಯಾದ ಎಚ್‌ಎಮ್‌ಟಿ ಪ್ರತಿ ತಿಂಗಳೂ ಒಂದು ಕೈಗಡಿಯಾರವನ್ನು ಬಹುಮಾನವಾಗಿ ನೀಡುವ ಮೂಲಕ ಲೇಖಕರನ್ನು ಪ್ರೋತ್ಸಾಹಿಸಲು ಮುಂದೆ ಬಂದಿದೆ ಎಂಬುದನ್ನು ತಿಳಿಸಲು ಹರ್ಷಿಸುತ್ತೇವೆ.*

*ಲೇಖನಗಳು 'ಹೊಸತು' ಸಂಚಿಕೆಯ ಸುಮಾರು ಎರಡು ಮುದ್ರಿತ ಪುಟಗಳಲ್ಲಾಗುವಷ್ಟಿದ್ದು (ಸುಮಾರು ಒಂದು ಸಾವಿರ ಪದಗಳು) ನಮ್ಮ ಪತ್ರಿಕೆಗೆಂದೇ ಬರೆದವಾಗಿರಬೇಕು. ಬೇರೆಲ್ಲೂ ಪ್ರಕಟವಾಗಿರ ಕೂಡದು. ಪ್ರವಾಸ ಲೇಖನದೊಂದಿಗೆ ಅದಕ್ಕೆ ಸಂಬಂಧಿಸಿದ ಒಂದೆರಡು ಛಾಯಾಚಿತ್ರಗಳನ್ನು ಕಳಿಸಬಹುದು. ಬರೆಹ, ಹಾಳೆಯ ಒಂದೇ ಮಗ್ಗುಲಿನಲ್ಲಿ ಸ್ಫುಟವಾದ ಅಕ್ಷರಗಳಲ್ಲಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಕ್ಕೆ ಪಡೆಯಲಿಚ್ಛಿಸುವವರು ಸಾಕಷ್ಟು ಅಂಚೆ ಚೀಟಿ ಅಂಟಿಸಿದ ಸ್ವ ವಿಳಾಸ ಬರೆದ ಲಕೋಟೆ ಲಗತ್ತಿಸಿರಬೇಕು. ಲಕೋಟೆಯ ಮೇಲೆ* ***'ಹೊಸತು - ಎಚ್‌ಎಮ್‌ಟಿ ಲೇಖನ ಸ್ಪರ್ಧೆಗಾಗಿ'*** *ಎಂದು ನಮೂದಿಸಿರಬೇಕು. ಬಹುಮಾನದ ಬಗ್ಗೆ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. ಆಯಾ ತಿಂಗಳ ಏಳನೆಯ ತಾರೀಖಿನೊಳಗೆ ನಮಗೆ ತಲುಪಿದ ಲೇಖನಗಳನ್ನು ಪರಿಶೀಲಿಸಿ, ಆಯ್ಕೆಯಾದ ಲೇಖನವನ್ನು ಮುಂದಿನ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ವಿಜೇತರಿಗೆ ಎಚ್‌ಎಮ್‌ಟಿ ಸಂಸ್ಥೆಯವರು ಬಹುಮಾನ ನೀಡುವ ವ್ಯವಸ್ಥೆ ಮಾಡುತ್ತಾರೆ. ಒಂದೇ ಸಂಚಿಕೆಯಲ್ಲಿ ಮೂರೂ ಪ್ರಕಾರಗಳ ಬರಹಗಳು ಪ್ರಕಟವಾದಾಗ ಅವುಗಳ ಪೈಕಿ ಯಾವುದಕ್ಕೆ ಬಹುಮಾನವೆಂಬುದನ್ನು ಸಂಪಾದಕರು ತೀರ್ಮಾನಿಸುತ್ತಾರೆ.*

# ಕನ್ನಡ ಕಾವ್ಯಮೀಮಾಂಸೆಯ ನೆಲೆ

***ಸಂಸ್ಕೃತ ಕಾವ್ಯ ವಿಮರ್ಶೆಯು ಮುಖ್ಯವಾಗಿ ಕಾವ್ಯ ಮತ್ತು ಶಾಸ್ತ್ರಜನ್ಯವಾದುದು. ಆದುದರಿಂದ ಸಂಸ್ಕೃತ ಕಾವ್ಯಮೀಮಾಂಸೆಯ ನೆಲೆ ಮುಖ್ಯವಾಗಿ ಕೃತಿ ಕೇಂದ್ರಿತವಾದುದು. ಕನ್ನಡದಲ್ಲಿ ಈ ನೆಲೆಗಳೂ ಇಲ್ಲವೆಂದಲ್ಲ. ಆದರೆ ಇದರ ಜೊತೆಗೆ ಜನಸಂಸ್ಕೃತಿ ನೆಲೆಗಳೂ ಇವೆ. ಈ ಎರಡನೆಯದೇ ಕಥಾ ವಸ್ತು, ಭಾಷೆ, ಆದರ ಲಯ, ಗಾದೆ, ಅಲಂಕಾರಗಳ ಬಳಕೆ ಇತ್ಯಾದಿ ನೆಲೆಗಳಲ್ಲಿ ಬಹಳ ದೊಡ್ಡದಾಗಿ ಕಾಣುವುದರಿಂದ ಕನ್ನಡ ಕಾವ್ಯಮೀಮಾಂಸೆಯ ಮುಖ್ಯ ನೆಲೆ ಜನ ಕೇಂದ್ರಿತವಾದುದಾಗುತ್ತದೆ.***

ಕನ್ನಡ ಕಾವ್ಯಮೀಮಾಂಸೆಯ ನೆಲೆಯಿರುವುದು ಮುಖ್ಯವಾಗಿ ಕನ್ನಡ ಕೃತಿಗಳ ಒಳಗಿನ ಅಪ್ರತ್ಯಕ್ಷ ವಿವರಗಳಲ್ಲಿ. ಕಾರಣ, ಮೊದಲು ಸಾಹಿತ್ಯ; ಅನಂತರದಲ್ಲಿ ಅದನ್ನು ಕುರಿತ ಮೀಮಾಂಸೆ. ಈ ಮೀಮಾಂಸೆ ಅಂತಿಮವಾಗಿ ಕನ್ನಡ ಸಂಸ್ಕೃತಿಯನ್ನೇ ತನ್ನ ಮೂಲವನ್ನಾಗಿಸಿಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಕೃತಿಗಳೇ ಕನ್ನಡ ಸಾಹಿತ್ಯ ಮೀಮಾಂಸೆಯ ಮುಖ್ಯ ಆಕರಗಳಾಗುತ್ತವೆ. ಆದ್ದರಿಂದ ವಿವಿಧ ಕಾಲಘಟ್ಟಗಳಲ್ಲಿ ಕನ್ನಡ ಸಂಸ್ಕೃತಿ ಕಂಡ ಅವಸ್ಥಾಂತರಗಳ ಹಿನ್ನೆಲೆಯಲ್ಲಿ ಮೂಡಿದ ಕೃತಿಗಳೇ ಆಯಾ ಕಾಲದ ಕನ್ನಡ ಸಾಹಿತ್ಯ ಮೀಮಾಂಸೆಯನ್ನು ರೂಪಿಸುತ್ತವೆಯಲ್ಲದೆ ಅದರ ಮೂಲಕ ಕನ್ನಡ ಸಂಸ್ಕೃತಿಯನ್ನು ಸಹ ನಿರ್ವಚಿಸುತ್ತವೆ. ಆದ್ದರಿಂದ ಕನ್ನಡ ಸಂಸ್ಕೃತಿಯ ವಿವಿಧ ಸಾಂಸ್ಕೃತಿಕ ಸ್ತರಗಳಲ್ಲಿ ಒಡಮೂಡಿದ ಒತ್ತಾಸೆಗಳೇ ಕೃತಿ ನಿರ್ಮಿತಿಯ ಮೂಲ ದ್ರವ್ಯಗಳಾಗಿದ್ದು ಆ ದ್ರವ್ಯಗಳೇ ಆ ಘಟ್ಟದ ಕೃತಿಗಳ ತತ್ವಗಳನ್ನು ಕಟ್ಟಿಕೊಡುವುದೂ ಆಗುತ್ತದೆ. ಈ ಹಂತದಲ್ಲಿ ಸಂಸ್ಕೃತದತ್ತ ಒಂದು ಕಿರಣ.

. ಸಂಸ್ಕೃತಕ್ಕೊಂದು ತನ್ನದೇ ಎನ್ನಬಹುದಾದ ಸಂಸ್ಕೃತಿಯಿಲ್ಲ. ಇದ್ದರೂ ಪರಿಮಿತವಾದುದು. ಕಾರಣ, ಸಂಸ್ಕೃತ ವಿದ್ವಾಂಸರೂ ಸೇರಿದಂತೆ ಜನರು ತಮ್ಮ ಖಾಸಗಿ ಜೀವನದಲ್ಲಿ ದೇಶಭಾಷೆಯನ್ನೇ ಮುಖ್ಯವಾಗಿ ಬಳಸುತ್ತಾರೆ. ಆದ್ದರಿಂದ ಇವರು ಬರೆದ ಸಂಸ್ಕೃತ ಕೃತಿಗಳು ಸಹಜವಾಗಿ ಸಂಸ್ಕೃತದ ಕಾವ್ಯ-ಶಾಸ್ತ್ರಗಳನ್ನೇ ಮುಖ್ಯವಾಗಿ ಆಧರಿಸಿದ್ದಾಗಿವೆ. ಈ ಹಿನ್ನೆಲೆಯಲ್ಲಿ ಸಂಸ್ಕೃತ ಕಾವ್ಯಮೀಮಾಂಸೆಯು ಕೃತಿ ಮೂಲವಾದದ್ದಾದರೆ, ಕನ್ನಡ ಕಾವ್ಯಮೀಮಾಂಸೆಯು 'ಜನಪದ' ಮೂಲದ್ದಾಗಿ ಕಂಡುಬರುತ್ತದೆ. ಕಾರಣ, ಕನ್ನಡ ಜನಪದ ಹಾಗೂ ಸಂಸ್ಕೃತಿಯನ್ನು ಹೊರತುಪಡಿಸಿ ಕನ್ನಡ ಕಾವ್ಯವನ್ನಾಗಲಿ, ಮೀಮಾಂಸೆಯನ್ನಾಗಲಿ ಊಹಿಸುವುದು ಸಾಧ್ಯವಿಲ್ಲ. ಇದನ್ನು ಪೋಷಿಸುವ ನಿಟ್ಟಿನಲ್ಲಿ ಕಾಳಿದಾಸನ ಮಾತನ್ನು ಗ್ರಹಿಸಬೇಕು. ತನ್ನ 'ರಘುವಂಶ' ಕೃತಿಗಾಗಿ ಅನೇಕ ಕೃತಿಕಾರರಿಗೆ ಋಣಿಯಾಗಿದ್ದಾನೆ. ಅವರು ಅನೇಕ ಪುರಾಣಗಳನ್ನು ಬರೆದು, ಈಗಾಗಲೇ ಬಿಡಿಬಿಡಿಯಾಗಿ 'ರಘುವಂಶ'ದ ಒಳಗಿನ ಕತೆಗಳನ್ನು ಅವುಗಳಲ್ಲಿ ನೀಡಿದ್ದಾರೆ. ಅವುಗಳಲ್ಲಿ ಒಂದು ವಾಲ್ಮೀಕಿ ರಾಮಾಯಣ. ಆದ್ದರಿಂದ ಅವನ ಕೃತಿ ಈ ಎಲ್ಲರಿಗೂ ಋಣಿಯಾಗಿದೆ. ಒಟ್ಟಾರೆ ಈ ಮಾತು ತನ್ನ ಮಹಾಕಾವ್ಯವು ವಿವಿಧ ಕೃತಿಗಳನ್ನು ಆಧರಿಸಿಯೇ ಮೂಡಿದೆ ಎಂಬುದನ್ನು ಧ್ವನಿಸುತ್ತದೆ.

ಆದರೆ ಕನ್ನಡ ಕಾವ್ಯದಲ್ಲಿ ಕನ್ನಡ ಸಂಸ್ಕೃತಿ, ಪ್ರದೇಶ, ಜಾನಪದ ಇತ್ಯಾದಿ ವಿವರಗಳೇ ದಟ್ಟವಾಗಿ ಬಂದಿವೆ. ಉದಾಹರಣೆಗೆ, ಪಂಪ, ರನ್ನ, ವಚನಕಾರರು, ದಾಸರು, ತತ್ವಪದಕಾರರು - ಇವರನ್ನು ಕನ್ನಡ ಸಂಸ್ಕೃತಿಯ ನಿರ್ವಚನವಿಲ್ಲದೆ ಅರ್ಥೈಸಲು ಸಾಧ್ಯವಿಲ್ಲ. ಆದ್ದರಿಂದಲೇ ಕನ್ನಡ ಕಾವ್ಯದ ಮೀಮಾಂಸೆಯ ನೆಲೆಯು ಶಾಸ್ತ್ರ ಮತ್ತು ಕಾವ್ಯಕ್ಕೆ ಎಷ್ಟೇ ಋಣಿಯಾಗಿದ್ದರೂ ಸಂಸ್ಕೃತಿಗೆ ತೀರಾ ಋಣಿಯಾಗಿದೆ.

ಕನ್ನಡ ಕಾವ್ಯವನ್ನು ತತ್ವಶಾಸ್ತ್ರ, ಧರ್ಮ, ಪ್ರಭುತ್ವ, ಮನೋವಿಜ್ಞಾನ, ಪ್ರಧಾನ-ಅಧೀನ ಸಂಸ್ಕೃತಿಯ ನೆಲೆಗಳು, ಅಸ್ಪೃಶ್ಯತೆ, ಸಾಮಾಜಿಕತೆ, ವಿವಿಧ ಶ್ರೇಣೀಕರಣ ವ್ಯವಸ್ಥೆಗಳು, ಯಜಮಾನ ಸಂಸ್ಕೃತಿಯ ದಬ್ಬಾಳಿಕೆ ಮತ್ತು ಅನ್ಯೋನ್ಯತೆ ಮುಂತಾದವುಗಳು ರೂಪಿಸಿವೆ. ಆದ್ದರಿಂದ ಕನ್ನಡ ಕಾವ್ಯಮೀಮಾಂಸೆಗೆ ಇವೆಲ್ಲವೂ ಮುಖ್ಯ ಪರಿಕರಗಳಾಗಿ, ಪ್ರಸ್ಥಾನಗಳಾಗಿ ನಿಲ್ಲುತ್ತವೆ. ಅಂತಿಮವಾಗಿ ಇವೇ ಕನ್ನಡ ಕಾವ್ಯಮೀಮಾಂಸೆಯ ಕಟ್ಟಡದ ಆಧಾರ ಸ್ತಂಭಗಳೂ ಆಗುತ್ತವೆ.

ಸಂಸ್ಕೃತ ಕಾವ್ಯಮೀಮಾಂಸೆಯು ಕಾಳಿದಾಸನ ನಂತರದಲ್ಲಿ ಇಳಿಮುಖವಾಯಿತು ಎಂಬ ಮಾತಿದೆ. ಅಂದರೆ ನವೀನ ಗ್ರಂಥಗಳು ಬರಲಿಲ್ಲವೆಂದಲ್ಲ, ಹಾಗೆ ನೋಡಿದರೆ ಕಾಳಿದಾಸನ ನಂತರವೇ ಅಲಂಕಾರ ಗ್ರಂಥಗಳು ವಿಪುಲವಾಗಿ ಬಂದಿದ್ದು. ಆದರೆ ಕಾವ್ಯ ಪ್ರತಿಭೆ ಹಿಂದಿನಂತೆ ಮೆರೆಯಲಿಲ್ಲವೆಂಬುದು ನಿಜ. ಈ ಹಂತದಲ್ಲಿ ಇದು ಸಂಸ್ಕೃತಿ ಮುಖಿಯಾಗಿ ಚಲಿಸಿದ್ದರೆ ಪುನಃ ಸತ್ವಯುತವಾಗಿ ಕಂಗೊಳಿಸುತ್ತಿತ್ತಲ್ಲದೆ, ಸಂಸ್ಕೃತಿ ಸ್ಥಿತ್ಯಂತರದ ವೈವಿಧ್ಯತೆಯನ್ನು ತನ್ನಲ್ಲಿ ತೋರಿಸಲು ಸಾಧ್ಯವಾಗುತ್ತಿತ್ತು. ಇಂತಹ ಸಂದರ್ಭದಲ್ಲಿಯೇ 'ಮಾರ್ಗ'ಕ್ಕೆ 'ದೇಸಿ'ಯ ಪೋಷಣೆಯ ಅಗತ್ಯ ಕಾಣುವುದು. ಈ ಹಿನ್ನೆಲೆಯಲ್ಲಿ ಬೇಂದ್ರೆಯವರ ''ಸಾಹಿತ್ಯ ಜನಮುಖಿಯಾದಂತೆಲ್ಲಾ ವರ್ಣಕ ಸಾಹಿತ್ಯಕ್ಕೆ ಉಕ್ಕು ಹೆಚ್ಚು'' ಎಂದು ಆಡುವ ಮಾತನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಇದು ವರ್ಣಕ ಸಾಹಿತ್ಯಕ್ಕೆ ಸಂಬಂಧಿಸಿದಂತೆಯೇ ನೇರವಾಗಿ ಆಡಿದ್ದೂ ಆಂಶಿಕವಾಗಿ ವಸ್ತುಕ ಸಾಹಿತ್ಯಕ್ಕೂ ಅನ್ವಯವಾಗುತ್ತದೆ.

ಗದ್ಯ - ಪದ್ಯ, ಸಂಸ್ಕೃತ - ಕನ್ನಡ, ಇತಿಹಾಸ - ಪುರಾಣ, ಪ್ರಭುತ್ವ - ಜನಪದ, ಆಗಮಿಕ - ಲೌಕಿಕ, ಮಾರ್ಗ - ದೇಸಿ ಇಂತಹ ದ್ವಂದ್ವಗಳೇ ಕನ್ನಡ ಕಾವ್ಯವನ್ನು ರೂಪಿಸಿರುವುದು, ನಿರ್ವಹಿಸಿರುವುದು. ಇದು ಮುಖ್ಯವಾಗಿ ವಸಾಹತುಪೂರ್ವ ಕನ್ನಡ ಕಾವ್ಯವನ್ನು ಅನುಲಕ್ಷಿಸಿರುವುದಾಗಿದೆ. ಅದರಲ್ಲೂ ಇದು ಮುಖ್ಯವಾಗಿ ಪಂಪಯುಗದ ವೈಶಿಷ್ಟ್ಯ. ಆದ್ದರಿಂದ ಕನ್ನಡ ಕಾವ್ಯವನ್ನು ವಿವರಿಸಲು ಈ ದ್ವಂದ್ವಗಳ ಹಿನ್ನೆಲೆಯಲ್ಲಿ ಕಡ್ಡಾಯವಾಗಿ ಪ್ರಸ್ತಾಪಿಸಬೇಕಾಗುತ್ತದೆ. ಸಂಸ್ಕೃತ ಕವಿಗಳು ಶಾಸ್ತ್ರಕ್ಕೆ ಬದ್ಧವಾಗಿ, ಒತ್ತಾಯಪೂರ್ವಕವಾಗಿ, ಅಷ್ಟಾದಶವರ್ಣನೆ, ನವರಸ ಇತ್ಯಾದಿಗಳನ್ನು ಕಾವ್ಯಗಳಲ್ಲಿ ತರುವ ಮೂಲಕ ಇವನ್ನು ಸಂಸ್ಕೃತ ಕಾವ್ಯಮೀಮಾಂಸೆಯ ಮುಖ್ಯ ವಿಚಾರಗಳನ್ನಾಗಿ ಗ್ರಹಿಸುವಂತೆಯೇ ಕನ್ನಡ ಕವಿಗಳು ಮೇಲೆ ಪ್ರಸ್ತಾಪಿಸಿದ ದ್ವಂದ್ವಗಳನ್ನು ಒತ್ತಾಯಪೂರ್ವಕವಾಗಿಯೇ ತಮ್ಮ ಕಾವ್ಯಗಳಲ್ಲಿ ತರಲು ಯತ್ನಿಸಿದ್ದಾರೆ ಅಥವಾ ಈ ದ್ವಂದ್ವಗಳು ಒತ್ತಾಯಪೂರ್ವಕವಾಗಿ ಕವಿಗಳ ಮುಖೇನ ಕಾವ್ಯದಲ್ಲಿ ಬಿತ್ತರಗೊಂಡಿವೆ. ಆದ್ದರಿಂದ ಇವುಗಳು ಕನ್ನಡ ಕಾವ್ಯಮೀಮಾಂಸೆಯ ಭಾಗಗಳಾಗಿಯೇ ಬರುತ್ತವೆ; ಇವುಗಳಲ್ಲಿಯೇ ತನ್ನ ನೆಲೆಯೂ ಸ್ಥಾಪಿತವಾಗುತ್ತದೆ.

ಸಂಸ್ಕೃತದ ಸತ್ವವನ್ನು ಕನ್ನಡದಲ್ಲಿ ಎರಕ ಹೊಯ್ದವನು ಪಂಪ. ಚಂಪೂ ಕವಿಗಳು ಈ ನಿಟ್ಟಿನಲ್ಲಿ ಪ್ರಯತ್ನಿಸುತ್ತಾರೆ. ಇಲ್ಲಿಯೇ ಮಾರ್ಗ-ದೇಸಿ, ಕನ್ನಡ-ಸಂಸ್ಕೃತಗಳ ಚರ್ಚೆ ಪ್ರಸ್ತುತವಾಗುವುದು.

ಇನ್ನು ಸಂಸ್ಕೃತದ ಅವಲಂಬನದಿಂದ ದೂರ ಸರಿದು ಕನ್ನಡದಲ್ಲಿ ಮುಕ್ತವಾಗಿ ಬರೆಯಹೊರಟವರು ವಚನಕಾರರು. ಸಂಸ್ಕೃತಶಾಹಿಯ ಹುನ್ನಾರಗಳನ್ನು ಬಯಲಿಗೆಳೆದವರು ಅವರು. ಹಾಗಾಗಿ ವಚನಗಳು ಲಕ್ಷ್ಯ ರೂಪದಲ್ಲಿ ಕನ್ನಡ ಕಾವ್ಯಮೀಮಾಂಸೆಯ ಒಂದು ಕಾಲದ ಪ್ರಸ್ಥಾನವನ್ನು ರೂಪಿಸುತ್ತವೆ.

ಸಂಸ್ಕೃತ ಕಾವ್ಯಮೀಮಾಂಸೆ ಹೇಳುವ ಅನೇಕ ದೋಷಗಳು ಇಲ್ಲಿ ಗುಣಗಳಾಗಿ ಪರಿವರ್ತನೆ ಹೊಂದುತ್ತವೆ. ಇದು ಕನ್ನಡದ ಜಾಯಮಾನಕ್ಕೆ ಅನುಗುಣವಾಗಿ ನಡೆದ ಕ್ರಿಯೆ. ಉದಾಹರಣೆಗೆ, ಹರಿಹರನಲ್ಲಿ ಜಗಣ (U - U) ಮತ್ತು ಪುನರುಕ್ತಿಗಳು ಗುಣಗಳಾಗಿಯೇ ಕಾಣಬರುತ್ತದೆ. ಉದಾಹರಣೆಗೆ, ವಿಮಾನ (U - U), ಇದು ಜಗಣಕ್ಕೆ ಪುನರುಕ್ತಿಗೆ–

ಒಂದು ಪದಂ ಪಾತಾಳವನೊತ್ತಲ್  
ಒಂದು ಪದಂ ಬ್ರಹ್ಮಾಂಡವನೆತ್ತಲ್  
ನಡುಗುತಿರ್ದುದು ವಿಷಂ ಶಿವನ ಕರತಳದೊಳಗೆ  
ಮಿಡುಕುತಿರ್ದುದು ವಿಷಂ ಹರನ ಕರತಳದೊಳಗೆ

ಇಲ್ಲಿ ಜನಪದ ಮಹಾಕಾವ್ಯಗಳ ಪ್ರಭಾವ ಇದೆ.

ಮಧ್ಯಕಾಲದ ಕನ್ನಡ ಕಾವ್ಯವನ್ನು ರೂಪಿಸಿದ ಮುಖ್ಯ ಪರಿಕರ ಭಕ್ತಿ. ಇದು ವಚನಕಾರರು, ದಾಸರು, ತತ್ವಪದಕಾರರು - ಇಂಥವರಲ್ಲಿ ಪ್ರಧಾನವಾಗಿ ಖಾಸಗಿ ಭಕ್ತಿಯಾಗಿ ಕಾಣಿಸಿಕೊಂಡರೆ, ಶೂನ್ಯ ಸಂಪಾದನಕಾರರು, ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ, ರತ್ನಾಕರವರ್ಣಿ, ನಯಸೇನ, ಬ್ರಹ್ಮಶಿವ, ವೃತ್ತವಿಲಾಸ ಮೊದಲಾದವರಲ್ಲಿ ಸಾಂಸ್ಥಿಕ ಭಕ್ತಿಯಾಗಿ ಕಾಣಿಸುತ್ತದೆ. ಸಾಂಸ್ಥಿಕ ಭಕ್ತಿಯ ಅನಾವರಣದ ಸಂದರ್ಭದಲ್ಲಿಯೇ ಅಪಾಯಗಳಿರುವುದು. ಕಾರಣ, ಅಲ್ಲಿ ಗೋಡೆಗಳಿರುತ್ತವೆ, ದ್ವೀಪಗಳೇರ್ಪಡುತ್ತವೆ.

ಅಂತಿಮವಾಗಿ, ಸಂಸ್ಕೃತಕ್ಕಿಂತ ವೈವಿಧ್ಯಮಯವಾದ ಕನ್ನಡ ಕಾವ್ಯವನ್ನು ಕನ್ನಡ ಸಂಸ್ಕೃತಿ ಪರಂಪರೆಯ ಒಳಗೆ ನಡೆದಿರುವ ಧಾರ್ಮಿಕ ವಾಗ್ವಾದಗಳು, ಸಾಮಾಜಿಕತೆ, ಪ್ರಭುತ್ವ, ಭಕ್ತಿ, ವೈಚಾರಿಕತೆ, ಚಾರಿತ್ರಿಕತೆ, ಚಳುವಳಿ, ಹೋರಾಟ, ದಾಸ್ಯ, ಅಗೋಚರವಾದ ನವವಸಾಹತು ಕಾಲದ ದಾಸ್ಯ - ಇತ್ಯಾದಿಗಳು ರೂಪಿಸಿವೆ. ಆದ್ದರಿಂದ ಅದನ್ನು ವಿವರಿಸಲು ಬೇಕಾಗುವ ಪರಿಕರಗಳು ಸಹಜವಾಗಿ ಇದೇ ಮೂಲದ್ದಾಗಿಬಿಡುತ್ತವೆ. ಈ ಹಿನ್ನೆಲೆಯಲ್ಲಿ ಕನ್ನಡ ಕಾವ್ಯ ಮೀಮಾಂಸೆಯ ನೆಲೆ ಕನ್ನಡ ಕಾವ್ಯದ ಪ್ರತ್ಯಕ್ಷ - ಅಪ್ರತ್ಯಕ್ಷ ವಿವರಗಳಲ್ಲಿ ತನ್ನ ಬೇರುಗಳನ್ನು ಬಿಟ್ಟುಕೊಳ್ಳುತ್ತದೆ.

**ಡಾ|| ಕಾ. ವೆಂ. ಶ್ರೀನಿವಾಸ ಮೂರ್ತಿ**  
ಕನ್ನಡ ಅಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ, ಸ್ನಾತಕೋತ್ತರ ಕೇಂದ್ರ, ಕೋಲಾರ-೫೬೩೧೦೧

# ಸಿಯೆರಾ ಲಿಯೋನ್ - ಮುಗಿಯದ ಅಂತರ್ಯುದ್ಧ

ಸಿಯೆರಾ ಲಿಯೋನ್ ಆಫ್ರಿಕಾ ಖಂಡದ ಪಶ್ಚಿಮಕ್ಕಿರುವ ಅತಿ ಚಿಕ್ಕ ರಾಷ್ಟ್ರ. ದೊಡ್ಡ ಪ್ರಮಾಣದಲ್ಲಿ ವಜ್ರದ ನಿಕ್ಷೇಪಗಳನ್ನು, ಇತರ ಖನಿಜಗಳನ್ನು ಹೊಂದಿರುವ ದೇಶ. ನಾಲ್ಕು ದಶಕಗಳ ಹಿಂದೆ ಬ್ರಿಟಿಷ್ ವಸಾಹತುಶಾಹಿಯ ನೊಗ ಕಳಚಿಕೊಂಡು ಸ್ವತಂತ್ರ ರಾಷ್ಟ್ರವಾದರೂ ಸಾಮ್ರಾಜ್ಯಶಾಹಿ ಕಿರುಕುಳದಿಂದ ಮುಕ್ತವಾಗಿಲ್ಲ. ಈ ಪುಟ್ಟ ರಾಷ್ಟ್ರದಲ್ಲಿರುವ ಅಮೂಲ್ಯವಾದ ವಜ್ರಗಳು, ಬಾಕ್ಸೈಟ್ ಮತ್ತು ಕಬ್ಬಿಣದ ಅದುರೇ ಅದರ ಇಂದಿನ ದುಸ್ಥಿತಿಗೆ ಮೂಲವಾಗಿದೆ. ಸ್ವಾತಂತ್ರ್ಯಾನಂತರ ಸಿಯೆರಾ ಲಿಯೋನ್‌ನ ಜನತೆ ಪ್ರಜಾಪ್ರಭುತ್ವ ಆಡಳಿತ ಹೊಂದಿ ಶಾಂತಿಯಿಂದ ಜೀವನ ಸಾಗಿಸಿದ್ದು ಅಲ್ಪಕಾಲ ಮಾತ್ರ. ಮಿಲಿಟರಿ ಸರ್ವಾಧಿಕಾರಿ ಆಡಳಿತವೇ ಹೆಚ್ಚು ಕಾಲ. ಈ ಅವಧಿಯಲ್ಲಿ ನೈಸರ್ಗಿಕ ಸಂಪತ್ತನ್ನು ತಮ್ಮ ಸುಬರ್ದಿನಲ್ಲಿರಿಸಿಕೊಂಡಿದ್ದ ವಸಾಹತುಶಾಹಿಗಳಿಂದ ನೈಸರ್ಗಿಕ ಸಂಪತ್ತಿನ ಸೂರೆ ನಿರಂತರ ಸಾಗಿತು. ಆಫ್ರಿಕಾ ಖಂಡದ ಇತರ ಕೆಲವು ದೇಶಗಳಲ್ಲಿನಂತೆಯೇ ಸಿಯೆರಾ ಲಿಯೋನ್‌ನಲ್ಲೂ ಕಳೆದ ಎಂಟು ವರ್ಷಗಳಿಂದಲೂ ಅಂತರ್ಯುದ್ಧದ ಪರಿಸ್ಥಿತಿ. ನೆರೆಯ ಲೈಬೀರಿಯ ಮತ್ತು ಬುರ್ಕಿನಾ ಫಾಸೋ ಬೆಂಬಲ ಪಡೆದುಕೊಂಡು ಸಾಮ್ರಾಜ್ಯಶಾಹಿಗಳ ಕುಮ್ಮಕ್ಕಿನಿಂದ ಸಂಕೋ ನಾಯಕತ್ವದಲ್ಲಿರುವ ಕ್ರಾಂತಿಕಾರಿ ಸಂಯುಕ್ತರಂಗ ಮತ್ತು ಆಡಳಿತದಲ್ಲಿರುವ ಸರಕಾರಿ ಪಡೆಗಳ ಮಧ್ಯೆ ಸಶಸ್ತ್ರ ಘರ್ಷಣೆಗಳು. ಸಂಕೋನ ಬೆಂಬಲಿಗರಿಂದ ಅತ್ಯಂತ ಕ್ರೂರವಾದ ಹಿಂಸಾಚಾರ. ಸಹಸ್ರಾರು ಮಂದಿ ಅಮಾಯಕ ಜನರ ಬಲಿ. ದೇಶದ ಆರ್ಥಿಕ ಪರಿಸ್ಥಿತಿ ಚಿಂತಾಜನಕ. ಜನಸಾಮಾನ್ಯರ ಜೀವನ ದುಸ್ತರ. ರಾಜಕಾರಣಿಗಳು, ವ್ಯಾಪಾರಸ್ಥರು, ಲೂಟಿಕೋರರು ಮತ್ತು ಬಾಡಿಗೆ ಸಿಪಾಯಿಗಳಿಂದ ವಜ್ರದ ಕಳ್ಳಸಾಗಾಣಿಕೆ ಮತ್ತು ಸಂಪನ್ಮೂಲಗಳ ಸೂರೆ. ವಸಾಹತುಶಾಹಿ ಆಳ್ವಿಕೆಯ ಅನಿಷ್ಟ ಪರಿಣಾಮಗಳಿಗೆ ಸಿಯೆರಾ ಲಿಯೋನ್‌ನ ಬವಣೆ ಇನ್ನೊಂದು ನಿದರ್ಶನ.

ಪಶ್ಚಿಮ ಆಫ್ರಿಕಾದ ರಾಷ್ಟ್ರಗಳ ಆರ್ಥಿಕ ಸಮುದಾಯದ ಮಧ್ಯಸ್ಥಿಕೆಯಿಂದ ೧೯೯೯ರ ಫೆಬ್ರವರಿಯಲ್ಲಿ ಈಚಿನ ವರ್ಷಗಳಲ್ಲಿ ಮೊದಲ ಬಾರಿಗೆ ಪ್ರಜಾಪ್ರಭುತ್ವರೀತ್ಯಾ ಚುನಾವಣೆಗಳು ನಡೆದು ಹೊಸ ಸರಕಾರ ಅಸ್ತಿತ್ವಕ್ಕೆ. ಅಹ್ಮದ್ ಜಾನ್ ಕಬಾ ಅಧಿಕಾರಕ್ಕೆ. ಆದರೂ ಅಂತರ್ಯುದ್ಧ ಮುಂದುವರಿಕೆ. ೧೯೯೯ರ ಜುಲೈನಲ್ಲಿ ಅಮೆರಿಕದ ಒತ್ತಾಯದಿಂದ ಚುನಾಯಿತ ಸರಕಾರ ಮತ್ತು ಸಂಕೋ ನೇತೃತ್ವದ ಕ್ರಾಂತಿಕಾರಿ ಸಂಯುಕ್ತ ರಂಗದ ನಡುವೆ ಒಪ್ಪಂದ. ತರಾತುರಿಯಲ್ಲಿ ಮಾಡಿಕೊಂಡ ಒಪ್ಪಂದದಂತೆ ವಿದ್ರೋಹಿ ಕೊಲೆಪಾತಕಿ ಸಂಕೋಗೆ ಸರಕಾರದಲ್ಲಿ ಸ್ಥಾನ. ನರಹತ್ಯೆಗಾಗಿ ವಿಚಾರಣೆಗೊಳಪಡಬೇಕಾದ ಆತನಿಗೆ ಸರಕಾರದಲ್ಲಿ ಎರಡನೆ ಸ್ಥಾನ. ಆದರೂ ಘರ್ಷಣೆಗಳು ಮುಂದುವರಿಕೆ. ವಿಶ್ವಸಂಸ್ಥೆಯಿಂದ ಸಿಯೆರಾ ಲಿಯೋನ್‌ಗೆ ವಿಶ್ವಸಂಸ್ಥೆಯ ಶಾಂತಿ ಸೇನೆಗಳ ರವಾನೆ. ಈ ಶಾಂತಿ ಪಡೆಗಳಲ್ಲಿ ಸೇವೆ ಸಲ್ಲಿಸಿದ ಭಾರತೀಯ ಸೈನಿಕರು ಈಗ ಸ್ವದೇಶಕ್ಕೆ ಮರುಳುತ್ತಿದ್ದಾರೆ. ಸಂಕೋನ ವಿದ್ರೋಹಿ ಪಡೆಗಳು ಕೆಲವು ಭಾರತೀಯ ಸೈನಿಕರನ್ನು ಒತ್ತೆಯಾಳುಗಳಾಗಿ ತೆಗೆದುಕೊಂಡಿದ್ದು ಅನಂತರ ಬಿಡುಗಡೆ ಮಾಡಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ವಿಶ್ವಸಂಸ್ಥೆಯ ಸೈನಿಕರು ಬಂಡಾಯಗಾರರನ್ನು ನಿಶ್ಶಸ್ತ್ರಗೊಳಿಸುವ ಕಾರ್ಯವನ್ನು ಮುಂದುವರಿಸಿದ್ದಾರೆ. ವಿಶ್ವಸಂಸ್ಥೆಯ ಶಾಂತಿ ಪಡೆಗಳ ಕಾರ್ಯ ಶಾಂತಿಯನ್ನು ಸ್ಥಾಪಿಸಿ, ಪ್ರಜಾಪ್ರಭುತ್ವ ರೀತಿಯಲ್ಲಿ ಹೊಸ ಚುನಾವಣೆಗಳನ್ನು ನಡೆಸಿ, ಚುನಾಯಿತ ಸರಕಾರ



*ಚಿತ್ರ ಕೃಪೆ : ಫ್ರಂಟ್‌ಲೈನ್*

ಸ್ಥಾಪಿಸುವುದಾಗಿದೆ. ಆದರೆ ಅದು ಇನ್ನೂ ಕೈಗೂಡದ ಕನಸಾಗುತ್ತಿದೆ. ಘರ್ಷಣೆಗಳು ಮುಂದುವರಿಯುತ್ತಲೇ ಇವೆ. ಸಂಕೋ ಮತ್ತು ಅವನ ಪ್ರತಿನಿಧಿಗಳು ಸರ್ಕಾರದಲ್ಲಿದ್ದಾಗ್ಯೂ ಗಮನಾರ್ಹವಾದ ಒಂದು ಅಂಶವೆಂದರೆ ವಿಶ್ವಸಂಸ್ಥೆಯ ಶಾಂತಿ ಸೇನೆಗೆ ತಮ್ಮ ಪಡೆಗಳನ್ನು ಕಳಿಸಲು ಅಮೆರಿಕ, ಫ್ರಾನ್ಸ್ ಮತ್ತು ಬ್ರಿಟನ್‌ಗಳ ನಿರಾಕರಣೆ. ಬ್ರಿಟಿಷರು ತಮ್ಮ ಸೇನೆಯನ್ನು ಸಿಯೆರಾ ಲಿಯೋನ್‌ಗೆ ರವಾನಿಸಿದ್ದರೂ ಅದು ಅಲ್ಲಿರುವ ಬ್ರಿಟಿಷ್ ಪ್ರಜೆಗಳ ರಕ್ಷಣೆಗೆ ಮಾತ್ರ. ಪರೋಕ್ಷವಾಗಿ ಈ ಮೂರು ಅಗ್ರ ರಾಷ್ಟ್ರಗಳು ಸಂಕೋನ ಕ್ರಾಂತಿಕಾರಿ ಸಂಯುಕ್ತ ರಂಗಕ್ಕೆ ಬೆಂಬಲ ನೀಡುತ್ತಿರುವುದರಿಂದಲೇ ಅವು ಶಾಂತಿ ಸೇನೆಯಲ್ಲಿ ಭಾಗವಹಿಸುತ್ತಿಲ್ಲ.

ಹದಿನೈದನೇ ಶತಮಾನದಲ್ಲಿ ಪೋರ್ಚುಗೀಸರ ಕಣ್ಣಿಗೆ ಬಿದ್ದ ಈ ಭೂಭಾಗಕ್ಕೆ ಸಿಯೆರಾ ಲಿಯೋನ್ (ಲಯನ್ ಮೌಂಟೆನ್ಸ್) ಎಂದು ನಾಮಕರಣ ಮಾಡಿದವರೂ ಅವರೆ. ಕಡಿದಾದ ಬೆಟ್ಟಗಳ ಸಾಲಿದ್ದುದೆ ಈ ಹೆಸರಿಗೆ ಕಾರಣ. ಪೋರ್ಚುಗೀಸರ ಹಿಂದೆಯೇ ಇತರ ಐರೋಪ್ಯರ, ಮುಖ್ಯವಾಗಿ ಇಂಗ್ಲಿಷ್‌ರ ಗಮನ. ಸಿಯೆರಾ ಲಿಯೋನ್ ಗುಲಾಮರ ವ್ಯಾಪಾರಕ್ಕೆ ಪ್ರಶಸ್ತ ಸ್ಥಳವಾಗಿ ಬೆಳೆಯಿತು. ಇಲ್ಲಿನ ಮೂಲನಿವಾಸಿಗಳನ್ನು ಪ್ಲಾಂಟೇಶನ್ನುಗಳಲ್ಲಿ ದುಡಿಯಲು ಗುಲಾಮರನ್ನಾಗಿ ಯೂರೋಪ್ ಮತ್ತು ಅಮೆರಿಕಗಳಿಗೆ ರವಾನಿಸಲಾಯಿತು. ಗುಲಾಮ ಪದ್ಧತಿ ರದ್ದಾದ ಮೇಲೆ ಸ್ವತಂತ್ರಗೊಂಡ ಗುಲಾಮರನ್ನು ಸಿಯೆರಾ ಲಿಯೋನ್‌ಗೆ ಕರೆತಂದು ನೆಲೆಗೊಳಿಸಲಾಯಿತು. ದೇಶದ ರಾಜಧಾನಿಗೆ 'ಫ್ರೀಟೌನ್' (ಸ್ವತಂತ್ರನಗರ) ಎಂದು ಹೆಸರು ಬರಲು ಇದೇ ಕಾರಣ. ಹತ್ತೊಂಬತ್ತನೆ ಶತಮಾನದ ಪ್ರಾರಂಭದಲ್ಲಿ ಬ್ರಿಟಿಷರ ವಸಾಹತು ಆದ ಸಿಯೆರಾ ಲಿಯೋನ್ ಸ್ವತಂತ್ರ ರಾಷ್ಟ್ರವಾದ್ದು ಸುಮಾರು ಒಂದೂವರೆ ಶತಮಾನದ ನಂತರ ೧೯೬೧ರಲ್ಲಿ. ೧೯೬೧ರವರೆಗೆ ಬ್ರಿಟಿಷ್ ರಾಣಿಯೇ ಸಿಯೆರಾ ಲಿಯೋನ್‌ನ ಅಧಿಪತಿ. ಸಿಯೆರಾ ಲಿಯೋನ್‌ನ ಜನತೆ ಸ್ವಾತಂತ್ರ್ಯಕ್ಕಾಗಿ ಹೋರಾಟ ಪ್ರಾರಂಭಿಸಿದ್ದು ಎರಡನೆ ಮಹಾಯುದ್ಧದ ನಂತರ. ಎರಡು ದಶಕಕ್ಕೂ ಹೆಚ್ಚು ಕಾಲ ಹೋರಾಟದ ನಂತರ ಸ್ವಾತಂತ್ರ್ಯದ ಗಳಿಕೆ. ಆದರೆ ದೇಶದ ಎಲ್ಲ ನೈಸರ್ಗಿಕ ಸಂಪತ್ತು ಬ್ರಿಟಿಷರ ವಶದಲ್ಲೆ. ಸ್ಥಳೀಯ ನಾಗರಿಕರಿಗೂ, ಸ್ವತಂತ್ರಗೊಂಡು ಬಂದು ನೆಲೆಸಿದ್ದ ಗುಲಾಮರಿಗೂ ನಡುವೆ ಮೊದಲಿನಿಂದಲೂ ವಿರಸ ಇದ್ದುದನ್ನು ಬ್ರಿಟಿಷ್ ಆಡಳಿತಗಾರರು ತಮ್ಮ ಅನುಕೂಲಕ್ಕೆ ಬಳಸಿಕೊಂಡಿದ್ದರು. ೧೯೬೭ರಲ್ಲಿ ಜರುಗಿದ ಸೈನಿಕ ಕ್ರಾಂತಿಯ ನಂತರ ಸಿಯೆರಾ ಲಿಯೋನ್‌ನಲ್ಲಿ ಎಲ್ಲ ರಾಜಕೀಯ ಪಕ್ಷಗಳನ್ನು ನಿಷೇಧಿಸಲಾಯಿತು. ಅಂತರ್ಯುದ್ಧ ಪ್ರಾರಂಭವಾದ್ದು ಕೂಡ ಆಗಲೆ.

ಅಮೆರಿಕ ೧೯೯೯ರ ಜುಲೈನಲ್ಲಿ ಒತ್ತಾಯ ಪೂರ್ವಕವಾಗಿ ಸಿಯೆರಾ ಲಿಯೋನ್‌ನ ಸರಕಾರ ಮತ್ತು ಕ್ರಾಂತಿಕಾರಿ ಸಂಯುಕ್ತ ರಂಗದ ಮೇಲೆ ಹೇರಿದ ಶಾಂತಿ ಒಪ್ಪಂದ ಶಿಥಿಲ. ಮುಖ್ಯವಾಗಿ ಈ ಒಪ್ಪಂದ ಜನಸಾಮಾನ್ಯರ ನರಹತ್ಯೆ ನಡೆಸಿ ಅಮಾನುಷ ಕೃತ್ಯ ಎಸಗಿರುವ ಸಂಯುಕ್ತ ರಂಗದ ಪಾತಕಿಗಳಿಗೆ ಕ್ಷಮಾದಾನ ನೀಡಿದೆಯಲ್ಲದೆ, ಅವರ ನಾಯಕನಿಗೆ ರಾಷ್ಟ್ರೀಯ ಸರಕಾರದಲ್ಲಿ ಸ್ಥಾನವನ್ನು ದೊರಕಿಸಿದೆ. ವಿಶ್ವಸಂಸ್ಥೆಯ ಭದ್ರತಾ ಸಮಿತಿ ಕ್ಷಮಾದಾನವನ್ನು ಮಾನ್ಯಮಾಡಿಲ್ಲ, ಯುದ್ಧ ಪಾತಕಿಗಳನ್ನು ವಿಚಾರಣೆಗೆ ಗುರಿಪಡಿಸುವುದು ಅಗತ್ಯವೆಂದು ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನನ್ ಹೇಳಿದ್ದಾರೆ. ಸಿಯೆರಾ ಲಿಯೋನ್‌ನಲ್ಲಿ ವಿಶ್ವಸಂಸ್ಥೆಯ ಶಾಂತಿ ಪಡೆಗಳ ಸಂಖ್ಯೆಯನ್ನು ಹೆಚ್ಚಿಸುವುದನ್ನು ಅಮೆರಿಕ ತೀವ್ರವಾಗಿ ವಿರೋಧಿಸುತ್ತಿದೆ. ಇದು ಅಮೆರಿಕದ ನಿಜವಾದ ಬಣ್ಣವನ್ನು ಬಯಲಿಗೆಳೆದಿದೆ. ಸಿಯೆರಾ ಲಿಯೋನ್‌ನಲ್ಲಿ ಶಾಂತಿ ನೆಲೆಸುವಂತೆ ಮಾಡಲು ಪಶ್ಚಿಮ ಆಫ್ರಿಕಾದ ದೇಶಗಳು ಹಾಗೂ ವಿಶ್ವಸಂಸ್ಥೆಯ ಶಾಂತಿ ಸೇನೆ ಕೈಗೊಂಡಿರುವ ಕ್ರಮಗಳು ಯಶಸ್ವಿಯಾಗಲಿ ಎಂದು ಹಾರೈಸೋಣ.

**ಸೀಯಾರ್ಕೆ**

## ಅಕ್ಟೋಬರ್ ತಿಂಗಳ ಪ್ರಶ್ನೆಗೆ ಉತ್ತರ

ಎರಡು ಮುಖದ ಮೊದಲನೆಯ ದಾಳದ ಮೇಲೆ ನಮೂದಿಸಬೇಕಾದ ಸಂಖ್ಯೆಗಳು ಕ್ರಮವಾಗಿ : ೧, ೪.

ಹದಿನೆಂಟು ಮುಖದ ಎರಡನೆಯ ದಾಳದ ಮೇಲೆ ನಮೂದಿಸಬೇಕಾದ ಸಂಖ್ಯೆಗಳು ಕ್ರಮವಾಗಿ :

೧, ೨, ೨, ೩, ೩, ೩, ೪, ೪, ೪, ೫, ೫, ೫, ೬, ೬, ೬, ೭, ೭, ೮.

ಸೆಪ್ಟಂಬರ್ ಮತ್ತು ಅಕ್ಟೋಬರ್ ಪ್ರಶ್ನೆಗಳನ್ನೇ ಹೋಲುವ ಇನ್ನೂ ಅನೇಕ ಪ್ರಶ್ನೆಗಳಿವೆ. ಅವೆಲ್ಲಕ್ಕೂ ''ಕ್ರಮಬದ್ಧ''ವಾಗಿ ಉತ್ತರವನ್ನು ಹುಡುಕಲು ಪ್ರೌಢಶಾಲೆಯ ಮಟ್ಟದ ಬೀಜ ಗಣಿತವಷ್ಟೇ ಸಾಕು. ಈ ಗಣಿತವು ತುಂಬಾ ಸಂಕೀರ್ಣವಾದದ್ದೇನೂ ಅಲ್ಲವಾದರೂ ವಿನೋದ ಗಣಿತದಂತಹ ಅಂಕಣದಲ್ಲಿ ಅದನ್ನು ಪ್ರಸ್ತಾಪಿಸುವುದು ಸೂಕ್ತವಲ್ಲವಾದ್ದರಿಂದ ಉತ್ತರವನ್ನಷ್ಟೇ ನೀಡಿ ತೃಪ್ತಿಪಟ್ಟುಕೊಳ್ಳುತ್ತೇವೆ !

(ವಾಮನ ಪದವು ಪಶು ಚಿಕಿತ್ಸಾ ಕೇಂದ್ರದ ವೈದ್ಯಕೀಯ ಪರೀಕ್ಷಕ ಶ್ರೀ ಕೆ. ಶ್ರೀಧರ ಶೆಟ್ಟಿಯವರು ಸರಿಯುತ್ತರ ಕಳಿಸಿದ್ದಾರೆ.

## ಈ ತಿಂಗಳ ಪ್ರಶ್ನೆ

ಒಂದನ್ನೊಂದು ಹೋಲುವ ೩೦ ಕವಡೆಗಳ ಒಂದು ರಾಶಿ ಇದೆ. ಈಗ 'ಕ' ಮತ್ತು 'ಖ' ಎಂಬ ಇಬ್ಬರು ಪ್ರತಿಸ್ಪರ್ಧಿಗಳು ಆಡುವ ಆಟವೊಂದರಲ್ಲಿ ಮೇಲೆ ಹೇಳಿದ ರಾಶಿಯಿಂದ ಸ್ಪರ್ಧಿಗಳು ಒಬ್ಬರಾದ ಮೇಲೊಬ್ಬರಂತೆ ಸರದಿಯಂತೆ ಒಂದರಿಂದ ಆರರವರೆಗಿನ ಸಂಖ್ಯೆಯ ಎಷ್ಟು ಕವಡೆಗಳನ್ನಾದರೂ ಹೆಕ್ಕಿ ತಮ್ಮದನ್ನಾಗಿಸಿಕೊಳ್ಳಬಹುದು. ಮೇಲೆ ಹೇಳಿದ ನಿಯಮಕ್ಕನುಸಾರವಾಗಿ ಮುಂದುವರೆದು ಯಾವ ಸ್ಪರ್ಧಿಯು ತನ್ನದೇ ಸರದಿ ಬಂದಾಗ ರಾಶಿಯನ್ನು ಖಾಲಿ ಮಾಡಿ ಪ್ರತಿಸ್ಪರ್ಧಿಗೆ ಹೆಕ್ಕಲು ರಾಶಿಯಲ್ಲಿ ಏನೂ ಇಲ್ಲದಂತೆ ಮಾಡುತ್ತಾನೋ ಆತನೇ ಆಟ ಗೆದ್ದಂತೆ. ಈ ಆಟದ ಮೊದಲನೆಯ ನಡೆಯನ್ನು 'ಕ' ಆರಂಭಿಸುತ್ತಾನೆಂದು ಕೊಳ್ಳೋಣ. ಮುಂದೆ 'ಖ' ನ ಆಟದ ವ್ಯೂಹ ಏನೇ ಆಗಿರಲಿ ಯಾವಾಗಲೂ ತಾನೇ ಗೆಲ್ಲುವ ವ್ಯೂಹ ಒಂದನ್ನು 'ಕ' ರಚಿಸಬಹುದು. ಅಂತಹ ವ್ಯೂಹ ಯಾವುದು ?

*ಸೂಚನೆ : 'ಕ' ನ ಆರಂಭದ ನಡೆಯಿಂದ ಗೆಲುವಿನ ಕೊನೆಯ ನಡೆಯವರೆಗಿನ ಪ್ರತಿನಡೆಯಲ್ಲಿ ರಾಶಿಯಿಂದ 'ಕ' ಹೆಕ್ಕಬೇಕಾದ ಕವಡೆಗಳ ಸಂಖ್ಯೆಯನ್ನು ಆಟಕ್ಕೆ ಮೊದಲೇ ನಿರ್ಧರಿಸಬಹುದು !*




## ಅಕ್ಟೋಬರ್ ತಿಂಗಳ ಪದ ಹೊಸೆತದ ಉತ್ತರ

| | | | | | | | | |
|---|---|---|---|---|---|---|---|---|
| ಅ | ನಾ | ಮ | ಧೇ | ಯ | | ಭ | ಕ್ತಿ | ಸು |
| ಮ | | ಹಂ | | ತಿ | ಮಿ | ರ | | ಪ್ತ |
| ರ | ಸಾ | ತ | ಲ | | | ತ | ಷ್ಟಿ | ಚೇ |
| | ಮ | | ವ | ಸಂ | ತ | | | ಮ |
| ವಿ | ಜ | ಯ | | ಧಾ | | ಕಾಂ | ಚ | ನ |
| ಧಿ | | | ಅ | ನ | ತಿ | | ಮ | |
| ಲಿ | ಗ | ಜ | | | ಪ್ರ | ವ | ಚ | ನ |
| ಖಿ | | ಠ | ರಾ | ವು | | ಲ | | ಶ್ವ |
| ತ | ಸ್ಕ | ರ | | ಬೇ | ಸಾ | ಯ | ಗಾ | ರ |




ಸಿಲಿಕಾನ್ ಸಿಟಿಯಲ್ಲಿ ಬದುಕುತ್ತಿದ್ದೇನೆ.
ನಾನೇನೂ ಹೇಳೋಲ್ಲ ಸ್ವಾಮಿ.
ನೀವೇ ನೋಡಿ!

### ಉದಾರೀಕರಣ

ಕಾವಲಿ ಚೆನ್ನಾಗಿ ಕಾದಿದೆ, ಕಂದಾ,
ಹಿಟ್ಟಿಲ್ಲ ದೋಸೆ ಮಾಡಲು ನಿನಗೆ!
ಒದ್ದೆ ಕೈ ಕುಲುಕಿಸಿದರೆ ಸಾಕು,
ಚೊಯ್ಯೆಂದು ಕುಣಿಯುವುವು
ಹನಿಹನಿ ಮುತ್ತುಗಳು,
ಹೊಗೆಯಾಗ ಬಯಸಿ.
ನಾಲಿಗೆಯ ಮರೆತು ಬಿಡು,
ಕಣ್ಣು - ಕಿವಿ ತೆರೆದು !

**ಹಾಲಾಡಿ ಮಾರುತಿರಾವ್**
೩/೪, ಮ್ಹಾಳಸಾ ನಿವಾಸ, ಅಬ್ಬಿಗೆರೆ ಬಡಾವಣೆ,
ಚಿಕ್ಕಬಾಣಾವರ ರಸ್ತೆ, ಬೆಂಗಳೂರು - ೫೬೦ ೦೯೦.



ಪಕ್ಷ ಕಟ್ಟುವ ಒಡೆಯುವ ರಾಜಕೀಯ ಸ್ಪರ್ಧೆ
ಏನಾದರೂ ಒಲಿಂಪಿಕ್ಸ್‌ನಲ್ಲಿ ಇದ್ದಿದ್ರೆ
ನಮ್ಮವರು ಪದಕ ಗೆಲ್ತಿದ್ರು !

# ಗ್ರಹಗಳಿಂದ ನಕ್ಷತ್ರಗಳ ಪರಿಚಯ



*ಜಾರ್ಜ್ ರೀಡ್ ಅವರ ಕಲ್ಪನೆಯಲ್ಲಿ 'ಅಕ್ವೇರಿಯಸ್' ನೀರಿನ ಬದಲು ವಯೋಲಿನ್ ಹಿಡಿದಿದ್ದಾನೆ.*

ನವೆಂಬರ್ ತಿಂಗಳಲ್ಲಿ ಮೋಡ ಕವಿದಿದ್ದರೂ ಆಗೊಮ್ಮೆ ಈಗೊಮ್ಮೆ ಶುಭ್ರ ಆಕಾಶದ ದರ್ಶನ ಇದೆ. ಉತ್ತರ ದಿಕ್ಕಿನಲ್ಲಿ ಕಾಣುವ ಪ್ರಕಾಶಮಾನವಾದ ನಕ್ಷತ್ರಪುಂಜಗಳಲ್ಲಿ **W** ಆಕಾರದ ಕುಂತಿ (ಕ್ಯಾಸಿಯೋಪಿಯಾ) ಈಶಾನ್ಯ ದಿಕ್ಕಿನಲ್ಲಿ ಕಾಣುತ್ತದೆ. ನೆತ್ತಿಯ ಮೇಲೆ ಚೌಕದಂತೆ ಕಾಣುವ ಪುಂಜವೇ ನಕುಲ (ಪೆಗಸಸ್). ಪಶ್ಚಿಮದಲ್ಲಿ ಭೀಮ (ಹರ್ಕ್ಯುಲಿಸ್) ಮುಳುಗುತ್ತಿದ್ದರೆ ಪೂರ್ವದಲ್ಲಿ ವೃಷಭ (ಟಾರಸ್) ಉದಯಿಸುತ್ತಿರುತ್ತದೆ. ಇದು ಸಂಜೆ ಸುಮಾರು ಏಳು ಗಂಟೆಗೆ ಕಾಣುವ ಚಿತ್ರಣ.

ದಕ್ಷಿಣ ದಿಕ್ಕಿಗೆ ತಿರುಗಿದಾಗ ಪ್ರಕಾಶಮಾನವಾದ ನಕ್ಷತ್ರವೊಂದು ಕಾಣುತ್ತದೆ. ಇದು ದಕ್ಷಿಣ ಮೀನಾ ಎಂಬ ನಕ್ಷತ್ರಪುಂಜದ ಮೀನಾಕ್ಷಿ (ಫಾಮಲ್ ಹೌಟ್) ಎಂಬ ನಕ್ಷತ್ರ. ಕ್ಷೀಣವಾಗಿ ಕಾಣುವ ಮಕರ ಮತ್ತು ಕುಂಭ ರಾಶಿಗಳನ್ನು ಗುರುತಿಸುವುದು ಸುಲಭವಲ್ಲ. ತ್ರಿಕೋಣಾಕಾರದ ರಚನೆಯಿಂದ ಮಕರವನ್ನು ಗುರುತಿಸಿ, ಅನಂತರ ಪಕ್ಕದ ಕುಂಭವನ್ನು ಗುರುತಿಸಬಹುದು. ಅಲ್ಲಿ ಕಾಣುವ ನಕ್ಷತ್ರಗಳ ವಿನ್ಯಾಸದಲ್ಲಿ ನೀರು ಚೆಲ್ಲುತ್ತಿರುವ ವ್ಯಕ್ತಿಯನ್ನು ಕಲ್ಪಿಸಿಕೊಳ್ಳುವುದು ದುಃಸಾಧ್ಯ. ನಕ್ಷತ್ರ ಪುಂಜಗಳ ಹೆಸರುಗಳ ಮೂಲ ಕಲ್ಪಿತ ಚಿತ್ರವಾದದ್ದರಿಂದ ಅಲ್ಲಿ ಏನನ್ನಾದರೂ ಊಹಿಸಿಕೊಳ್ಳಬಹುದು. ವಿದ್ಯಾರ್ಥಿಯೊಬ್ಬ ಜೋಗದ ಜಲಪಾತವನ್ನೇ ಅಲ್ಲಿ ರಚಿಸಿದ್ದ. ಜಾರ್ಜ್ ರೀಡ್ ಅವರು ನೀರಿನ ಕುಂಭದ ಬದಲು ವಯೋಲಿನ್‌ನಂತಹ ವಾದ್ಯವನ್ನು ಕಲ್ಪಿಸಿಕೊಂಡಿದ್ದಾರೆ. ಆದರೆ ನೀರಿನೊಡನೆ ಸಂಬಂಧಕ್ಕೆ ಐತಿಹಾಸಿಕ ಕಾರಣವೂ ಇದೆ. ಜನವರಿ - ಫೆಬ್ರವರಿ ತಿಂಗಳುಗಳಲ್ಲಿ ಸೂರ್ಯ ಈ ರಾಶಿಯಲ್ಲಿದ್ದಾಗ ನೈಲ್‌ನದಿಯಲ್ಲಿ ಪ್ರವಾಹ ಬರುತ್ತದೆ. ಬಾಬಿಲೋನಿಯದಲ್ಲಿಯೂ ಅದು ಮಳೆಗಾಲ. ನೀರು ಹೊತ್ತ ವ್ಯಕ್ತಿಯ ಕಲ್ಪನೆ ಬಾಬಿಲೋನಿಯದ ಕಲ್ಲಿನ ಮೇಲೆ ಮೂಡಿದೆ. ಈ ರಾಶಿಯ ಅಂಕಿತವೂ ನೀರಿನ ತರಂಗವನ್ನೇ ಹೋಲುತ್ತದೆ. ಆದ್ದರಿಂದ ಈ ಹೆಸರು ೨೫೦೦ ವರ್ಷಗಳಿಗೂ ಹಳೆಯದು.

ಭಾರತದ ವಾಯುಗುಣಕ್ಕೆ ಇದು ಹೊಂದುವುದಿಲ್ಲವಾದರೂ ಪಾಶ್ಚಾತ್ಯರ ಪ್ರಭಾವದಿಂದ ಅಕ್ವೇರಿಯಸ್ ಎಂಬ ಪದ ಬಳಕೆಗೆ ಬಂದಿತು. ಕುಂಭ ಎಂದು ಸಂಸ್ಕೃತಕ್ಕೆ ಪದಶಃ ತರ್ಜುಮೆಯಾಯಿತು.

ಗ್ರಹಗಳಲ್ಲಿ ಮೂರು ಸೂರ್ಯಾಸ್ತವಾದ ಕೂಡಲೇ ಕಾಣುತ್ತವೆ. ಪಶ್ಚಿಮದಲ್ಲಿ ಶುಕ್ರ ಧನುರಾಶಿಯಲ್ಲಿ ಪಳಗುಟ್ಟುತ್ತಿರುವುದನ್ನು ಮೋಡಗಳಿದ್ದರೂ ಗುರುತಿಸಬಹುದು. ಪೂರ್ವದಲ್ಲಿ ಇದರ ಪ್ರತಿಸ್ಪರ್ಧಿಯಂತೆ ಬೆಳಗುವ ಗ್ರಹ ಗುರು. ಇದರ ಸಮೀಪವೇ ಕಾಣುವ ಇನ್ನೊಂದು ಗ್ರಹ ಶನಿಯೂ ಸಾಕಷ್ಟು ಪ್ರಕಾಶಮಾನವಾಗಿ ಕಾಣುತ್ತದೆ. ಇವುಗಳ ಸಮೀಪ ಕಾಣುವ ಕೆಂಪುನಕ್ಷತ್ರ ರೋಹಿಣಿ. ಇನ್ನೊಂದು ನಕ್ಷತ್ರಗುಚ್ಛ ಕೃತ್ತಿಕಾ. ಸಂಜೆಯಲ್ಲಿ ಪೂರ್ವದಲ್ಲಿ ಕಾಣುವ ಇವು ರಾತ್ರಿ ಇಡೀ ನೋಡಲು ಸಿಗುತ್ತವೆ. ಆದ್ದರಿಂದ ಯಾವ ಹೊತ್ತಿನಲ್ಲಿ ಮೋಡ ಅವಕಾಶ ಕೊಟ್ಟಾಗಲೂ ಈ ನಾಲ್ಕು ಗ್ರಹ- ನಕ್ಷತ್ರಗಳ ಸಮಾಗಮವನ್ನು ವೀಕ್ಷಿಸಬಹುದು. ಇವುಗಳದೊಂದು ನಕ್ಷೆಯನ್ನೂ ತಯಾರಿಸಿ ಇಟ್ಟುಕೊಂಡಲ್ಲಿ ತಿಂಗಳಿನಿಂದ ತಿಂಗಳಿಗೆ ಗ್ರಹಗಳ ಚಲನೆಯನ್ನು ಗುರುತಿಸುವುದು ಸಾಧ್ಯ. ಅಲ್ಲದೆ ಸೌರಕೇಂದ್ರ ಸಿದ್ಧಾಂತಕ್ಕೇ ಕಾರಣೀಭೂತವಾದ ಹಿನ್ನಡೆ ಎಂಬ ಚಲನೆಯನ್ನು ಗುರುತಿಸಲೂ ಇದು ಸುಸಮಯ. ಸಾಧಾರಣವಾಗಿ ಗ್ರಹಗಳೆಲ್ಲವೂ ಪಶ್ಚಿಮದಿಂದ ಪೂರ್ವಕ್ಕೆ ಅಂದರೆ ಮೇಷದಿಂದ ವೃಷಭ, ವೃಷಭದಿಂದ ಮಿಥುನ ಇದೇ ಕ್ರಮದಲ್ಲಿ ಚಲಿಸುತ್ತವೆ. ಆದರೆ ಕೆಲವೊಮ್ಮೆ ಇದಕ್ಕೆ ವಿರುದ್ಧವಾಗಿ ಪಶ್ಚಿಮದಿಂದ ಪೂರ್ವಕ್ಕೆ ಚಲಿಸುತ್ತವೆ. ನವೆಂಬರ್ ತಿಂಗಳುದ್ದಕ್ಕೂ ಶನಿ ಮತ್ತು ಗ್ರಹಗಳ ಸ್ಥಾನಗಳನ್ನು ಗುರುತುಮಾಡಿಕೊಂಡರೆ ಈ ಅಂಶ ಸ್ಪಷ್ಟವಾಗುತ್ತದೆ. ತಿಂಗಳ ಮೊದಲಲ್ಲಿ ರೋಹಿಣಿಯಿಂದ ೪ $^{1}/_{2}$ ಡಿಗ್ರಿಗಳಷ್ಟು ದೂರದಲ್ಲಿದ್ದು ಗುರು, ತಿಂಗಳ ಕೊನೆಗೆ ೬ ಡಿಗ್ರಿಗಳಷ್ಟು ದೂರ ಸರಿಯುತ್ತದೆ. ನಿಧಾನವಾಗಿ ಚಲಿಸುವ ಶನಿಯಿಂದ ಅದರ ಅಂತರ ದಿನೇ ದಿನೇ ಕಡಿಮೆಯಾಗುತ್ತದೆ ಎಂಬುದನ್ನು ಬರಿಗಣ್ಣಿನಿಂದಲೇ ಗುರುತಿಸಬಹುದು.

ಈ ತಿಂಗಳಲ್ಲಿ ಶನಿಗ್ರಹ ಪ್ರಕಾಶದಲ್ಲಿ ಗರಿಷ್ಠವನ್ನು ಮುಟ್ಟುತ್ತದೆ. ನಡುರಾತ್ರಿಯ ಹೊತ್ತಿಗೆ ನೋಡಿದಿರಾದರೆ, ಅತಿ ಪ್ರಕಾಶಮಾನವಾದ ನಕ್ಷತ್ರ ಸಿರಿಯಸ್‌ನೊಂದಿಗೆ ಸ್ಪರ್ಧಿಸುತ್ತಿದೆಯೇನೋ ಎಂದು ಅನುಮಾನವೂ ಬರುತ್ತದೆ. ಕಳೆದ ೨೫ ವರ್ಷಗಳಲ್ಲಿ ಇಷ್ಟು ಪ್ರಕಾಶ ಪಡೆಯುತ್ತಿರುವುದು ಇದೇ ಮೊದಲು. ಇದಕ್ಕೆ ಎರಡು ಕಾರಣಗಳಿವೆ.

ಅದರ ಕಕ್ಷೆಯ ಪುರರವಿ (ಅಂದರೆ ಸೂರ್ಯನಿಗೆ ಸಮೀಪವಾದ ಬಿಂದು) ಯನ್ನು ಅದು ಇನ್ನು ಮೂರು ವರ್ಷಗಳಲ್ಲಿ ತಲುಪುತ್ತದೆ. ಈ ಕಾರಣ ಅದರ ಪ್ರಕಾಶದಲ್ಲಿ ಹೆಚ್ಚಳವಾಗಿದೆ. ಇನ್ನೊಂದು ಕಾರಣವೆಂದರೆ ಅದರ ಉಂಗುರಗಳ ತಲ ಈಗ ನಮ್ಮ ದೃಷ್ಟಿರೇಖೆಗೆ ನೇರವಾಗಿದ್ದು ಹೆಚ್ಚಿನ ಬೆಳಕು ಪ್ರತಿಫಲಿಸುತ್ತದೆ; ಅಲ್ಲದೆ ಅದರ ಗಾತ್ರವೂ ದೊಡ್ಡದಾಗಿ ಕಾಣುತ್ತಿದೆ. ಗುರುಗ್ರಹವೂ ತನ್ನ ಪ್ರಕಾಶದ ಗರಿಷ್ಠವನ್ನು ಮುಟ್ಟುತ್ತಿದೆ. ಆದರೆ ಇದು ಅಷ್ಟೊಂದು ವಿರಳವಾದ ಘಟನೆ ಅಲ್ಲ.

ಬೆಳಗಿನ ಝಾವ ಆಕಾಶವನ್ನು ಗಮನಿಸಿದರೆ, ಗುರು ಮತ್ತು ಶನಿ ಇವನ್ನು ಪಶ್ಚಿಮದಲ್ಲಿ ನೋಡಬಹುದು. ಆಗ ಪೂರ್ವದಲ್ಲಿ ಕೆಂಪು ಬಣ್ಣದ ಮಂಗಳ ಗ್ರಹವನ್ನೂ ನೋಡಬಹುದು.

ಚಂದ್ರ ತಿಂಗಳ ಮೊದಲವಾರದಲ್ಲಿ ಸಂಜೆಯಲ್ಲೇ ಕಾಣುತ್ತದೆ. ನವೆಂಬರ್ ೧೨ ರಂದು ಗುರು, ಶನಿ, ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳ ಮಧ್ಯೆ ಕಾಣುವ ದೃಶ್ಯ, ಛಾಯಾಚಿತ್ರ ಗ್ರಾಹಕರಿಗೆ ಒಳ್ಳೆಯ ಅವಕಾಶ. ಹುಣ್ಣಿಮೆ ನವೆಂಬರ್ ೧೨ರ ಬೆಳಗಿನ ಝಾವ ೨.೪೫ಕ್ಕೆ; ಆದ್ದರಿಂದ ಚಂದ್ರ ಪ್ರಕಾಶಮಾನವಾಗಿರುವುದು ಸಹಜ. ಆದರೂ ಈ ನಾಲ್ಕು ಬೆಳಕಿನ ಚುಕ್ಕೆಗಳನ್ನು ಸುಲಭವಾಗಿ ಗುರುತಿಸಬಹುದು. ಕೃತ್ತಿಕಾ ನಕ್ಷತ್ರ ಸಮೂಹದ ಸಮೀಪ ಹುಣ್ಣಿಮೆಯ ದಿನ ಚಂದ್ರ ಕಾಣುವುದರಿಂದ ಈ ತಿಂಗಳ ಹೆಸರು ಕಾರ್ತೀಕ.

ನವೆಂಬರ್ ೨೧ರಂದು ಚಂದ್ರ ಮಂಗಳ ಗ್ರಹದ ಸಮೀಪ ಕಾಣುತ್ತದೆ. ನವೆಂಬರ್ ೨೯ರಂದು ಶುಕ್ರಗ್ರಹದ ಸಮೀಪ ಕಾಣುತ್ತದೆ.

ಪ್ರತಿವರ್ಷ ನವೆಂಬರ್ ೧೭ರಂದು ಉಂಟಾಗುವ ಲಿಯೋನಿಡ್ ಉಲ್ಕಾವೃಷ್ಟಿ ಈ ಬಾರಿಯೂ ಉಂಟಾಗಲಿದೆ. ವಿಜ್ಞಾನಿಗಳ ಒಂದು ತಂಡ ಗಂಟೆಗೆ ಸುಮಾರು ೧೦೦ ಉಲ್ಕೆಗಳು ಬೀಳಬಹುದು ಎಂದು ಲೆಕ್ಕ ಹಾಕಿದ್ದರೆ, ಇನ್ನೊಬ್ಬ ವಿಜ್ಞಾನಿ ಉತ್ತರ ಅಮೇರಿಕದವರಿಗೆ ೧೮ರ ಬೆಳಗಿನ ಝಾವ ದೀಪಾವಳಿಯೇ ಕಾದಿದೆ ಎನ್ನುತ್ತಾರೆ. ಯಾರ ಲೆಕ್ಕ ಸರಿ ಎಂದು ಕಾದು ನೋಡಬೇಕಷ್ಟೇ.




ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು - ೧

ಎಚ್‌ಎಮ್ ಟಿ

ಬಹುಮಾನಿತ ಲೇಖನ






ವಿಲ್ಲಿ ಅಮೆರಿಕೆಗೆ ಹೋಗುವ ಹೊತ್ತಿಗೆ ಅಲ್ಲಿ ಜ್ಞಾನ ಶಾಖೋಪಶಾಖೆಗಳಾಗಿ ಹರಡಿ ನಿಂತಿತ್ತು. ಪ್ರತಿಯೊಂದು ವಿಷಯವೂ ಲಕ್ಷಾಂತರ ಸ್ಪೆಷಲೈಸೇಶನ್ನಿಗೆ ದಾರಿ ಮಾಡಿಕೊಟ್ಟಿತ್ತು. ಕೂದಲು ಸೀಳುವಂತೆ ವಾದಿಸುವ ತಜ್ಞರು ಖಂಡದ ಉದ್ದಗಲ ತುಂಬಿಕೊಂಡಿದ್ದರು.

ಡಾಕ್ಟರೇಟು ಮಾಡಲೆಂದು ಬಂದಿದ್ದ ವಿಲ್ಲಿ ಸೀದಾ ವಿಸ್‌ಕಾನ್ಸಿನ್ ಪಾತ್ ಫೈಂಡಿಂಗ್ ಫೌಂಡೇಶನ್ನಿಗೆ ಹೋಗಿ ಪ್ರೊಫೆಸರ್ ಮೈಸೂರ ಮರಿಯಪ್ಪನವರು ಕೊಟ್ಟಿದ್ದ ಶಿಫಾರ್ಸು ಪತ್ರವನ್ನು ಪ್ರೊಫೆಸರ್ ಫಾಂಟಾಸ್ ಕ್ವಿವೋಟ್ ಅವರಿಗೆ ಕೊಟ್ಟ. ಪ್ರೊಫೆಸರರು ತಮ್ಮ ನೀಲಿ ಗೋಲಿ ಕಣ್ಣುಗಳಿಂದ ಪತ್ರದ ಮೇಲೆ ಕಣ್ಣಾಡಿಸಿ ತಮ್ಮ ದೈತ್ಯ ದೇಹದ ದರ್ಶನವಾಗುವಂತೆ ಎದ್ದು ನಿಂತು ವಿಲ್ಲಿಯ ಕೈಕುಲುಕಿ ಒಂದು ಪೆಗ್ ವಿಸ್ಕಿ ನೀಡಿ ಸ್ವಾಗತಿಸಿದರು. ಪೊಲೈಟ್ ಮೀನಿಂಗ್ಲೆಸ್ ವರ್ಡ್ಸ್ ಬಳಸಿ ಕುಶಲ ಕೇಳಿದರು. ಮರೆತು ಹೋದ ಮರಿಯಪ್ಪನವರ ಬಗ್ಗೆ ವಿವರಗಳನ್ನು ಮತ್ತೊಮ್ಮೆ ಫೀಡ್ ಮಾಡಿಕೊಂಡರು. ವೈಟ್‌ಹೌಸ್ ಶೈಲಿಯಲ್ಲಿ ಕಟ್ಟಿದ್ದ ಥೀಸಿಸ್ ಬ್ಯಾಂಕನ್ನು ತೋರಿಸಿ ಒಂದು ಸುತ್ತು ಹಾಕಿ ಬರಲು ವಿಲ್ಲಿಗೆ ಹೇಳಿದರು. ಬಂಗಾರದ ಗುಂಗುರುಗಳ ಶಿಷ್ಯೆಯನ್ನು ಕರೆದು ಕಾರಲ್ಲಿ ಕೂರಿಸಿಕೊಂಡು ಮಾಯವಾದರು.

ಥ್ರಿಲ್ಲಾದ ವಿಲ್ಲಿ ಯಾವುದೋ ಆಹ್ಲಾದದಲ್ಲಿ ತೇಲುತ್ತಾ ಥೀಸಿಸ್ ಬ್ಯಾಂಕ್ ಹೊಕ್ಕ. ನೂರಾರು ಕೋಣೆಗಳ ಸಾವಿರಾರು ರ‍್ಯಾಕುಗಳಲ್ಲಿ ಲಕ್ಷಾಂತರ ಥೀಸಿಸ್ಸು ಗ್ರಂಥಗಳು ನಿದ್ದೆ ಹೊಡೆಯುತ್ತಿದ್ದವು. ದಂಗಾಗಿ ಅಲ್ಲಲ್ಲಿ ಒಂದೊಂದು ಹೊತ್ತಿಗೆಯ ಧೂಳು ಕೊಡವಿ ಕಣ್ಣಾಡಿಸುತ್ತ ನಡೆದ. ಒಂದೊಂದೂ ಒಂದೊಂದು ಗೊಂಚಲು ಪ್ರಶ್ನೆಗಳಿಗೆ ಉತ್ತರ ನೀಡುತ್ತಿತ್ತು. ಅಮೆರಿಕಾವನ್ನು ಕಂಡುಹಿಡಿದ ಮೂಲಪಾಪಿ ಯಾರು ? ಕೊಲಂಬಸ್ಸನೊ ? ಅಮೆರಿಗೊ ವೆಸ್‌ಪುಸಿಯೊ ? ಅಥವಾ ಅನಾಮಿಕ ಕಡಲುಗಳ್ಳರೊ ? ಶೇಕ್ಸ್‌ಪಿಯರ್‌ನ ನಿಜನಾಮ ಶೇಕ್ಸ್‌ಪೀರ್ ಎಂಬುದೊ ಅಥವಾ ಶೇಷಪ್ಪಯ್ಯರ್ ಎಂಬುದೊ ? ಅವನ ನಾಟಕದಲ್ಲಿ ಶೇಕ್ ಎಂಬ ಪದ ಎಲ್ಲೆಲ್ಲಿ ಯಾವ ಯಾವ ಅರ್ಥಕ್ಕೆ ಬಳಕೆಯಾಗಿದೆ ? ಒಟ್ಟು ಎಷ್ಟು ಸಲ ಆಗಿದೆ ? ಎಲೆಗಳಲ್ಲಿ ಒಟ್ಟು ಎಷ್ಟು ವಿಧ ? ಯಾವ ಯಾವ ಭೂಭಾಗದಲ್ಲಿ ಎಂಥೆಂಥ ಎಲೆಗಳು ಬೆಳೆಯುತ್ತವೆ ? ಮತ್ತು ಯಾಕೆ ? ನಾಣ್ಯಗಳನ್ನು ಜಾರಿಗೆ ತಂದ ಮೊದಲ ಮುಟ್ಠಾಳ ಯಾವ ದೇಶದವನು ? ಯಾವ ಯಾವ ದೇಶದಲ್ಲಿ, ಯಾವ ಯಾವ ಕಾಲದಲ್ಲಿ, ಯಾವ ಯಾವ ನಾಣ್ಯಗಳು ಎಷ್ಟೆಷ್ಟು ದೂರ ನಡೆದುಬಂದಿವೆ ? ಪ್ರಪಂಚದ ನದಿಗಳೆಷ್ಟು ? ಅವುಗಳಲ್ಲಿ ಗಿಡ್ಡ ನದಿಗಳ ಪಾತ್ರವೇನು ? ಉದ್ದ ನದಿಗಳ ಪಾತ್ರವೇನು ? ಯಾವ ಯಾವ ನದಿಗಳು ಯಾವ ಯಾವ ದಿಕ್ಕಿನಿಂದ ಯಾವ ಯಾವ ದಿಕ್ಕಿಗೆ ಹರಿಯುತ್ತವೆ ? ಮತ್ತು ಅಂತಿಮವಾಗಿ ಯಾವ ಸಮುದ್ರವನ್ನು ಸೇರುತ್ತವೆ ? ಹೀಗೆಯೆ ಹಲ್ಲಿನ ಚರಿತ್ರೆ, ನಕ್ಷತ್ರಗಳ ಸಂಖ್ಯಾಶಾಸ್ತ್ರ, ಸ್ತ್ರೀಲಿಂಗದ ಮೇಲ್ತೈ ಲಕ್ಷಣಗಳು, ಕಿವಿಯ ವಿಕಾಸ, ಧೂಳಿನ ಏಳುಬೀಳುಗಳು, ಭಾರತೀಯ ಸಂಸ್ಕೃತಿಯಲ್ಲಿ ಕೊತ್ತಂಬರಿ ಸೊಪ್ಪಿನ ಮಹತ್ವ, ಗ್ರೀಸಿನ ಆಂಫಿ ಥಿಯೇಟರ್‌ಗೆ ಬಳಸಲಾದ ಕಲ್ಲುಗಳ ಹಿಂದಿನ ಜಾಣ ಗಣಿತ, ಈಗ ಯಾವುದೆ ಪಳೆಯುಳಿಕೆ ಲಭ್ಯವಿರದಿದ್ದರೂ ಐದು ದಶಲಕ್ಷ ವರ್ಷಗಳ ಹಿಂದೆ ಬದುಕಿತ್ತೆನ್ನಲಾಗುವ ಆಕಾಶದೆತ್ತರ ಪ್ರಾಣಿಯ ಜೀವಕೋಶಗಳ ವಿನ್ಯಾಸ ಎಂಬೆಲ್ಲ ಜಟಿಲ ವಿಷಯಗಳ ಕುರಿತ ವರ್ಷಗಟ್ಟಲೆ ದಶಕಗಳಗಟ್ಟಲೆ ಅಳೆದು ಸುರಿದು ಅಭ್ಯಸಿಸಿ ಮಂಡಿಸಿ ಬೈಂಡು ಮಾಡಿದ ವಾದಗಳ ಕೋಠಿ. ತಲೆ ಬಿಸಿಬಿಸಿಯಾಗಿ ವಿಲ್ಲಿ ಕೆಫೆಟೇರಿಯಾ ಕಡೆ ನಡೆದ.

ಕೂದಲಷ್ಟು ತೆಳುವಾದ ಚೈನೀಸ್ ನೂಡಲ್ಸ್ ಅನ್ನು ಕಡ್ಡಿಗಳಿಂದ ಹೆಕ್ಕಿ ಮುಕ್ಕುತ್ತಾ ತನ್ನ ಥೀಸಿಸ್‌ಗೆ ಸಬ್ಜೆಕ್ಟೇನು ಎಂದು ತಲೆ ಕೆಡಿಸಿಕೊಂಡ. ಪ್ರೊ॥ ಕ್ವಿವೋಟ್‌ರ ಕಿವಿಯಿಂದ ಹಾದ ಬಂಗಾರದ ತಂತಿಗೂದಲು ಕಣ್ಣಿಗೆ ಹೊಡೆದಂತಾಯಿತು. ತಮ್ಮಪ್ಪನಿಗೂ ಕಿವಿಗೂದಲಿದೆ. ಆದರೆ ಕರ‍್ರಗಿದೆ ಎಂಬುದು ನೆನಪಾಯಿತು. ಮಾತು ಮಾತಿಗೆ ಅವರು 'ನನ್ನ ಕೂದಲಿಗೆ ಸಮಾ' ಎಂದು ರೇಗುತ್ತಿದ್ದುದು ನೆನಪಾಯಿತು. ತನ್ನ ಮತ್ತು ಸುತ್ತಲಿನವರ ಸಿಗರೇಟಿನ ಹೊಗೆಗೂದಲು ಕಣ್ಣಿಗಿರಿಯಿತು. ಹ್ಞ, ಕೂದಲ ಹುಟ್ಟು, ಬೆಳವಣಿಗೆ ಮತ್ತು ಭವಿಷ್ಯ. ಅದೇ ತನಗೆ ಸರಿಯಾದ ಸಬ್ಜೆಕ್ಟು ಅಂದುಕೊಂಡ.

ರಾತ್ರಿಯಿಡಿ ರೂಮಿನ ಲೈಟಾರಿಸದೆ ನಿದ್ದೆಗೆಟ್ಟು ಕೂದಲಿತಿಹಾಸದ ರೂಪರೇಷೆ ತಯಾರಿಸಿದ. ಮರುದಿನ ಒಯ್ದು ಪ್ರೊ॥ ಕ್ವಿವೋಟ್‌ರ ಟೇಬಲ್ ಮೇಲೆ ಇಟ್ಟ. ಕಣ್ಣು ಕೀಲಿಸಿ ನೋಡಿ ಒಂದು ಪೆಗ್ ವಿಸ್ಕಿ ಹೀರಿದ ಪ್ರೊಫೆಸರರು ''ವಂಡ್ರುಫುಲ್. ಯೂ ಆರೆ ಜೀನ್ಯಸ್'' ಎಂದರು. ಅಲ್ಲಿಂದಲ್ಲೆ ವಿಲ್ಲಿಯ ಡಾಕ್ಟರೇಟಿಗೆ ಸಬ್ಜೆಕ್ಟ್ ರಿಜಿಸ್ಟರಾಯಿತು. ವಾರದ ರಜೆ ಪಡೆದು ನಯಾಗರಾ ಜಲಪಾತದ ಹತ್ತಿರವಿರುವ ರಾಚೆಸ್ಟರ್‌ಗೆ ಹೊರಟ.

ಮಿಚಿಗನ್ ಸರೋವರದ ಮೇಲೆ ಬೋಟಿಂಗ್ ಹೋಗಿ ನೀರನ್ನು ಹಿಚುಗಿ ಈ ಸರೋವರದ ಕೂದಲೆಲ್ಲಿದೆ ಎಂದು ತಡಕಾಡಿದ. ಈರೀ ಸರೋವರದ ದಂಡೆಯ ಮೇಲೆ ಟೆಂಟ್ ಹಾಕಿಕೊಂಡು, ನಿಮಿರಿದ ಕೂದಲಿನಂಥ ಸಸ್ಯಗಳ ತಪಾಸಣೆ ನಡೆಸಿದ. ಕಾಡುಗಳು ಜಟೆಗಳಂತೆ, ಟ್ರಿಮ್ಡ್ ಕರ್ಲುಗಳಂತೆ, ಹೆಣೆದ ಜಡೆಯಂತೆ, ಬೆಳೆಸಿದ ಗಡ್ಡದಂತೆ ಕಾಣತೊಡಗಿದವು. ನಯಾಗರಾ ಜಲಪಾತ ಬೆಳ್ಳಿಯ ಕೇಶರಾಶಿಯಂತೆ ಕಂಡಿತು. ಪರವಾಗಿಲ್ಲ ತನ್ನ ವಸ್ತು-ವೈಶಾಲ್ಯ ಜೋರಾಗಿದೆ ಎಂದು ಹಿಗ್ಗಿದ.

ರಾಚೆಸ್ಟರ್ ಪಕ್ಕದ ಸ್ವಚ್ಛಂದ ಕಾಡಿನಲ್ಲಿ ಒಂದು ಸುಂದರವಾದ ರ‍್ಯಾಂಚ್ ನಿರ್ಮಿಸಿಕೊಂಡಿದ್ದ ಗವಿಸಿದ್ದಪ್ಪನವರ ತೋಟದ ಮನೆ ಹೊಕ್ಕ. ಕುಂಡಗಳ ಸುಂದರ ಗಿಡಗಳಿಗೆ ನೀರೆರೆಯುತ್ತಿದ್ದ ಹೂಮುಖಿ ಹುಡುಗಿ ವಿಲ್ಲಿಗೆ 'ಪ್ರೈಮಾ ಫೇಸಿ' ಆಗುವಂತೆ ನೋಡಿಬಿಟ್ಟಳು. ಹಲವು ದಿನದಿಂದ ಬರಿ ಅಮೆರಿಕನ್ ಹೆಣ್ಣುಗಳಿಗೆ ಒಗ್ಗಿಹೋಗಿದ್ದ ವಿಲ್ಲಿಯ ಕಣ್ಣು ಅಮೆರಿಕನ್ ಮಾದರಿಯ ಈ ಇಂಡಿಯನ್ ಹುಡುಗಿಗೆ ಫಕ್ಕನೆ ಮಾರುಹೋದವು. ಅವಳ ಕಪ್ಪುಗೂದಲು ಕುತ್ತಿಗೆ ಮಟ್ಟಕ್ಕೆ ಬಾಯ್ಕಟ್ಟಾಗಿತ್ತು. ಆಳವಾದ ಅವಳ ಕಪ್ಪು ಕಣ್ಣುಗಳ ಆಕರ್ಷಣೆಗೆ ವಿಲ್ಲಿ ವಿಲಿವಿಲಿ ಒದ್ದಾಡಿದ. ಮುಚ್ಚಿದ್ದರೂ ಬಿಚ್ಚಿದ್ದ ಹಾಗಿದ್ದ ಅವಳ ಅಮೆರಿಕನ್ ಸ್ಕರ್ಟು ಅವನ ಸೆಂಟರ್ ಆಫ್ ಗ್ರಾವಿಟಿಯನ್ನು ಕೆಣಕಿದವು. ಇವನ ನೋಟಕ್ಕೆ ಪುಟ

ಬಿದರಹಳ್ಳಿ ನರಸಿಂಹ ಮೂರ್ತಿ

ಗೊಂಡ ಹೂ ಹುಡುಗಿ ಪುಟ ಪುಟ ಪುಟಿದು ನಡೆದುಬಿಟ್ಟಳು.

ಇನ್ನೇನು ಮುಳಗಡೆಯಾಗಲಿದ್ದ ಮಲೆನಾಡಿನ ಮೇಗರವಳ್ಳಿಯ ಎಂ. ಟಿ. ಹೆಗ್ಡೆಯವರಿಗೆ ತಮ್ಮ ದಾಯಾದಿ ಟಿ. ಎಂ. ಹೆಗ್ಡೆಯವರಿಗೆ ತಲತಲಾಂತರದ ದ್ವೇಷ. ಅವರ ಮಗ ಅಮೆರಿಕಾದಲ್ಲಿ ಎಫ್.ಆರ್.ಸಿ.ಎಸ್. ಮಾಡಿಬಂದನೆಂದು ಇವರಿಗೆ ಹೊಟ್ಟೆ ಉರಿ. ಅವನಿಗೆ ಎಲ್ಲೆಲ್ಲೂ ಮನ್ನಣೆ ಸಿಕ್ಕಿತೆಂದು ಕಸಿವಿಸಿ. ಎಂ. ಟಿ. ಹೆಗ್ಡೆಯವರೊಮ್ಮೆ ತಮ್ಮ ಪಕ್ಷ ನೇತಾರರನ್ನು ನೋಡಲು ಶಿವಮೊಗ್ಗೆಗೆ ಹೋದಾಗ, ಅದೇ ಪಕ್ಷದ ಅಭಿಮಾನಿಗಳಾದ ಅಮೆರಿಕಾ ನಿವಾಸಿ ಹೊನ್ನಾಳಿಯ ಗವಿಸಿದ್ದಪ್ಪನವರ ಪರಿಚಯವಾಯಿತು. ಅವರೊಡನೆ ಅದೂ ಇದೂ ಮಾತಾಡಿ ಮಗನ ದಂಡಯಾತ್ರೆಗಳ ಬಗ್ಗೆ ದುಃಖ ತೋಡಿಕೊಂಡರು. ಅದಕ್ಕೆ ಗವಿಸಿದ್ದಪ್ಪನವರು ''ದುಡ್ಡಿಗೆ ಅಮೇರಿಕಾದಲ್ಲಿ ಏನು ಬೇಕಾದ್ರೂ ಸಿಗುತ್ತೆ. ಡಿಗ್ರಿಯಿಂದ ಡಾಕ್ಟರೇಟ್‌ವರೆಗೆ, ಮಸಾಜ್‌ನಿಂದ ಏಡ್ಸ್‌ವರೆಗೆ, ಟಾಯ್‌ಗನ್ನಿಂದ ಪೆಂಟಗನ್‌ವರೆಗೆ ಅಲ್ಲಿ ಎಲ್ಲಾ ಸಿಗ್ತಾವೆ,'' ಎಂದಿದ್ದರು. ಅದೇ ಧೈರ್ಯದ ಮೇಲೆ ಎಂ. ಟಿ. ಹೆಗ್ಡೇರು ಮಗ ವಿಲ್ಲಿಯನ್ನ ಅಲ್ಲಿಗೆ ಕಳಿಸಿಕೊಟ್ಟಿದ್ದರು.

ನಯಾಗರಾ ಸುತ್ತಿಬಂದ ವಿಲ್ಲಿ ಬಲೆ ಫ್ರೆಶ್ಶಾಗಿದ್ದ. ತನ್ನ ಸಬ್ಜೆಕ್ಟಿಗೆ ಪಟ್ಟಾಗಿ ದುಡಿಯತೊಡಗಿದ. ಸಾಕಷ್ಟು ಪುಸ್ತಕ ತಿರುವಿದ. ಸಾಕಷ್ಟು ಸ್ಪೆಷಲಿಸ್ಟ್‌ಗಳನ್ನು ಕನ್ಸಲ್ಟ್ ಮಾಡಿದ. ಹೊತ್ತಲ್ಲದ ಹೊತ್ತುಗಳಲ್ಲಿ ಹತ್ತಾರು ಮೂಡುಗಳಲ್ಲಿ ಗೊತ್ತು ಗುರಿಯಿಲ್ಲದೆ ಚಿಂತನೆ ಮಾಡಿ ದಣಿದ. ಕೂದಲು ಹೆಮ್ಮರವಾಗಿ ಟಿಸಿಲೊಡೆಯಿತು. ಕೂದಲ ಕತೆಗಳು, ಕೂದಲ ಅವತಾರಗಳು, ಕೂದಲ ಚೆಲುವು, ಕೂದಲ ಸಮಸ್ಯೆ, ಕೂದಲ ಉಪಯೋಗ ಕುರಿತು ಬೇಜಾನು ನೋಟ್ಸು ಮಾಡಿದ.

ಹಿಟ್ಲರ್ ತನ್ನ ಕಾನ್‌ಸೆನ್‌ಟ್ರೇಷನ್ ಕ್ಯಾಂಪಿನಲ್ಲಿ ಕೊಂದ ಯಹೂದಿಗಳ ಕೂದಲ ರಾಶಿರಾಶಿ ಮುಂದೆ ಉಪಯೋಗಕ್ಕೆ ಬಂದೀತೆಂದು ಸಂಗ್ರಹಿಸಿಟ್ಟಿದ್ದ. ಪೀಟರ್ ದ ಗ್ರೇಟ್ ಗಡ್ಡ ಬೋಳಿಸಲೊಪ್ಪದ ಆಸ್ಥಾನಿಕರಿಗೆ ಚೆನ್ನಾಗಿ ಕುಡಿಸಿ ಪ್ರಜ್ಞೆತಪ್ಪಿಸಿ ಗಡ್ಡ ಮೀಸೆ ಹೆರೆಸಿದ. ಸೇಂಟ್ ಥಾಮಸ್ ಹಾಗೂ ಪ್ರವಾದಿ ಮೊಹಮ್ಮದರ ಕೂದಲನ್ನ ಕಾಪಾಡಿ ಅದಕ್ಕೋಸ್ಕರ ಇಗರ್ಜಿ ಮಸೀದಿ ಕಟ್ಟಿದ್ದಾರೆ. ಚೀನಾದ ಕೊನೆ ಚಕ್ರವರ್ತಿ ಪುಯಿ ತನ್ನ ಕ್ಯೂ ಆಕಾರದ ಜುಟ್ಟು ಬಲಿಕೊಟ್ಟು ಅರಮನೆಗೆ ಹೊಸ ನಾಗರಿಕತೆಯನ್ನ ಸ್ವಾಗತಿಸಿದ.

ಓ ಹೆನ್ರಿಯ ಕತೆಯೊಂದರಲ್ಲಿ ಗಂಡ ತನ್ನ ಪ್ರೀತಿಯ ಹೆಂಡತಿಗೆ ಕೂದಲು ಬಾಚಲು ಹಣಿಗೆ ಸೆಟ್ಟು ಕೊಳ್ಳಲು ವಾಚು ಮಾರಿ ಬರುವಷ್ಟರಲ್ಲಿ ಅವಳು ತನ್ನ ಕೂದಲು ಕತ್ತರಿಸಿ ಮಾರಿ ಅವನ ವಾಚಿಗೊಂದು ಬಂಗಾರದ ಚೈನು ತಂದಿರುತ್ತಾಳೆ. ಅಲೆಗ್ಸಾಂಡರ್ ಪೋಪ್‌ನ ಕವಿತೆಯೊಂದರಲ್ಲಿ ಹೆಣ್ಣೊಬ್ಬಳ ಕೂದಲು ಕತ್ತರಿಸುವ ಕ್ರಿಯೆ ಲೈಂಗಿಕ ಕ್ರಿಯೆಗೆ ಸಂಕೇತವಾಗುತ್ತದೆ. ಚೀನೀ ಪುರಾಣದ ಪ್ರಕಾರ ಆದಿಯ ವಿರಾಟ್ ಪುರುಷನ ದೇಹದ ಮೇಲಿನ ರೋಮರಾಜಿಯಿಂದ ಭೂಮಿಯ ಕಾಡುಗಳು ಸೃಷ್ಟಿಯಾಗಿದ್ದಾವೆ. ಜಾನಪದ ಕತೆಯೊಂದರಲ್ಲಿ ಮಾಟಗಾತಿಯ ವಶವಾದ ಹುಡುಗಿಗೆ ಉದ್ದಾನುದ್ದ ಕೂದಲು ಬೆಳೆದು ಅವಳು ಅದನ್ನ ಹೆಣೆದು ಮಹಡಿಯಿಂದ ಇಳಿಬಿಟ್ಟಾಗ ರಾಜಕುಮಾರ ಏಣಿಯಂತೆ ಹಗ್ಗದಂತೆ ಅದನ್ನು ಹತ್ತಿ ಮೇಲೆ ಬರುತ್ತಾನೆ. ಇನ್ನೊಬ್ಬ ಕವಿಗೆ ಒಗೆಯಲು ಹಾಕುವ ಕೊಳೆ ಷರಟಿನ ಗುಂಡಿಗೆ ಸಿಕ್ಕಿದ ಹೆಣ್ಣುಗೂದಲು ನೈಲುನದಿ ಮರುಭೂಮಿಯಲ್ಲಿ ಹರಿವಂತೆ ಕಾಣುತ್ತದೆ. ಮಹಾಭಾರತದಲ್ಲಿ ದುಶ್ಶಾಸನನನ್ನು ಕೊಂದ ಭೀಮ ಅವನ ಎಲುಬಿನಿಂದ ದ್ರೌಪದಿಯ ಮುಡಿಬಿಚ್ಚಿದ ಕೂದಲು ಬಾಚುತ್ತಾನೆ. ಆಕಾಶದಿಂದ ಧುಮುಕಿದ ಗಂಗಾ ಪ್ರವಾಹವನ್ನು ಹಿಡಿಯಲು ತನ್ನ ಜಡೆ ಬಿಚ್ಚಿ ಹರಡಿದ ಶಿವನಿಗೆ ಗಂಗಾಧರ ಎಂಬ ಬಿರುದು ಬಂತು. ಕ್ಯಾಲೆಂಡರುಗಳ ಗಂಡು ದೇವತೆಗಳಿಗೂ ಗಡ್ಡ ಮೀಸೆ ಇರದಿರುವುದು ನೋಡಿದರೆ ಹಿಂದೆಲ್ಲಾ ಗಂಡಸರಿಗೆ ಆಲ್ಲೆಲ್ಲ ಕೂದಲೇ ಇರುತ್ತಿರಲಿಲ್ಲವೆಂದು ಸಿದ್ಧವಾಗುತ್ತದೆ.

ಕೂದಲು ಮೈಯುಳ್ಳ ನಾಯಿಗಳು ವರ್ಷವರ್ಷ ಹಳೆಗೂದಲು ಕೊಡವಿ ಹೊಸಗೂದಲು ಪಡೆಯುವುದಕ್ಕೆ ಕೋಟ್‌ಶೆಡಿಂಗ್ ಎನ್ನುತ್ತಾರೆ. ಬೆಕ್ಕಿನ ಕೂದಲು ನಮ್ಮ ಆಹಾರದಲ್ಲಿ ಬೆರೆತರೆ ವಿಷವಾಗುತ್ತದಂತೆ. ಹಿಂದೆಲ್ಲ ಸತ್ತವರ ಕೂದಲು ಬಳಸಿ ಚೌರಿ ಕೂದಲೆಂದು ಮಾರುತ್ತಿದ್ದರು. ಇದೀಗ ಸಿಂಥೆಟಿಕ್ ಕೂದಲು ಮಾರುಕಟ್ಟೆಗೆ ಬಂದಿದೆ. ಸಾಯಿಬಾಬಾ ಎಂಬ ಪಕೋಡ ಪುರುಷನ ತಲೆಯಲ್ಲಿನ ಕರಡಿಗೂದಲ ಟೋಫನ್ನಿನಿಂದ ಭಕ್ತರಿಗೆ ಬೇಕಾದ ಪದಾರ್ಥಗಳು ಉದುರುತ್ತವೆ. ಕೆಲವರಿಗೆ ಕಂಕುಳುಗೂದಲೆಂದರೆ, ಅದರ ವಾಸನೆ ಎಂದರೆ ಪ್ರಾಣ. ಸಮಕಾಲೀನ ರೂಪರ್ಟ್ ಬ್ರೂಕ್‌ಗಳು ಅವರು ! ಹೀಗೆಯೇ ಕೇಶಾಲಂಕಾರಗಳ ಸಂಖ್ಯೆ ಶೈಲಿಗಳನ್ನು ಕಲೆ ಹಾಕಿದ. ಕೂದಲ ವಿಧಗಳನ್ನು ಅಧ್ಯಯನ ಮಾಡಿದ. ಕೂದಲು ಕುರಿತ ಗಾದೆಗಳನ್ನು ಕಲೆ ಹಾಕಿದ. ತನ್ನ ಕೂದಲೆಲ್ಲ ಉದುರಿ ತಲೆ ಕೆಟ್ಟು ಹೋಗುತ್ತದೆಂದು ಭಯವಾಯಿತು.

ಗವಿಸಿದ್ದಪ್ಪನವರ ರ್‍ಯಾಂಚುಕನ್ಯೆ ವಿಲ್ಲಿಗೆ ರಂಚು ಹಿಡಿದಿದ್ದಳು. ಅವಳನ್ನು ನೋಡುವ ನೆವದಲ್ಲಿ ಮತ್ತೆ ಮತ್ತೆ ವಿಲ್ಲಿ ಅಲ್ಲಿಗೆ ಹೋಗತೊಡಗಿದಾಗ ಗವಿಸಿದ್ದಪ್ಪನವರಿಗೆ ಗುಮಾನಿ ಬಂತು. ಅವಳನ್ನು ತಮ್ಮ ಮಗಳೆಂದು ವಿಲ್ಲಿ ಭ್ರಮಿಸಿದ್ದು ಕೇಳಿ ದೊಡ್ಡದಾಗಿ ನಕ್ಕು ಅವಳ ಕತೆ ಹೇಳಿದರು :

ಅವಳು ಕಲ್ಪಿ. ಅವಳ ಪೂರ್ತಿ ಹೆಸರು ಕಲ್ಪನಾ. ಹೊನ್ನಾಳಿಯ ಸೊಪ್ಪಿನ ಕೇರಿ ದ್ಯಾಮಪ್ಪನ ಮಗಳು. ಅವಳ ಕೂದಲಿಂದೆ ಒಂದು ರಾಮಾಯಣ. ಚಿಕ್ಕಂದಿನಿಂದ ಅವಳ ಉದ್ದಾನುದ್ದ ಕೂದಲಿತ್ತು. ಹಿಮ್ಮಡಿ ತನಕ ಚಾಚುತ್ತಿತ್ತು. ಆದರೆ ಗೌಡರ ಮಗಳು ನಾಗವೇಣಿಯ ಜಡೆ ಹೆಗಲು ಮುಟ್ಟಲು ಅವಳು ಮುಗಿಲುನೋಡಬೇಕಾಗಿತ್ತು. ಗೌಡರು ಭೃಂಗಾಮಲಕದ ತೈಲ ಮುಂತಾದ ಕೇಶವರ್ಧಿನಿಗಳನ್ನು ತಂದರೂ ಉಪಯೋಗವಾಗಲಿಲ್ಲ. ನಾಗವೇಣಿಯ ಕೂದಲು ಒಂದಿಂಚೂ ಕೆಳಗಿಳಿಯಲಿಲ್ಲ. ಮಗಳ ಸಂಕಟ ಹೆಂಡತಿಯ ಗೊಣಗಾಟದಲ್ಲಿ ಗೌಡರಿಗೆ ಒಂದು ಸಂಗತಿ ಹೊಳೆಯಿತು. ಕಲ್ಪಿಯ ಕೂದಲು ಬೋಳಿಸಿದರೆ ಸಮಸ್ಯೆ ಬಗೆಹರಿಯುತ್ತದೆ ಎನಿಸಿತು. ಅವರಿಗೆ ಅದು ಹೊಳೆದ ಅರ್ಧಗಂಟೆಯಲ್ಲೆ ದ್ಯಾಮಪ್ಪನ ಎಮ್ಮೆ ತಿನ್ನಬಾರದ್ದು ತಿಂದು ನೊರೆ ಕಾರಿತು. ಹೊಟ್ಟೆ ಉಬ್ಬರಿಸಿ ಕಾಲು ಬಡಿಯಿತು. ದೇವತೆಯಂತೆ ಅಲ್ಲಿ ಪ್ರತ್ಯಕ್ಷಳಾದ ಜೋಗತಿ ಜಟ್ಟವ್ವ ಕಲ್ಪಿಯನ್ನು ಕೂಡಲೆ ಚಂದ್ರಗುತ್ತಿಗೆ ಕರೆದೊಯ್ದು ದೇವತೆಗೆ ಮುಡಿಕೊಟ್ಟು ಬೆತ್ತಲೆ ಸೇವೆ ಮಾಡಿಸಿದರೆ ಎಮ್ಮೆ ನೆಟ್ಟಗಾಗುತ್ತದೆಂದೆ ಖಡಖಡ ಭವಿಷ್ಯ ನುಡಿದಳು. ದ್ಯಾಮಪ್ಪ ಕಣ್ಣೀರು ಹಾಕುತ್ತಾ ಸಾಯುತ್ತಿದ್ದ ಎಮ್ಮೆ ಬದುಕಲೆಂಬ ಒಂದೇ ವಾಂಛೆಯಿಂದ ಮಗಳೊಡನೆ ಚಂದ್ರಗುತ್ತಿ ಬಸ್ಸು ಹತ್ತಿದ. ಮರುದಿನ ಸಂಜೆ ಬೋಳುತಲೆ ಕಲ್ಪಿಯೊಡನೆ ವಾಪಸು ಬರುವ ಹೊತ್ತಿಗೆ ಎಮ್ಮೆ ಬಾಡು ಹೊಟ್ಟೆಗಳನ್ನು ಸೇರಿ ಚರ್ಮ ಹದವಾಗತೊಡಗಿತ್ತು. ದ್ಯಾಮಪ್ಪ ತಲೆ ಮೇಲೆ ಕೈ ಹೊತ್ತು ಕೂತ. ಅದಾದ ಎರಡು ತಿಂಗಳಿಗೆಲ್ಲ ಅವ ಹಡಿ ಕುಡುಕನಾಗಿ ದಾರಿಯ ಧೂಳಾಗಿ ಹೋದ. ಗವಿಸಿದ್ದಪ್ಪನವರು ಒಂದಿವಸ ಬಸ್ಸಿಂದ ಇಳಿದಾಗ ಅವರ ಕಾಲು ಹಿಡಿದು ಕಾಸು ಕೊಡಿ ಎಂದು ಅಂಗಲಾಚಿದ. ಮಕ್ಕಳೆ ಇರದ ಗವಿಸಿದ್ದಪ್ಪನವರಿಗೆ ಅವರ ಹೆಂಡತಿಗೆ ಅಮೆರಿಕದಲ್ಲಿ ಮನೆಗೆಲಸಕ್ಕೆ ತಕ್ಕವರು ಸಿಕ್ಕೇ ಇರಲಿಲ್ಲ. ಥಕ್ಕನೆ ಅವರಿಗೆ ಕಲ್ಪಿಯ ಯೋಚನೆ ಬಂದು ಅವಳನ್ನು ಕಳಿಸಿಕೊಡು ನಿನಗೆ ತಿಂಗಳಾ ಇಷ್ಟು ಕಳಿಸುತ್ತೇನೆ ಎಂದು ನಿಕ್ಕಿ ಮಾಡಿಕೊಂಡರು.

ಕಲ್ಪಿಯ ಕತೆ ಕೇಳಿ ನಿರಾಶನಾಗುವ ಬದಲು ವಿಲ್ಲಿ ಹುರುಪಾದ. ಮೆಲ್ಲಗೆ ಕೂದಲ ಡಾಕ್ಟರೇಟಿನ ಆಕರ್ಷಣೆ ಕಮ್ಮಿಯಾಗಿ ಕಲ್ಪಿಯ ಸೆಳೆತ ವರ್ಧಿಸಿತು. ಬಾಯ್ಕಟ್ಟು ಬೆಳೆಯಗೊಟ್ಟರೆ ಕಲ್ಪಿ ಮಹಾಚೆಲುವೆ ಕೂದಲತ್ತಿಯಾಗುತ್ತಾಳೆಂದು ಸಂಭ್ರಮಿಸಿದ. ರ್‍ಯಾಂಚಿನ ಗುಲಾಬಿ ವನದಲ್ಲಿ ಅವಳೊಡನೆ ಜೂಟಾಟವಾಡಿದ. ಅವಳು ತಪ್ಪಿಸಿ ತಪ್ಪಿಸಿ ಓಡಿದ ಸಿಟ್ಟಿಗೆ ಧಂ ಎಂದು ಬೆನ್ನಿಗೆ ಗುದ್ದಿದ. ''ಬಾಳ ಜೋರೈತಿ ಡಾಕ್ಟರ ಏಟು'' ಅಂದಳು. ಸಿಟ್ಟು ಹಾರಿ ಹೊಟ್ಟೆ ಹುಣ್ಣಾಗುವಂತೆ ನಕ್ಕ. ಅವಳನ್ನು ಗವಿಸಿದ್ದಪ್ಪನವರ ಆಶೀರ್ವಾದದಲ್ಲೆ ಮದುವೆಯಾಗಿ ಮೇಗರವಳ್ಳಿಗೆ ಬಂದಿಳಿದ.

ಎಂ. ಟಿ. ಹೆಗ್ಡೇರಿಗೆ ಪಿಚ್ಚೆನಿಸಿತು. ತಮ್ಮ ಮಗ ವಿಲ್ಲಿ ಅಲಿಯಾಸ್ ವಿಲಾಸ್ ಹೆಗ್ಡೆ ಅಮೆರಿಕಾದಲ್ಲಿ ಡಾಕ್ಟರೇಟು ಮಾಡಿ ಫಾರಿನ್ ಹೆಂಡ್ತಿ ಜೊತೆ ಕಾರಲ್ಲಿ ಜುಮ್ಮಂತ ಬರುತ್ತಾನೆಂದು ಕಾದಿದ್ದರು. ಮಲ್ಲಾಡ ಜಮೀನು ಮುಳುಗಡೆಯಾಗಿ ಕೋಟ್ಯಾಂತರ ರೂಪಾಯಿ ಪರಿಹಾರ ಸಿಗುತ್ತದೆಂದು ಕಾದಿದ್ದರು. ಆದರೆ ವಿಲಾಸ ಕೂದಲಿಗೆ ಸಮನಾದ ಡಾಕ್ಟರೇಟನ್ನು ಅಮೆರಿಕಾಕ್ಕೆ ಬಿಟ್ಟು ದೇಶೀಯ ಹೆಂಡತಿ ಕಲ್ಪನಾ ಎಂಬ ಕೂದಲಿಗಿತ್ತಿಯೊಡನೆ ಬಂದಿದ್ದ. ಹುಬ್ಬಳ್ಳಿ ಸೀರೆ ಖಣದ ಕುಬುಸದಲ್ಲಿ ಬನಶಂಕರಿಯಂತೆ ಕಾಣುತ್ತಿದ್ದಳು ಕಲ್ಪನಾ. ಕಪ್ಪು ಮೋಡದಂಥ ಕೂದಲು ಹಿಮ್ಮಡಿ ಮುಟ್ಟುತ್ತಿತ್ತು. ಅವಳ ಬಟ್ಟಲುಗಣ್ಣುಗಳನ್ನು ಮಲ್ಲಾಡ ಕಾಡನ್ನು ಒಟ್ಟೊಟ್ಟಿಗೆ ಪ್ರೀತಿಸುತ್ತ ವಿಲಾಸ್ ಹೆಗ್ಡೆ ಮಲ್ಲಾಡ ಮುಳುಗಡೆ ವಿರುದ್ಧದ ಹೋರಾಟ ಸಮಿತಿಯ ನೇತಾರನಾದ. ಕಾಡೂ ಉಳಿಯಿತು. ಕಸುವೂ ಉಳಿಯಿತು. ಇಲ್ಲಿಗೀ ಕತೆ ಮುಗಿಯಿತು.

ಬದರಹಳ್ಳಿ ನರಸಿಂಹ ಮೂರ್ತಿ
'ಅನಿಮಿಷ', ದುರ್ಗಿಗುಡಿ ಬಡಾವಣೆ, ಹೊನ್ನಾಳಿ - ೫೭೭ ೨೧೭

# ಸ್ವಕೀಯ ಬೀಜಗಳ ನಾಶದತ್ತ ಹೋಗದಿರಿ

ಎಂ. ಗೋಪಾಲ್

ನಮ್ಮ ರಾಷ್ಟ್ರದಲ್ಲಿ ಬಹುರಾಷ್ಟ್ರೀಯ ಕಂಪೆನಿಗಳ ನಪುಂಸಕ ಬೀಜಗಳ ಹಾವಳಿಯನ್ನು ತಡೆಗಟ್ಟಲು ಮತ್ತು ಅದರಿಂದ ಹಾನಿಗೊಳಗಾದ ರೈತರ ಕುರಿತು ಪಂಚಾಯತಿ ನಡೆಸಲು ಸೆಪ್ಟೆಂಬರ್ ೨೪ ಮತ್ತು ೨೫ರಂದು ಬೆಂಗಳೂರಿನ ಗಾಂಧಿ ಭವನದಲ್ಲಿ ನವಧಾನ್ಯ ಸಂಘಟನೆ, ಅಖಿಲ ಭಾರತ ಕಿಸಾನ್ ಸಭಾ, ಭಾರತ ಕೃಷಿ ಕೂಲಿಕಾರರ ಸಂಘ, ಕರ್ನಾಟಕ ರಾಜ್ಯ ರೈತಸಂಘ, ಆಂಧ್ರ ಪ್ರದೇಶ ರಾಜ್ಯ ರೈತ ಸಂಘ, ಹೀಗೆ ಮೂವತ್ತು ರೈತ ಸಂಘಟನೆಗಳು ಸೇರಿದಂತೆ, ಹಲವಾರು ವಿದೇಶಿ ರೈತ ಸಂಘಟನೆಗಳು ಒಟ್ಟಾಗಿ ಎರಡು ದಿವಸಗಳ ಕಾಲ ಬೀಜ ಪಂಚಾಯಿತಿ ಯನ್ನು ನಡೆಸಿದವು.

ವಿವಿಧ ರಾಜ್ಯಗಳಲ್ಲಿ ನಮ್ಮಲ್ಲಿ ಉತ್ಪಾದನೆಗೊಂಡ ಮತ್ತು ಬಹುರಾಷ್ಟ್ರೀಯ ಕಂಪೆನಿಗಳ ಕಳಪೆ ರಾಸಾಯನಿಕ ಗೊಬ್ಬರ, ಔಷಧಿ, ಹಾಗೂ ಬೀಜಗಳನ್ನು ಉಪಯೋಗಿಸಿ ದಂತಹ ರೈತರು ತಮ್ಮ ಸಾಲ ತೀರಿಸಲು ಸಾಧ್ಯವಾಗದೆ ಆತ್ಮಹತ್ಯೆ ಮಾಡಿಕೊಂಡ ವರಿದ್ದಾರೆ. ಸಾಲ ತೀರಿಸಲು ಮೂತ್ರಪಿಂಡ ಗಳನ್ನೇ ಮಾರಿಕೊಂಡ ದಾರುಣ ಘಟನೆಗಳು ಆಂಧ್ರ ಪ್ರದೇಶದಲ್ಲಿ ನಡೆದಿವೆ. ಈ ಘಟನೆಗಳಿಂದ ಸ್ವತಂತ್ರ ಭಾರತ ನಾಚಿಕೆ ಪಡು ವಂತಾಗಿದೆ.



*ಸಾಲ ತೀರಿಸಲು ಮೂತ್ರಪಿಂಡ ಮಾರಿಕೊಂಡ ನತದೃಷ್ಟರು*

ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ದಿವಾಳಿಕೋರತನ ಎಷ್ಟೆಂಬುದು ಈಗ ಅಂಗೈ ಕನ್ನಡಿಯಾಗಿದೆ.

ಕಂಪ್ಯೂಟರ್ ಮೂಲಕ ಎಲ್ಲ ಸುಖ-ಸಮೃದ್ಧಿಯನ್ನು ಕೂಡಲೆ ಸಾಧಿಸಲು ಹೊರಟಿರುವ ಆಂಧ್ರದ ಹೈಟೆಕ್ ಮುಖ್ಯಮಂತ್ರಿ ಬಹುರಾಷ್ಟ್ರೀಯ ಕಂಪೆನಿಗಳ ಏಜೆಂಟ್ ಕ್ಲಿಂಟನ್‌ನಿಂದ ಬೆನ್ನು ತಟ್ಟಿಸಿ ಕೊಂಡರು. ಆದರೆ ಆತನಿಗೆ ರೈತರ ಗೋಳು ತಿಳಿಯಲು ವ್ಯವಧಾನವಿಲ್ಲ. ಇ-ಗವರ್ನೆನ್ಸ್ ಮತ್ತು ವಿಡಿಯೋ-ಕಾನ್‌ಫರೆನ್ಸ್‌ಗಳ ಮಧ್ಯೆ ರೈತರ ಪರಿಸ್ಥಿತಿಯತ್ತ ಗಮನಹರಿಸಲು ನಾಯ್ಡುಗೆ ಸಮಯ ಸಿಕ್ಕುವುದಿಲ್ಲ! ಹೀಗಿದೆ ಅವರ ಆಡಳಿತ ವೈಖರಿ. ಆಂಧ್ರದಲ್ಲಿ ೪೦೦ ಜನ ರೈತರು ಕೃಷಿಗಾಗಿ ಮಾಡಿದ ಸಾಲ ತೀರಿಸಲು ಸಾಧ್ಯವಾಗದೆ ಆತ್ಮಹತ್ಯೆ ಮಾಡಿಕೊಂಡಿರುವುದು ಹೈಟೆಕ್ ಮುಖ್ಯಮಂತ್ರಿಯ ಕೊಡುಗೆಯಾಗಿದೆ.

ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆಯ 'ರೊಂಟಚೆಲನ್' ಗ್ರಾಮದಲ್ಲಿ ಒಂಬತ್ತು ಜನ ರೈತರು ಮೂತ್ರಪಿಂಡಗಳನ್ನೇ ಮಾರಾಟ ಮಾಡಿದ್ದಾರೆ. ಕಂಟೆರ್ಲ ಕೃಷ್ಣ, ಬೆಬ್ಬಿ ವೆಂಕಟರೆಡ್ಡಿ, ಸಿದ್ದವಾಟಂ ಪೋಲ್‌ರೆಡ್ಡಿ, ಪೇರಂ ಲಚ್ಚರೆಡ್ಡಿ, ದೂರಸನಾಲ ನರಸಿರೆಡ್ಡಿ, ಗೊಲರಾಮಸ್ವಾಮಿ, ದುಗ್ಗಿಪುಡಿ ಪೆದ್ದ ವೆಂಕಟರೆಡ್ಡಿ, ದುಗ್ಗಿಪುಡಿ ಚಿನ್ನ ವೆಂಕಟರೆಡ್ಡಿ, ನರಮೂಲ ಕೃಷ್ಣ ಈ ದುರ್ದೈವಿಗಳೇ ಮೂತ್ರಪಿಂಡವನ್ನು ಮಾರಿಕೊಂಡವರು.

ರೊಂಟಚೆಲನ್ ಗ್ರಾಮದಲ್ಲಿ ದೊಡ್ಡ ದೊಡ್ಡ ಭೂಮಾಲಿಕರಿಂದ ಮೂರು ಎಕರೆ, ನಾಲ್ಕು ಎಕರೆ, ಭೂಮಿಯನ್ನು ಒಂದು ವರ್ಷಕ್ಕೆ ಮೂರು ಸಾವಿರ ರೂಪಾಯಿಗಳಿಗೆ ಗುತ್ತಿಗೆ ಪಡೆದು ಜೆ.ಕೆ.ಎಚ್. - ೧ ಹತ್ತಿಯನ್ನು, ತೆಲ್ಲಂಕೂರ ಮೆಣಸಿನಕಾಯಿ ಬೀಜವನ್ನು ತಂದು ಬಿತ್ತನೆ ಮಾಡಲು ಪ್ರಾರಂಭ ಮಾಡಿದರು. ಅದು ೧೯೯೫ರಲ್ಲಿ ನಡೆದದ್ದು. ಅಲ್ಲಿಂದ ಮೂರು ವರ್ಷಗಳ ಕಾಲ ಸತತವಾಗಿ ಪ್ರತಿ ವರ್ಷ ಹದಿನೇಳು ಸಾವಿರ ರೂಪಾಯಿ ಸಾಲ ಮಾಡಿ ವರ್ಷಕ್ಕೆ ಹತ್ತು ಸಾವಿರ ರೂ. ಬಡ್ಡಿ ಲೆಕ್ಕದಲ್ಲಿ ಪಡೆದರು. ಕಳಪೆ ಬೀಜ, ಔಷಧಿ, ರಾಸಾಯನಿಕ ಗೊಬ್ಬರ ಉಪಯೋಗಿಸಿದ್ದರಿಂದ ಇವರು ನಿರೀಕ್ಷಿಸಿದಮಟ್ಟಿಗೆ ಬೆಳೆ ಬರದೆ ಇವರ ಲೆಕ್ಕಾಚಾರಗಳೆಲ್ಲಾ ಹಾಳಾಯಿತು. ಈ ಬೆಳೆಯನ್ನು ಮಾರಾಟ ಮಾಡಲು ಮಾರುಕಟ್ಟೆಗೆ ಹೋದರೆ ಮಾರುಕಟ್ಟೆಯಲ್ಲಿ ಅದಕ್ಕೆ ಸಿಕ್ಕ ಬೆಲೆ ೫ರಿಂದ ೬ ಸಾವಿರ ಮಾತ್ರ. ಖರ್ಚು ಮಾಡಿದ್ದು ೧೭ ಸಾವಿರ. ಬಡ್ಡಿ ಸೇರಿಸಿ ಒಟ್ಟು ೨೭ ಸಾವಿರ. ಮೂರು ವರ್ಷಗಳಲ್ಲಿ ಈ ಸಾಲ ಲಕ್ಷಾಂತರ ರೂಪಾಯಿಗಳಿಗೆ ಏರಿತು. ಸಾಲ ಕೊಟ್ಟ ಬಡ್ಡಿ ವ್ಯಾಪಾರಿಗಳು ದಿನನಿತ್ಯ ಮನೆ ಬಾಗಿಲಿಗೆ ಬಂದು ಪೀಡಿಸಲು ಪ್ರಾರಂಭಿಸಿದರು. ಅವಮಾನ ತಾಳಲಾರದೆ ಆತ್ಮಹತ್ಯೆಯ ದಾರಿ ಕೆಲವರು ಹಿಡಿದರೆ ಇನ್ನು ಕೆಲವರು ಮೂತ್ರಪಿಂಡ ಮಾರುವ ನಿರ್ಧಾರಕ್ಕೆ ಬಂದರು. ಗುಂಟೂರಿನ ರಾಜು ಮತ್ತು ಮೂರ್ತಿ ಎಂಬ ಮೂತ್ರಪಿಂಡಗಳ ಏಜೆಂಟರ ಪರಿಚಯದಿಂದ ಕಿಡ್ನಿಯೊಂದಕ್ಕೆ ೫೦ ಸಾವಿರ ರೂ. ಸಿಗುವುದಾಗಿ ತಿಳಿದುಬಂದಾಗ ಸಾಲ ತೀರಿಸಲು ದೇಹದ ಬಹುಮುಖ್ಯವಾದ ಅಂಗವನ್ನೇ ಮಾರಲು ಈ ರೈತರು ಏಜೆಂಟರೊಂದಿಗೆ ದೂರದ ದೆಹಲಿಗೆ ಹೋದರು.

ಒಂಬತ್ತು ಜನ ರೈತರನ್ನು ದೆಹಲಿಗೆ ಕರೆದೊಯ್ದು ಒಂದು ಲಾಡ್ಜಿನಲ್ಲಿ ತಿಂಗಳುಗಟ್ಟಲೆ ಇರಿಸಿಕೊಂಡು ಅಲ್ಲಿ ಗಿರಾಕಿ ಸಿಕ್ಕಿದಾಗ ಏಜೆಂಟರು ಒಬ್ಬಬ್ಬರನ್ನೂ ಕರೆದು ಕೊಂಡು ಹೋಗಿ ಮೂತ್ರಪಿಂಡ ಮಾರಾಟ ಮಾಡಿಸಿದ್ದಾರೆ. ಹದಿನೇಳು ದಿವಸ ಇಟ್ಟುಕೊಂಡು ಯಾವುದೇ ಒಳ್ಳೆ ರೀತಿಯ ಆಹಾರ ಕೊಡಲಿಲ್ಲ, ಔಷಧೋಪಚಾರವನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ, ದಿನಕ್ಕೊಂದು ಮಾತ್ರೆಯನ್ನು ಮಾತ್ರ ಕೊಡುತ್ತಿದ್ದರು ಎಂದು ಆ ರೈತರು ಬೀಜ ಪಂಚಾಯತಿ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ. ೫೦ ಸಾವಿರದಲ್ಲಿ ಈ ಬಡಪಾಯಿ ಗಳಿಗೆ ಸಿಕ್ಕಿದ್ದು ಕೇವಲ ನಲವತ್ತೇಳು ಸಾವಿರ. ಏಜೆಂಟರು ಮೂರು ಸಾವಿರ ತೆಗೆದುಕೊಂಡು ತಮ್ಮನ್ನು ಊರಿಗೆ ಕಳಿಸಿಕೊಟ್ಟರು ಎನ್ನುತ್ತಾರೆ. ಈ ರೈತರಿಗೆ ತಾವು ಇಳಿದು ಕೊಂಡ ಲಾಡ್ಜಿನ ಹೆಸರಾಗಲಿ, ಕಿಡ್ನಿ ಕೊಟ್ಟ ಆಸ್ಪತ್ರೆಯಾಗಲಿ, ಯಾವುದನ್ನೂ ತಿಳಿಸಲಿಲ್ಲ ಎನ್ನುವುದರ ಹಿಂದೆ ಎಂತಹ ಭಯಾನಕ ಜಾಲ ಅಡಗಿದೆ ಎನ್ನುವುದು ಊಹಿಸಲು ಅಸಾಧ್ಯ. ಇಷ್ಟೆಲ್ಲ ಮಾಡಿ ಸಾಲ ವಾಪಸ್ಸು ತಂದುಕೊಟ್ಟರೂ ಬಡ್ಡಿ ಸಹ ತೀರಿಲ್ಲ. ಮೈಯಲ್ಲಿ ಮೊದಲಿನ ಹಾಗೆ ಶಕ್ತಿ ಇಲ್ಲ. ಬೆಳೆದುನಿಂತಿರುವ ಹೆಣ್ಣು ಮಕ್ಕಳ ಮದುವೆ ಮಾಡಲಾರದೆ ಬದುಕಿನ ತೂಗುಯ್ಯಾಲೆ ಯಲ್ಲಿದ್ದಾರೆ ಈ ರೈತಾಪಿ ಜನ.

ಮತ್ತೊಂದು ಕಡೆ ವಾರಂಗಲ್ ಜಿಲ್ಲೆಯಲ್ಲಿ ಕಾರ್ಗಿಲ್ ಮತ್ತು ಮಾನ್ಸಾಂಟೋ ಹತ್ತಿ ಮತ್ತು ಬಿಳಿ ಬೀಜಗಳನ್ನು ಉಪಯೋಗಿಸಿ ಮೂವತ್ತು ಗ್ರಾಮಗಳು ಸುತರಾಂ ತೊಳಲಾಡುತ್ತಿವೆ. ಅನಂತಪುರ, ಕಡಪ ಜಿಲ್ಲೆಗಳಲ್ಲಿ ರೈತರಿಗೆ ನಾಯ್ಡು ಸರ್ಕಾರ ರಿಯಾಯಿತಿ ದರದಲ್ಲಿ ಶೇಂಗಾ ಬೀಜ (ಜೆ. ಎಲ್. - ೨೨)ವನ್ನು ಕೊಟ್ಟಿತು. ಇವನ್ನು ಉಪಯೋಗಿಸಿದ್ದರಿಂದ ಸುಮಾರು ಇಪ್ಪತ್ತು ಲಕ್ಷ ಎಕರೆ ಭೂಮಿಯಲ್ಲಿ ನೂರಾರು ಕೋಟಿ ರೂಪಾಯಿ ನಷ್ಟಕ್ಕೆ ಬಲಿಯಾಗಬೇಕಾಯಿತು. ಕಾರಣ ಆ ಬೀಜದಲ್ಲಿ 'ಬಡನ್‌ಕ್ರೋಸಿಸ್' ವೈರಸ್ ಇದ್ದು, ಇದು ಕೆಂಪು ಹುಳುವಾಗಿ (ತ್ರೀಪ್ಸ್) ಪರಿವರ್ತನೆಗೊಂಡು ಇಡೀ











ಅಮೇರಿಕದಿಂದ ಹಿಂದಿರುಗಿದ ನಂತರ ಇವರು
ಮಾಡುತ್ತಿರುವ ಮೊದಲ ಕೆಲಸ ಇದು

*(ಹಿಂದಿನ ಪುಟದಿಂದ)*

ಬೆಳೆಗಳನ್ನು ಹಾಳುಮಾಡಿದೆ. ಕಳಪೆ ಬೀಜದಿಂದ ಆಂಧ್ರ ಒಂದರಲ್ಲೇ ೬೦೦ ಕೋಟಿ ರೂಪಾಯಿಗಳಷ್ಟು ನಷ್ಟವಾಗಿದ್ದು ಹೈಟೆಕ್ ಮುಖ್ಯಮಂತ್ರಿಗಳಿಗೆ ಅದು ಅರ್ಥವಾಗಿದೆಯೋ ಇಲ್ಲವೋ ಗೊತ್ತಾಗದಂತೆ ಅವರು ನಟನೆ ಮಾಡುತ್ತಿದ್ದಾರೆ.

ನಾಯ್ಡು ಅವರ ಟ್ರೂಕಾಪಿ ನಮ್ಮ ಹೈಟೆಕ್ ಮುಖ್ಯಮಂತ್ರಿ ಕರ್ನಾಟಕದ ಎಸ್. ಎಂ. ಕೃಷ್ಣ. ಬೆಂಗಳೂರನ್ನು ಸಿಂಗಾಪುರ ಮಾಡಹೊರಟಿರುವ ಇವರು ನಾಯ್ಡು ಹಾದಿಯಲ್ಲೇ ಹೊರಟಿರುವುದು ಗುಟ್ಟಿನ ಮಾತೇನಲ್ಲ. ಬಹುರಾಷ್ಟ್ರೀಯ ಕಂಪನಿಗಳಾದ ಮಾನ್ಸಾಂಟೋ (ಬಿ. ಟಿ. ಕಾಟನ್) ನಪುಂಸಕ ಹತ್ತಿ ಬೀಜಗಳನ್ನು ಕರ್ನಾಟಕ ರಾಜ್ಯದ ಬಳ್ಳಾರಿ, ದಾವಣಗೆರೆ, ಕೊಪ್ಪಳ, ರಾಯಚೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಪ್ರಯೋಗ ಮಾಡಲು ೧೮೦ ಎಕರೆ ಭೂಮಿಯಲ್ಲಿ ಅವಕಾಶ ಮಾಡಿಕೊಟ್ಟಿದ್ದಾರೆ. ಈ ನಪುಂಸಕ ಬೆಳೆಯಿಂದ ಅದರ ಸುತ್ತಮುತ್ತ ಐದು ಕಿಲೋಮೀಟರ್ ಭೂ ಪ್ರದೇಶದ ಬೆಳೆಗಳ ಮೇಲೆ ಕೆಟ್ಟ ಪರಿಣಾಮ ಉಂಟಾಗಲಿದೆ. ಕರ್ನಾಟಕ ರಾಜ್ಯದಲ್ಲಿ ಕಳಪೆ ಕ್ರಿಮಿನಾಶಕ, ಕಳಪೆ ಬೀಜ, ಕಳಪೆ ರಾಸಾಯನಿಕ ಗೊಬ್ಬರ (ಗುಲಬರ್ಗಾ ಜಿಲ್ಲೆಯಲ್ಲಿ ಸಾವಿರಾರು ಟನ್ ಕಳಪೆ ಗೊಬ್ಬರ ನೆಲದಲ್ಲಿ ಬಚ್ಚಿಡಲಾಗಿತ್ತು) ಉಪಯೋಗಿಸಿ ಸುಮಾರು ಅರವತ್ತು ಜನ ರೈತರು ಇದುವರೆಗೆ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇದ್ಯಾವುದೂ ನಮ್ಮ ಟ್ರೂಕಾಪಿ ಹೈಟೆಕ್ ಮುಖ್ಯಮಂತ್ರಿಯವರಿಗೆ ಅರ್ಥವಾಗಿಲ್ಲ ಎನ್ನುವುದು ದುರಂತ. ವೀರಪ್ಪನ್ ವ್ಯವಹಾರದಲ್ಲಿ ನಿರತರಾಗಿರುವಾಗ ಇವಕ್ಕೆಲ್ಲಾ ಗಮನ ನೀಡಬೇಕಾಗಿಲ್ಲವೆಂದು ಅವರು ಭಾವಿಸಿದ್ದಾರೋ ?

ಏಷಿಯನ್ ಸೀಡ್ಸ್ ಬಹುರಾಷ್ಟ್ರೀಯ ಬೀಜ ವ್ಯಾಪಾರಸ್ಥರ ಏಳನೇ ಸಮ್ಮೇಳನವನ್ನು ಸೆಪ್ಟೆಂಬರ್ ೨೬ರಿಂದ ೨೮ರವರೆಗೆ ಬೆಂಗಳೂರಿನಲ್ಲಿ ನಡೆಸಲು ಕೇಂದ್ರ ಮತ್ತು ರಾಜ್ಯ ಸಚಿವರುಗಳು ರತ್ನಗಂಬಳಿ ಹಾಕಿ ಭವ್ಯ ಸ್ವಾಗತ ನೀಡಿದರು. ವಿದೇಶಿ ವ್ಯಾಮೋಹ ಇವರನ್ನು ಕಿತ್ತು ತಿನ್ನುತ್ತಿದೆ. ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನಲ್ಲಿ ಶೇಂಗಾ ಬೆಳೆಗೆ ತಗಲಿರುವ ರೋಗ (ಬಡನ್‌ಕ್ರೋಸಿಸ್ ಎಂಬ ವೈರಸ್ ಏಷ್ಯದಲ್ಲೇ ವಿಸ್ತೃತವಾಗಿ ಈ ಬೆಳೆಗಳ ನಾಶ ಮಾಡುತ್ತಿದೆ) ಬಂದು ಸಾವಿರಾರು ಎಕರೆ ಬೆಳೆ ಹಾನಿಯಾಗಿ ರೈತರು ದುಃಖದಲ್ಲಿ ತೊಳಲಾಡುತ್ತಿರುವಾಗ ಬಹುರಾಷ್ಟ್ರೀಯ ಬೀಜ ಕಂಪೆನಿಗಳ ಏಷಿಯನ್ ಸಮ್ಮೇಳನ ಇದಕ್ಕೆ ಪರಿಹಾರ ನೀಡಬಲ್ಲುದೆ?

ಈ ರೀತಿಯ ದಾಳಿ ಬರೀ ಭಾರತಕ್ಕಷ್ಟೇ ಸೀಮಿತವಲ್ಲ; ಅದು ಬೇರೆ ಬೇರೆ ರಾಷ್ಟ್ರಗಳಲ್ಲಿಯೂ ಪ್ರಾರಂಭವಾಗಿದೆ. ವಿಶ್ವ ವಾಣಿಜ್ಯ ಮಂಡಳಿ, ವಿಶ್ವ ಬ್ಯಾಂಕ್, ಅಮೆರಿಕಾ, ಬ್ರಿಟನ್ ಸಾಮ್ರಾಜ್ಯಶಾಹಿಗಳ ವಿರುದ್ಧ ಮತ್ತೊಂದು ಹೋರಾಟಕ್ಕೆ ಸಜ್ಜಾಗಿ ಎನ್ನುವ ವಿ. ಆರ್. ಕೃಷ್ಣ ಅಯ್ಯರ್ ಅವರ ಕೂಗು ಇಂದು ತೀರಾ ಪ್ರಸ್ತುತ.

**ಎಂ. ಗೋಪಾಲ್**

(ಲೇಖಕರು ಅಖಿಲ ಭಾರತ ಕಿಸಾನ್ ಸಭಾದ ಕರ್ನಾಟಕ ರಾಜ್ಯ ಘಟಕದ ಪ್ರಧಾನ ಕಾರ್ಯದರ್ಶಿಗಳಾಗಿ ಕೆಲಸ ಮಾಡುತ್ತಿದ್ದಾರೆ).

# ಅವ್ವೇರಹಳ್ಳಿಯ ಆಕರ್ಷಣೀಯ ಬೆಟ್ಟ

ನಿತ್ಯದ ಯಾಂತ್ರಿಕ ಜೀವನದ ನಡುವೆ ತುಸು ಬದಲಾವಣೆಯನ್ನು ಬಯಸುತ್ತಾ ಒಂದು ದಿನದ ಪ್ರವಾಸವನ್ನು ಕೈಗೊಳ್ಳಲು ಇಚ್ಛಿಸುವ ಮಂದಿ ಅವ್ವೇರಹಳ್ಳಿಯ ಬೆಟ್ಟವನ್ನು ನೋಡಿ ಆನಂದಿಸಬಹುದು. ಬೆಂಗಳೂರು - ರಾಮನಗರ ಮಾರ್ಗವಾಗಿ ಪ್ರವಾಸವನ್ನು ಕೈಗೊಂಡಾಗ ನಮಗೆ ರಾಮನಗರದ ಬೆಟ್ಟಗಳ ಸಾಲು ಕಾಣುವುದು ಸಹಜ. ರಾಮನಗರದಿಂದ ಕಾನಕಾನಹಳ್ಳಿ ಗೇಟ್ ಬಳಿ ತಿರುಗಿ ಸುಮಾರು ೧೧ ಕಿ. ಮೀ. ದೂರ ಪ್ರಯಾಣಿಸಿದಲ್ಲಿ ಕಣ್ಮನ ಸೆಳೆಯುವ ಅವ್ವೇರಹಳ್ಳಿಯ ಬೆಟ್ಟ ಕಂಡುಬರುತ್ತದೆ. ಈ ಬೆಟ್ಟವನ್ನು ರೇವಣಸಿದ್ದೇಶ್ವರ ಬೆಟ್ಟವೆಂದೂ ಕರೆಯುತ್ತಾರೆ.

ಬಂಡೆಗಳ ಸಮೂಹದಿಂದ ನಿರ್ಮಾಣಗೊಂಡು ನಿಸರ್ಗದ ಮಡಿಲಲ್ಲಿ ತಲೆಯೆತ್ತಿ ನಿಂತಿರುವ ಈ ಬೃಹದಾಕಾರವಾದ ಬೆಟ್ಟವು ತನ್ನ ಸೌಂದರ್ಯದಿಂದ ಪ್ರವಾಸಿಗರನ್ನು ಸೆಳೆಯಬಲ್ಲ ತಾಣವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಅನೇಕ ಚಿಕ್ಕ ಪುಟ್ಟ ಬೆಟ್ಟಗಳಿಂದ ಆವೃತವಾದಂತೆ ಕಂಡುಬರುವ ಈ ಬೆಟ್ಟವನ್ನು ಸಮೀಪದಿಂದ ಕಂಡಾಗ ದೊಡ್ಡ ಶಂಖಾಕೃತಿಯ ನೆನಪಾಗುತ್ತದೆ. ಸಮುದ್ರಮಟ್ಟಕ್ಕಿಂತ ಸುಮಾರು ೩೩೦೦ ಅಡಿ ಎತ್ತರವಿರುವ ಇಲ್ಲಿ ಎರಡು ದೇವಾಲಯಗಳಿವೆ. ಒಂದು ದೇವಾಲಯವು ಬೆಟ್ಟದ ಮಧ್ಯಭಾಗದಲ್ಲಿ ಕಂಡುಬಂದರೆ ಮತ್ತೊಂದು ಬೆಟ್ಟದ ತುದಿಯಲ್ಲಿ ಕಂಡುಬರುತ್ತದೆ.

ಮೆಟ್ಟಿಲುಗಳನ್ನೇರುತ್ತಾ ಬೆಟ್ಟವನ್ನು ಹತ್ತತೊಡಗಿದಾಗ ಕಡಿದಾದ ಸ್ಥಳಗಳ ಪರಿಚಯ ನಮಗೆ ಉಂಟಾಗುತ್ತದೆ. ಇಲ್ಲಿ ಕೆಲವೆಡೆ ಮೆಟ್ಟಿಲುಗಳು ನೇರವಾಗಿ ಕಂಡುಬಂದರೆ ಮತ್ತೆ ಕೆಲವೆಡೆಗಳಲ್ಲಿ ತೀರಾ ಇಳಿಜಾರಿನಲ್ಲಿದ್ದಂತೆ ಗೋಚರಿಸುತ್ತವೆ. ಬೆಟ್ಟವನ್ನೇರುವುದು ಪ್ರಯಾಸದ ಕೆಲಸವೆನಿಸುವ ಕೆಲವೆಡೆಗಳಲ್ಲಿ ಕಬ್ಬಿಣದ ಕಂಬಗಳಿಗೆ ಸರಳುಗಳನ್ನು ಆಸರೆಗಾಗಿ ಅಳವಡಿಸಲಾಗಿದ್ದು ಇದರ ಸಹಾಯದಿಂದ ಬೆಟ್ಟವನ್ನು ಏರಬಹುದಾದ ವ್ಯವಸ್ಥೆ ಇಲ್ಲಿದೆ.

ಸುತ್ತಲೂ ಕಂಡುಬರುವ ಗುಡ್ಡ, ಬೆಟ್ಟ, ಕೆರೆ ಮುಂತಾದ ಸುಂದರ ಪರಿಸರವನ್ನು ವೀಕ್ಷಿಸುತ್ತಾ ಮೇಲೇರಿ ಸಾಗಿದಲ್ಲಿ ಬೆಟ್ಟ ಹತ್ತಿದ ದಣಿವು ಅಷ್ಟಾಗಿ ಗೋಚರಿಸುವುದಿಲ್ಲವಾದರೂ ಬೇಸಿಗೆಯ ಕಾಲದಲ್ಲಿನ ಬೇಸಿಗೆಯ ಧಗೆ, ಚಳಿಗಾಲದಲ್ಲಿನ ಗಾಳಿಯ ರಭಸವು ಇಲ್ಲಿ ಅಧಿಕವೆನ್ನುವ ಅನುಭವವಾಗುತ್ತದೆ.

ಅವ್ವೇರಹಳ್ಳಿಯ ಬೆಟ್ಟದ ತುದಿಯನ್ನು ತಲುಪಲು ಸುಮಾರು ೧೦೦೦ ಮೆಟ್ಟಿಲುಗಳನ್ನು ಹತ್ತುವುದು ಅನಿವಾರ್ಯವಾದರೂ ನಯನ ಮನೋಹರವಾದ ದೃಶ್ಯಗಳನ್ನು ಸವಿಯುವ ಅವಕಾಶವನ್ನು ಇದು ಒದಗಿಸುವುದು ಖಂಡಿತ. ಬೆಟ್ಟವನ್ನು ಸುತ್ತುವರಿದಂತೆ ಇರುವ ಮೆಟ್ಟಿಲುಗಳನ್ನು ಹತ್ತುತ್ತಾ ಅರ್ಧದಾರಿಯನ್ನು ಕ್ರಮಿಸಿದಾಗ ಭೀಮೇಶ್ವರ ದೇವಾಲಯವು ಕಂಡುಬರುತ್ತದೆ. ವಿಶಾಲವಾದ ಬಂಡೆಯ ಸಮೀಪದಲ್ಲೇ ಮತ್ತೊಂದು ದೊಡ್ಡ ಬಂಡೆಯೊಂದರ ಮೇಲೆ ನಿರ್ಮಾಣಗೊಂಡಿರುವ ಈ ದೇವಾಲಯದಲ್ಲಿರುವ ಭೀಮೇಶ್ವರ ಲಿಂಗವು ಆಕರ್ಷಣೀಯವಾಗಿದೆ. ಇದನ್ನು ಭೀಮನು ಸ್ಥಾಪಿಸಿದನೆಂದು ಹೇಳುತ್ತಾರೆ ! ದೇವಾಲಯದಲ್ಲಿಯೇ ವೀರಭದ್ರಸ್ವಾಮಿಯ ಮೂರ್ತಿಯೂ ಇದೆ. ಆಂಧ್ರದ ತಮ್ಮ ಸ್ವಗ್ರಾಮದಿಂದ ಕರ್ನಾಟಕಕ್ಕೆ ಬಂದ ಸಂತರಾದ ರೇವಣಸಿದ್ದೇಶ್ವರರು ಈ ಕ್ಷೇತ್ರಕ್ಕೆ ಬಂದು ನೆಲೆಸಿ ಇದನ್ನು ಪವಿತ್ರಗೊಳಿಸಿದರೆಂದು ಒಂದು ಸಂಗತಿಯು ಪ್ರಚಲಿತದಲ್ಲಿರುವುದರಿಂದ ಇಲ್ಲಿ ರೇವಣಸಿದ್ದೇಶ್ವರರ ಹೆಸರಿನ ಆಲಯವೂ ಉಂಟು. ಪ್ರವಾಸಿಗರು ದಣಿವಾರಿಸಿಕೊಳ್ಳುವ ಸಲುವಾಗಿ ಮಂಟಪವೊಂದನ್ನು ಇಲ್ಲಿ ನಿರ್ಮಿಸಿದ್ದಾರೆ. ದೇವಾಲಯದ ಹೊರಗೆ ಹನುಮಂತರಾಯನ ಪೀಳಿಗೆಯ ವಾನರ ಸೈನ್ಯ ಹೇರಳವಾಗಿರುತ್ತದೆ.



ಭೀಮೇಶ್ವರ ಗುಡಿಯ ಒಂದು ನೋಟ



ದೂರದಿಂದ ಅವ್ವೇರಹಳ್ಳಿಯ ಬೆಟ್ಟ ಕಂಡುಬಂದಂತೆ

ಈ ದೇವಾಲಯದಿಂದ ಮುಂದೆ ಮೆಟ್ಟಿಲುಗಳನ್ನೇರುತ್ತಾ ಬೆಟ್ಟದ ತುದಿಯನ್ನು ತಲುಪಿದಾಗ ತಂಗುದಾಣದಂತೆ ನೆರಳನ್ನು ನೀಡಬಲ್ಲ ಎರಡು ಕಲ್ಲಿನ ಮಂಟಪಗಳು ಕಂಡುಬರುತ್ತವೆ. ಆ ಸ್ಥಳದಿಂದ ಕೆಳಗಿನ ದೃಶ್ಯಗಳನ್ನು ವೀಕ್ಷಿಸಿದಲ್ಲಿ ರಮಣೀಯವಾದ ಸುಂದರ ನಯನಮನೋಹರ ಪರಿಸರದ ನೋಟವು ಲಭ್ಯವಾಗುತ್ತದೆ.

ಬೆಟ್ಟದ ಮೇಲೆ ಪುಟ್ಟದಾದ ಕಲ್ಯಾಣಿಯಂತಹ ನೀರಿನ ದೋಣೆಯೊಂದಿದೆ. ಬಂಡೆಯೊಂದರ ತಗ್ಗಿನಲ್ಲಿರುವಂತೆ ಕಂಡುಬರುವ ಇದರ ಬಳಿಯಲ್ಲಿ ಸುಂದರವಾದ ನಂದಿಯ ವಿಗ್ರಹವಿದೆ. ಅದರ ಬಳಿಯಲ್ಲಿಯೇ ಶಿವಾಲಯವೊಂದಿದೆ. ಬಂಡೆಯ ಗವಿಯೊಂದರಲ್ಲಿ ನಿರ್ಮಾಣಗೊಂಡಿರುವ ಈ ಆಲಯದಲ್ಲಿ ಸುಮಾರು ೭೦೦ ವರ್ಷಗಳ ಹಿಂದೆ ರೇವಣಸಿದ್ದೇಶ್ವರರು ತಪಸ್ಸನ್ನು ಮಾಡುತ್ತಿದ್ದರೆಂದೂ, ಆದರಿಂದಾಗಿಯೇ ಲಿಂಗವೊಂದು ಇಲ್ಲಿ ಉದ್ಭವಿಸಿತೆಂದೂ ಕಥೆಯುಂಟು. ಶಿವನ ಎದುರಿನಲ್ಲಿ ಒಂದು ನಂದಿ ವಿಗ್ರಹವಿರುವುದಷ್ಟೇ ಅಲ್ಲದೆ ಎರಡೂ ಬದಿಗಳಲ್ಲಿ ನಂದಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿರುವುದು ಇಲ್ಲಿಯ ವಿಶೇಷವೆನ್ನಿಸುತ್ತದೆ. ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆಯು ನಡೆಯುತ್ತದೆ.

ಬೆಟ್ಟದ ತಪ್ಪಲಿನಲ್ಲಿರುವ ರೇಣುಕಾದೇವಿಯ ದೇವಾಲಯದ ಸಮೀಪದಲ್ಲಿ ವರ್ಷಕ್ಕೊಮ್ಮೆ ಭಾರಿ ಜಾತ್ರೆಯು ಜರುಗುತ್ತದೆ. ಇಲ್ಲಿ ರಥೋತ್ಸವ, ಕೊಂಡ ಹಾಯುವುದು, ಮುಂತಾದ ಕಾರ್ಯಕ್ರಮಗಳು ಅದ್ದೂರಿಯಾಗಿ ನಡೆಯುತ್ತವೆ. ಜಾತ್ರೆಯಲ್ಲಿ ಪಾಲ್ಗೊಳ್ಳಲು ಬರುವ ಪ್ರವಾಸಿಗರ ಅನುಕೂಲಕ್ಕಾಗಿ ಅವರು ತಂಗಲು ಉಚಿತ ಛತ್ರಗಳ ವ್ಯವಸ್ಥೆಯೂ ಇದೆ.

ವಿ. ಎಸ್. ಶ್ರೀನಿವಾಸ ಪ್ರಸನ್ನ
ನಂ. ೩೬, ಪಾರ್ಕ್ ಏರಿಯಾ, ೯ನೇ 'ಬಿ' ಕ್ರಾಸ್
ವಿಲ್ಸನ್ ಗಾರ್ಡನ್, ಬೆಂಗಳೂರು - ೫೬೦ ೦೨೭



ರೇವಣಸಿದ್ದೇಶ್ವರ ಬೆಟ್ಟದಿಂದ ಕಂಡುಬರುವ ಒಂದು ನೋಟ




## ಬಹುಮಾನಿತ ಕೃತಿಗಳು

ಡಾ॥ ಮಹಾಬಲೇಶ್ವರ ರಾವ್ ಅವರ 'ಪ್ರಾಥಮಿಕ ಶಿಕ್ಷಣ : ಸಮಸ್ಯೆಗಳು ಸವಾಲುಗಳು' 99ನೇ ಸಾಲಿನ ಕನ್ನಡ ಸಾಹಿತ್ಯ ಪರಿಷತ್ತಿನ ಡಾ॥ ಹಾ. ಮಾ. ನಾ. ಪ್ರಶಸ್ತಿಯನ್ನು ಮತ್ತು ಪ. ರಾಮಕೃಷ್ಣ ಶಾಸ್ತ್ರಿಯವರ 'ಸುಖ ನೀಡದ ಸಂಪತ್ತು' ಮಕ್ಕಳ ಪುಸ್ತಕ ಬಹುಮಾನವನ್ನು ಗಳಿಸಿವೆ. ಲೇಖಕರಿಗೆ ನವಕರ್ನಾಟಕದ ಅಭಿನಂದನೆಗಳು.



ಅಮೆರಿಕದ ಹೂಸ್ಟನ್ ನಗರದಲ್ಲಿ ಇತ್ತೀಚೆಗೆ ಜರುಗಿದ ವಿಶ್ವ ಕನ್ನಡ ಸಮ್ಮೇಳನದಲ್ಲಿ 'ಕರ್ನಾಟಕ ಪ್ರದರ್ಶನ' ಎಂಬ ರೂಪಕ ಏರ್ಪಾಟಾಗಿತ್ತು. ಕಿತ್ತೂರು ಚೆನ್ನಮ್ಮ, ಒನಕೆ ಓಬವ್ವ, ಜಕ್ಕಣಾಚಾರಿ, ಟಿಪ್ಪು ಸುಲ್ತಾನ, ಕರ್ನಾಟಕ ಮಾತೆ, ರಾಣಿ ಅಬ್ಬಕ್ಕ, ಕೃಷ್ಣರಾಜ ಒಡೆಯರ್ - ಮುಂತಾದ ಮಹನೀಯರ ವೇಷ ಧರಿಸಿದ ಬಾಲಕ ಬಾಲಕಿಯರು ವೇದಿಕೆಯ ಮೇಲೆ ನೆರೆದಿರುವ ದೃಶ್ಯ !



ಕಾಂತಾವರದ ಕನ್ನಡ ಸಂಘವು ತನ್ನ 25ನೇ ವರ್ಷದ ಜನ್ಮದಿನೋತ್ಸವದ ಅಂಗವಾಗಿ ಡಾ॥ ಸಿ. ಆರ್. ಚಂದ್ರಶೇಖರ್ ಅವರಿಗೆ 'ವೈದ್ಯಸಾಹಿತ್ಯ ರಚನಾ ರತ್ನ' ಎಂಬ ಪುರಸ್ಕಾರವನ್ನಿತ್ತು ಅಕ್ಟೋಬರ್ 6, 2000ದಂದು ಬೆಳ್ಳಾರೆ, ಪ್ರೈಮರಿ ಶಾಲಾ ಆವರಣದಲ್ಲಿ ನಡೆದ ಸಮಾರಂಭದಲ್ಲಿ ಸನ್ಮಾನಿಸಿತು.

ಅಲ್ಲದೆ ವೈದ್ಯವಿಜ್ಞಾನ, ಆರೋಗ್ಯ ಮತ್ತು ಮನೋವಿಜ್ಞಾನದ ವಿಷಯಗಳನ್ನು ಜನಸಾಮಾನ್ಯರಿಗೆ ತಲುಪಿಸುವಲ್ಲಿ ಇವರು ಮಾಡುತ್ತಿರುವ ಪ್ರಯತ್ನಗಳಿಗಾಗಿ ಯು.ಜಿ.ಸಿ.ಯ ಹರಿ ಓಂ ಆಶ್ರಮ ಟ್ರಸ್ಟ್‌ನ ರಾಷ್ಟ್ರೀಯ ಪುರಸ್ಕಾರಕ್ಕೆ ಆಯ್ಕೆಯಾಗಿದ್ದಾರೆ. ಇವರಿಗೆ ಅಭಿನಂದನೆಗಳು.




## ಪುಸ್ತಕ ಬಿಡುಗಡೆ

ನವಕರ್ನಾಟಕದ ಪ್ರಕಟಣೆಯಾದ ಡಾ॥ ಸಿ. ಜಿ. ಕೇಶವಮೂರ್ತಿಯವರ **ದಯಾಮರಣ** ಪುಸ್ತಕದ ಬಿಡುಗಡೆ ಸಮಾರಂಭ ಇತ್ತೀಚೆಗೆ ಶಿವಮೊಗ್ಗೆಯಲ್ಲಿ ಜರುಗಿತು. ಶ್ರೀ ಬಿ. ಕೆ. ಗೋವಿಂದ ರಾಜು ಅವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಸಾಹಿತಿ ಶ್ರೀ ಹಿರೇಮಗಳೂರು ಕಣ್ಣನ್ ಪುಸ್ತಕ ಬಿಡುಗಡೆ ಮಾಡಿದರು. ಪ್ರೊ॥ ರಾಜೇಂದ್ರ ಚೆನ್ನಿ ಅವರು ಪುಸ್ತಕ ಪರಿಚಯ ಮಾಡಿಕೊಟ್ಟರು.




## ಪುಸ್ತಕ ಸೊಗಸು ಬಹುಮಾನ

ಕನ್ನಡ ಪುಸ್ತಕ ಪ್ರಾಧಿಕಾರವು ಪುಸ್ತಕ ಸೊಗಸು ಯೋಜನೆಯಡಿ ನೀಡುವ ಮೊದಲ ಬಹುಮಾನ **ನವಕರ್ನಾಟಕ ಜ್ಞಾನವಿಜ್ಞಾನ ಕೋಶ** (98ನೇ ಸಾಲಿಗೆ **ಕಲಾವಿದ ಹೆಬ್ಬಾರರ ರೇಖಾಲಾವಣ್ಯ** (99ನೇ ಸಾಲಿಗೆ) ಮತ್ತು **ಪ್ರತಿಬಿಂಬ** (ಮಕ್ಕಳ ವಿಭಾಗಕ್ಕೆ) - ಈ ಕೃತಿಗಳಿಗೆ ಲಭಿಸಿದೆ. ಮೈಸೂರಿನಲ್ಲಿ ಇತ್ತೀಚೆಗೆ ನಡೆದ ಸಮಾರಂಭದಲ್ಲಿ ನವಕರ್ನಾಟಕ ಪ್ರಕಾಶನದ ಪ್ರತಿನಿಧಿಯಾಗಿ ಮೈಸೂರು ಶಾಖಾ ವ್ಯವಸ್ಥಾಪಕರಾದ ಶ್ರೀ ಎನ್. ಕೆ. ಸತ್ಯನಾರಾಯಣ ಬಹುಮಾನ ಸ್ವೀಕರಿಸಿದರು.

*(೪೫ನೇ ಪುಟದಿಂದ)* ***ಯೋಗಪ್ರವೇಶ.....***

ತೊಂದರೆ ಆಗಬಹುದು. ಜಠರದ ಮಾಂಸಖಂಡಗಳಿಗೆ ಒಳ್ಳೆಯ ವ್ಯಾಯಾಮ ನೀಡುವ ಆಶಯ ಆಗ ದೂರವಾಗುತ್ತದೆ, ಇಲ್ಲದ ತೊಂದರೆಯನ್ನು ಆಹ್ವಾನಿಸಿಕೊಂಡಂತಾಗುತ್ತದೆ. ಇದನ್ನು ನಿಯಮದಂತೆ ಮಾಡಿದರೆ ಶ್ವಾಸಕೋಶಕ್ಕೆ ಒಳ್ಳೆಯದು, ಮಲಬದ್ಧತೆಯ ನಿವಾರಣೆ ಸಾಧ್ಯ. ರಕ್ತದ ಒತ್ತಡ, ಹೃದಯದ ಕಾಯಿಲೆ, ಅಸ್ತಮಾ, ಇತ್ಯಾದಿ ಇರುವವರು ಈ ಆಸನವನ್ನು ಮಾಡಹೋಗಬಾರದು.

ಭುಜಂಗಾಸನದಲ್ಲಿ ನಾಭಿಯ ಮೇಲಿನ ಅಂಗಾಂಗಗಳಿಗೆ ಚಲನೆ; ಶಲಭಾಸನದಲ್ಲಿ ಅಲ್ಲಿಂದ ಕೆಳಗಿನ ಭಾಗಗಳಿಗೆ ಚಲನೆ. ಒಮ್ಮೆಗೇ ಎರಡೂ ಕಾಲುಗಳನ್ನೆತ್ತಲು ಸಾಧ್ಯವಾಗದಿದ್ದರೆ ಒಂದೊಂದೇ ಕಾಲನ್ನು ಎತ್ತಿ, ಇಳಿಸಿ ಮಾಡಬಹುದು. ಆಗ ಅದಕ್ಕೆ ಅರ್ಧ-ಶಲಭಾಸನ ಎಂಬ ಹೆಸರಿರುತ್ತದೆ. ಇದರಲ್ಲಿ ನಿಜಕ್ಕೂ ನಿಧಾನ ಗತಿ ಸಾಧ್ಯ ಮತ್ತು ಅಗತ್ಯ.

## ಜಾಗತಿಕ ಮೌಲ್ಯಗಳು

**ಕ**ಳೆದ ಶತಮಾನದುದ್ದಕ್ಕೂ ನಾವು ಬೆರಗುಗೊಳ್ಳುವಂತಹ ಸಂಶೋಧನೆಗಳನ್ನು ಕಂಡದ್ದಾಯಿತು. ತಾಳೆಯ ಗರಿಗಳ ಬದಲು ಪೆನ್ನು ಕಾಗದಗಳೇಕೆ ಕ್ಯಾಲ್ಕ್ಯುಲೇಟರ್, ಕಂಪ್ಯೂಟರ್‌ಗಳೇ ಬಂದವು. ಈಗ ಫ್ಯಾಕ್ಸ್, ಇಂಟರ್‌ನೆಟ್, ಇ-ಮೇಲ್‌ಗಳೂ ಬರುತ್ತಿವೆ. ಈ ನೂರು ವರ್ಷಗಳ ಅವಧಿ ಕಾರು, ರೈಲ್ವೆ, ವಿಮಾನ, ಜೆಟ್ ವಿಮಾನಗಳ ಕಾಲ. ಕೇವಲ ನೂರು ವರ್ಷಗಳ ಹಿಂದೆ ರೇಡಿಯೋ, ಟೆಲಿವಿಜನ್‌ಗಳಂತಹ ಸಾಧನಗಳ ಬಗ್ಗೆ ವಿವರಿಸಿದರೆ ಜನಕ್ಕೆ ಅವನ್ನು ನಂಬಲಾಗುತ್ತಿರಲಿಲ್ಲ. ಆದರೆ ನೂರೇ ವರ್ಷಗಳಲ್ಲಿ ಬೇರೆ ಗ್ರಹಗಳಿಗೆ ಯಂತ್ರ ಜೀವಿಗಳನ್ನು ತಯಾರಿಸಿ ಕಳಿಸುವ ಯುಗಕ್ಕೆ ಇಂದು ಬಂದುಬಿಟ್ಟಿದ್ದೇವೆ. ಹಿಂದೆ ಎಷ್ಟೋ ಸಾವಿರ ವರ್ಷಗಳಲ್ಲಿ ಆಗದ ತಾಂತ್ರಿಕ ಬೆಳವಣಿಗೆ ಕೇವಲ ನೂರೇ ವರ್ಷಗಳಲ್ಲಿ ಆಗಿದೆ. ಆದರೆ ಇಂದು ಮೌಲ್ಯಗಳ ಸ್ಥಿತಿ ಏನಾಗಿದೆ ?

ಇದು ಪ್ರಜಾಪ್ರಭುತ್ವದ ಯುಗ ಎಂದು ಹೇಳಲಾಗಿದೆ. ಆದರೆ ಅಸಹಾಯಕ ಸಾಮಾನ್ಯನಿಗೆ ಇದು ಗೆಲುವನ್ನೇನೂ ತಂದುಕೊಡಲಿಲ್ಲ. ಜೊತೆಗೆ ಐಶ್ವರ್ಯವಂತರು ಮೆಟ್ಟಿ ಆಳುವುದನ್ನು ಬಿಡಲಿಲ್ಲ. ಬಂಡವಾಳಶಾಹಿ ವ್ಯವಸ್ಥೆ ಇಡೀ ಪೃಥ್ವಿಯನ್ನೇ ತನ್ನ ವಶಕ್ಕೆ ತೆಗೆದುಕೊಳ್ಳುವತ್ತ ವ್ಯಾಪಿಸುತ್ತಿದೆ. ಇಂದು ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಬಹುರಾಷ್ಟ್ರೀಯ ಕಂಪೆನಿಗಳದೇ ಆರ್ಭಟ. ಸರಕಾರಗಳ ಸಾವಿರಾರು ಕೋಟಿ ರೂಪಾಯಿಗಳ ಯೋಜನೆಗಳೆಲ್ಲ ಅವುಗಳಿಗೆ ಆಹುತಿಯಾಗುತ್ತಿವೆ. ಕಂಪೆನಿಗಳ ಕಾರ್ಯಾಚರಣೆ ಎಂದರೆ ಲಾಭ ಬಸಿದುಕೊಳ್ಳುವ ವ್ಯವಹಾರವಲ್ಲದೆ ಬೇರೇನಲ್ಲ. ಅವು ಇರುವುದೇ ಲಾಭ ಮಾಡಿಕೊಳ್ಳಲು. ಸರಕಾರಗಳು ಇರುವುದು ಅವುಗಳಿಗೆ ಗುತ್ತಿಗೆ ಕೊಟ್ಟು ಟೇಬಲ್ ಕೆಳಗೆ ಕಮಿಶನ್ ತೆಗೆದುಕೊಳ್ಳಲು. ಎಲ್ಲ ದೇಶಗಳಲ್ಲಿ ಪ್ರತಿಯೊಂದೂ ಖಾಸಗೀಕರಣದ ದಾಳಿಗೆ ಒಳಗಾಗುತ್ತಿದೆ. ಭೂಮಿಯ ಮೇಲೆ ಸಹಜವಾಗಿ ತನ್ನಷ್ಟಕ್ಕೆ ತಾನು ಬೆಳೆಯುವ ಗಿಡಮೂಲಿಕೆ ಸಸ್ಯಗಳಿಗೂ ಪೇಟೆಂಟ್ ಶಾಪ ಬಡಿದಿದೆ. ಕಲ್ಯಾಣ ರಾಷ್ಟ್ರಗಳ ಕಲ್ಪನೆಗಳು ಎಲ್ಲಿ ಹೋದವು ? ಪ್ರಜೆಗಳೇ ಸರ್ವಶ್ರೇಷ್ಠರು, ಅವರ ಮಧ್ಯೆಯೇ ಸಮಪಾಲು ಎಂಬ ಧ್ಯೇಯಗಳು ಸ್ವಲ್ಪ ಮರೆಯಾಗಿ, ಒಟ್ಟು ಜನಸಂಖ್ಯೆಯಲ್ಲಿ ಹಿಡಿ ಮಂದಿ ಕೂಟಗಳನ್ನು ರಚಿಸಿಕೊಂಡು ಇತರರ ರಕ್ತ ಹೀರುವ ಸಂಸ್ಕೃತಿ ಮೈದಾಳತೊಡಗಿದೆ. ಇದು ಕಂಪೆನಿಗಳ ಯುಗ. ಲಾಭ ಬಳಿದುಕೊಳ್ಳುವ ಯುಗ. ಜಾಲಗಳನ್ನು ವಿಸ್ತರಿಸುವ ಯುಗ. ಈ ಸಂಸ್ಕೃತಿಗೆ ತನ್ನದೇ ಆದ ಗತ್ತು ಇದೆ. ದವಲತ್ತು ಇದೆ. ಅಮೆರಿಕಾ ಇದರ ಪ್ರತಿರೂಪವಲ್ಲದೆ ಬೇರೇನಲ್ಲ. ಈ ಸಂಸ್ಕೃತಿಯ ಆಕ್ಟೋಪಸ್ ಬಾಹುಗಳು ಹಲವಾರು ದೇಶಗಳಲ್ಲಿ ಸಮಾಜವಾದಿ ವ್ಯವಸ್ಥೆಗಳನ್ನು ಬಲಿತೆಗೆದುಕೊಂಡವು. ಮತ್ತೆ ಅಂತಹ ಜನಪರ ವ್ಯವಸ್ಥೆಗಳಿಗಾಗಿ ಮಾನವ ಪೀಳಿಗೆ ಹೋರಾಡಬೇಕಾಗಿದೆ. ಈ ದುರುಳ ಸಂಸ್ಕೃತಿಗೆ ಜಗಳ ತೆಗೆಯುವುದು, ಭಂಡತನ, ಯುದ್ಧಗಳೆಂದರೆ ಬಲು ಮೋಜು. ಅದಕ್ಕೇ ಅಮೆರಿಕೆ ಬಾಂಬುಗಳ ತಯಾರಿಕೆಯ ತವರುಮನೆ. ಈ ಅಮೆರಿಕೆಗೆ ತಾನು ಬಾಂಬುಗಳನ್ನು ತಯಾರಿಸಿದರೆ ಸರಿ; ಇತರರು ತಯಾರಿಸಿದರೆ ತಪ್ಪು. ಇಪ್ಪತ್ತೊಂದನೆಯ ಶತಮಾನದ ಆರಂಭಿಕ ಓಟದಲ್ಲಿರುವ ನಾವು ಜಾಗತಿಕ ಮೌಲ್ಯಗಳಿಗೆ ಆದ ಗತಿಯನ್ನು ನೋಡಿ ಕಂಗಾಲಾಗುವ ಸ್ಥಿತಿ ಎದುರಿಸಬೇಕಾಗಿದೆ. ಯಾಕೆಂದರೆ ಭೇದ ಭಾವಗಳ ಮೌಲ್ಯಗಳನ್ನನುಸರಿಸಿ ೧೯೪೫ರಿಂದ ಇದುವರೆಗೆ ಕನಿಷ್ಠ ಎಪ್ಪತ್ತೈದು ಯುದ್ಧಗಳಾಗಿವೆ. ಮಿತಿಮೀರಿದ ವ್ಯಾಪಾರಿ ಬುದ್ಧಿ ಮತ್ತು ಬಂಡವಾಳಶಾಹಿಯ ಪರಾಕಾಷ್ಠೆಗೆ ಲಗಾಮು ಹಾಕಲು ತಕ್ಷಣದ ಪರಿಹಾರವಿಲ್ಲ. ಯಾಕೆಂದರೆ ಅದು ಅಷ್ಟು ಬಲಯುತವಾಗಿದೆ. ಕೆಲದೇಶಗಳಲ್ಲಿನ ಸಮಾಜವಾದಿ ವ್ಯವಸ್ಥೆಗಳನ್ನು ಪತನಗೊಳಿಸಿದ ಮೇಲಂತೂ ಅದು ಇನ್ನೂ ಕೊಬ್ಬಿದೆ.

ವಿಶ್ವಸಂಸ್ಥೆಯ ಬುನಾದಿ ಜಾಗತಿಕ ಆಡಳಿತದ ಬಗ್ಗೆ ಸ್ವಲ್ಪವಾದರೂ ಭರವಸೆ ಹುಟ್ಟಿಸಿತ್ತು. ಆದರೆ ಅಮೆರಿಕಾ ಮತ್ತು ರಶಿಯಾಗಳ ಶೀತಲ ಸಮರ ಇದಕ್ಕೆ ಅಡ್ಡಿಯಾಯಿತು. ವೀಟೊ ಅಧಿಕಾರ ಜಾಗತಿಕ ಭ್ರಾತೃತ್ವದ ಕಲ್ಪನೆಗೆ ಅವಹೇಳನದಂತಿದೆ. ಅಮೆರಿಕೆ ತಾನು ಜಾಗತಿಕ ಪೊಲೀಸ್ ಎಂದು ತಿಳಿದುಕೊಂಡಿದೆ. ಅದಕ್ಕೇ ಅಮೆರಿಕಾ ಪ್ರಪಂಚದ ಎಲ್ಲ ಸಮಸ್ಯೆಗಳಲ್ಲಿ ಮೂಗು ತೂರಿಸುವುದು.

೧೯೪೯ರ ಸಂವೈಧಾನಿಕ ಸಭೆಯಲ್ಲಿ ಬಿ. ಆರ್. ಅಂಬೇಡ್ಕರರು ಹೇಳಿರುವ ಕೆಳಗಿನ ಮಾತುಗಳು ಇಂದಿನ ಜಾಗತಿಕ ಸನ್ನಿವೇಶಕ್ಕೂ ಅತ್ಯಂತ ಸೂಕ್ತವಾಗಿ ಹೊಂದಿಕೊಳ್ಳುವಂತಿವೆ : "೨೦೦೦ದ ಜನವರಿ ೧ರಂದು ವಿರೋಧಾಭಾಸಗಳ ಹೊಸ ಯುಗವೊಂದಕ್ಕೆ ನಾವು ಕಾಲಿಡುತ್ತೇವೆ. ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಅಸಮಾನತೆ ಹೆಚ್ಚಾಗುತ್ತದೆ. ಆದ್ದರಿಂದ ಅಸಮಾನತೆಯನ್ನು ಸಾಧ್ಯವಾದಷ್ಟು ಬೇಗ ಕಿತ್ತೊಗೆಯಬೇಕು. ಇಲ್ಲದಿದ್ದರೆ ಇದರಿಂದ ಪ್ರಜಾಪ್ರಭುತ್ವವೇ ಗಂಡಾಂತರಕ್ಕೊಳಗಾಗಲಿದೆ. ಅಸಮಾನತೆಯ ಬೆಂಕಿಯಲ್ಲಿ ಬೇಯುವವರು ಶ್ರಮವಹಿಸಿ ಕಟ್ಟಿರುವ ಪ್ರಜಾಪ್ರಭುತ್ವವನ್ನೇ ಛಿದ್ರಗೊಳಿಸುತ್ತಾರೆ." ಇಂದು ಜಗತ್ತಿನಲ್ಲೆಲ್ಲ ಆಗುತ್ತಿರುವುದು ಇದೇ ಅಲ್ಲವೇ ? ಎಲ್ಲ ದೇಶಗಳಲ್ಲಿ ಉಗ್ರಗಾಮಿ ತಂಡಗಳು ಹುಟ್ಟಿಕೊಂಡಿವೆ. ಬುಡಮೇಲು ಕೃತ್ಯಗಳು ಮುಂದುವರಿದಿವೆ. ಅಂಬೇಡ್ಕರ್ ಹೇಳಿದ ಅಸಮಾನತೆಯನ್ನು ಬೇಗ ಕಿತ್ತೊಗೆಯುವ ಕ್ರಿಯೆಗೆ ಚಾಲನೆ ನೀಡಬೇಕಾಗಿದೆ. ಇಪ್ಪತ್ತೊಂದನೆಯ ಶತಮಾನದಲ್ಲಾದರೂ ಈ ಒತ್ತಾಯವನ್ನು ಮಾಡೋಣ. ಹೊಸ ಶತಮಾನ ಸಾಮಾಜಿಕ ನ್ಯಾಯದ ಯುಗವಾಗಲಿ.

ಸ್ವಾರ್ಥಪರ ವ್ಯಾಪಾರೀ ಜಾಗತೀಕರಣಕ್ಕೆ ವಿರುದ್ಧವಾಗಿ ಮುಂಬರುವ ದಿನಗಳಲ್ಲಿ ಜಗತ್ತಿನ ದೇಶಗಳೆಲ್ಲ ಪರಸ್ಪರ ಸಾಮುದಾಯಿಕ ಮೈತ್ರಿಯನ್ನು ಆಮದು ಮಾಡಿಕೊಳ್ಳುವ ಕ್ರಿಯೆ ಆರಂಭವಾಗಬೇಕಿದೆ. ಕಳೆದ ಶತಮಾನದುದ್ದಕ್ಕೂ ನೆಲವನ್ನು ಸೀಳಿ ಸೀಳಿ ನೂರಾರು ದೇಶಗಳನ್ನು ನಿರ್ಮಿಸಿದ್ದಾಯಿತು. ವಸಾಹತುಶಾಹಿ ನೀತಿ, ರಾಜ ಪ್ರಭುತ್ವಗಳು, ಬೇರೆ ಬೇರೆ ದೇಶಗಳ ಸ್ವಾತಂತ್ರ್ಯ ಹೋರಾಟಗಳು, ಈ ರೀತಿ ತುಂಡು ತುಂಡಾಗಿ ರಾಷ್ಟ್ರಗಳು ಉದಯವಾಗಲು ಕಾರಣವಾಗಿದೆ. ಆದರೆ ಮುಂದಿನ ದಿನಗಳಲ್ಲಿ ಈ ಪ್ರತ್ಯೇಕತೆಯ ನೀತಿಯನ್ನು ಕೈಬಿಡದೆ ಬೇರೆ ದಾರಿ ಇಲ್ಲ. ಯಾಕೆಂದರೆ ಜನಾಂಗೀಯವಾದ ಮತ್ತು ಕೋಮುವಾದಗಳಿಂದಾಗಿ ಈ ಪ್ರತ್ಯೇಕತೆಗೆ ಕೊನೆ ಎಂಬುದೇ ಇಲ್ಲ. ವಿವಿಧ ಜನರನ್ನು, ವಿವಿಧ ರಾಷ್ಟ್ರಗಳನ್ನು ಪರಸ್ಪರ ಹತ್ತಿರ ತರುವ ಕೆಲಸಗಳಾಗಬೇಕಿವೆ. ಸಂಸ್ಕೃತಿಗಳು ವಿಧವಿಧವಾಗಿವೆ. ಆದರೂ ಸಮನ್ವಯದಿಂದ ಬಾಳುವುದು ಈ ಪ್ರಕೃತಿಯ ಸುಂದರ ಪಾಠ. ಈ ವೈವಿಧ್ಯತೆಯಲ್ಲೇ ಸೊಗಸಿದೆ.

**ಕಲ್ಲಿನಾಥ ಮಾಧವನವರ**, ೭೩/ಎ, ೫ನೇ ಅಡ್ಡ ರಸ್ತೆ, ೭ನೇ ಮುಖ್ಯ ರಸ್ತೆ
ಕೈಗಾರಿಕಾ ನಗರ, ರಾಜಾಜಿನಗರ, ಬೆಂಗಳೂರು-೪೪

## ಕನಸು ಮತ್ತು ಅತೃಪ್ತಿ

**ದ**ಲಿತನಿರಲಿ, ಮೇಲ್ವರ್ಗದವನಿರಲಿ ಎಲ್ಲರಿಗೆ ಬಾಲ್ಯದ ಸವಿ ನೆನಪುಗಳು, ಕಹಿ ನೆನಪುಗಳು ಇದ್ದೇ ಇರುತ್ತವೆ. ಹಾಗೇ ಲೈಂಗಿಕ ಆನಂದದ ಬಯಕೆಗಳೂ ಇರುತ್ತವೆ. ಇವೆಲ್ಲ ಮನುಷ್ಯ ಸಹಜ ಬಯಕೆಗಳು. ಈ ವಿಷಯಗಳಲ್ಲಿ ಜಾತಿ, ಕೆಳವರ್ಗ, ಮೇಲ್ವರ್ಗ ಮುಂತಾದ ಪ್ರಜ್ಞಾನೋಟ ನನಗೆ ಇಷ್ಟವಿಲ್ಲ. ಈ ರೀತಿಯ ಆಲೋಚನೆಗಳನ್ನಿಟ್ಟುಕೊಂಡು ಬಸವಣ್ಣಿಯನ್ನು ನೆನೆದಾಗಲೆಲ್ಲ ಅವನು ಸಂತನಂತೆ ಕಾಣುತ್ತಾನೆ. ಬಸವಣ್ಣಿ ಎಂದೂ ನನ್ನ ಜೀವನಕ್ಕೆ ಕಡಿಮೆಯಾಯಿತೆಂದು ಕೊರಗಿದ್ದನ್ನು ಕಾಣೆ. ಕಡಿಮೆಯಾಯಿತು, ಇಲ್ಲವೆಂಬ ಅನುಭವ ಬರದೇ ಇರುವ ಸಂಸಾರಸ್ಥ ಇರಲಾರ. ಆದರೆ ಇದನ್ನೊಂದು ಕೊರಗೆಂದು ಪರಿತಪಿಸುವ ಬಗ್ಗೆ ನಾನಿಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ಹಣ ಕಡಿಮೆಯಾದಾಗ ನಮ್ಮ ಮನೆಗೆ ಬಂದು ಹಣಕ್ಕಾಗಿ ಕಾಡುವುದು ಅವನಿಗೆ ಒಂದು ಆಟವಾಗಿತ್ತು. ಇಲ್ಲೇ ಇದೇ ಬದುಕಿನ ದಾರಿ ಎಂದು ತೀರ್ಮಾನಿಸಿದಂತಿತ್ತು. ಯಾವತ್ತೂ ಅವನ ಮುಖದಲ್ಲಿ ಒಂದು ಸಂತೃಪ್ತ ಭಾವನೆಯನ್ನು ಕಾಣುತ್ತಿದ್ದೆ.

ನಮ್ಮೂರಿನವರೇ ಆದ ಬಿ. ಆರ್. ರಾಜೇಂದ್ರ, ಅವರನ್ನು ಗಮನಿಸುವಾಗಲೆಲ್ಲ ಅವರ ಮುಖದಲ್ಲಿ ಕೊರಗು ಮತ್ತು ಕನಸು ಎರಡೂ ಕಾಣುತ್ತವೆ. ಇವರು ಸಾಗರ ತಾಲ್ಲೂಕು ದಲಿತ ಸಂಘರ್ಷ ಸಮಿತಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ತಮಗೆ ಭೂಮಿಯಿಲ್ಲ, ಸಾಮಾಜಿಕ ನ್ಯಾಯ ದೊರಕಿಲ್ಲ, ತಮ್ಮ ಜನಾಂಗದ ಮೇಲೆ ಮೇಲ್ವರ್ಗದವರ ದಬ್ಬಾಳಿಕೆ ನಡೆಯುತ್ತಿದೆ ಮುಂತಾಗಿ ಕೊರಗು ಆಕ್ರೋಶಗಳಿವೆ. ರಾಜೇಂದ್ರ ಅವರು ಸಂತರಲ್ಲ. ಹೋರಾಟಗಾರರು, ಕನಸುಗಾರರು. ಕನಸು ಮತ್ತು ಹೋರಾಟ ಸರಿಯಾದದ್ದು. ಆದರೆ ಬಸವಣ್ಣಿಯ ವಿಷಯ ? ಅವನಿಗೆ ಮುಗ್ಧ ಅನ್ನೋಣವೇ ? ಇಂದಿಗೂ ಈ ರೀತಿಯ ಅನೇಕ ಮುಗ್ಧರನ್ನು ಹರಿಜನ ಕೇರಿಯಲ್ಲಿ ಕಾಣುತ್ತೇವೆ. ದಲಿತರ ಏಳ್ಗೆಗಾಗಿ ದಲಿತ ಸಂಘರ್ಷ ಸಮಿತಿಗಳು ಏನು ಮಾಡುತ್ತಿವೆ ಎಂಬ ಕಾಳಜಿ ಇವರಿಗಿಲ್ಲ. ಹಾಗೇ ದಲಿತ ಸಂಘರ್ಷ ಸಮಿತಿಗಳಲ್ಲಿ ಕೆಲಸ ಮಾಡುವವರಲ್ಲೇ ಪರಸ್ಪರ ತಿಕ್ಕಾಟಗಳಿವೆ. ಅವರೂ ಈ ಜನರನ್ನು ತಲುಪಿಲ್ಲವೇ ? ಇದನ್ನು ಪುಕಾರಾಗಿ ಹೇಳುತ್ತಿಲ್ಲ, ಮನುಷ್ಯ ಸಹಜ ಗುಣಗಳನ್ನು ಹುಡುಕುತ್ತ ನನಗೇ ನಾನು ಕೇಳಿಕೊಳ್ಳುತ್ತಿರುವೆ. ಇವೆಲ್ಲ ಎಲ್ಲ ಜಾತಿಯ ಜನರಲ್ಲೂ ಸಂಘಟನೆಗಳಲ್ಲೂ ಇರುವಂಥವು. ಆದರೆ ಮುಂದುವರಿದ ಜಾತಿಗಳಲ್ಲಿ ತಿಕ್ಕಾಟಗಳಿದ್ದರೆ ಹೇಗೋ ನಡೆಯುತ್ತದೆ. ದುರ್ಬಲ ವರ್ಗದ ಸಂಘಟನೆಗಳಲ್ಲಿ ತಿಕ್ಕಾಟ, ಬಿರುಕು ಉಂಟಾದರೆ ಬುದ್ಧಿವಂತರು ಸಂಘಟನೆ ಒಡೆದು ತಮ್ಮ ಬೇಳೆ ಬೇಯಿಸಿಕೊಳ್ಳುತ್ತಾರೆ. ಇದರಿಂದ ಸಂಘಟನೆಗೆ, ಆ ವರ್ಗದ ಜನರ ಏಳ್ಗೆಗೆ ಅಪಾಯಗಳು ಎದುರಾಗುತ್ತವೆ.

ಬಾಲ್ಯದ ಆನಂದ, ಲೈಂಗಿಕ ಆನಂದ ಇವೆಲ್ಲ ಬಾಳಿನಲ್ಲಿ ಒಂದು ತೆರನ ಬುತ್ತಿಗಂಟು ! ಈ ಬುತ್ತಿಯ ಗಂಟಿನ ಆಧಾರದಲ್ಲಿ ನಾವು ಬದುಕಿನಲ್ಲಿ ಕನಸನ್ನು ಕಾಣುತ್ತೇವೆ. ಅದು ನನ್ನ ಸುಖದ ಕನಸು ಮಾತ್ರ. ಆದರೆ ಕನಸಿನಂತೆ ಪ್ರಪಂಚ ಇಲ್ಲ. ಕನಸನ್ನು ನಮ್ಮ ಬದುಕಿನಲ್ಲಿ ಇಳಿಸಿಕೊಳ್ಳಲು ಹೋರಾಟ ಅನಿವಾರ್ಯ.

ಬಿ. ಆರ್. ರಾಜೇಂದ್ರ, ಅವರಂತಹ ಸಹಸ್ರಾರು ಕಪ್ಪು ಮುಖಗಳಲ್ಲಿ ಅತೃಪ್ತಿ ಮತ್ತು ಕನಸನ್ನೂ ಕಾಣುತ್ತೇನೆ. ಈ ಕನಸುಗಳು ನೆಲಕ್ಕಿಳಿಯುವುದೆಂದು ?

**ಬಂದಗದ್ದೆ ರಾಧಾಕೃಷ್ಣ**, ಕೆಳದಿ ಅಂಚೆ, ಶಿವಮೊಗ್ಗ -೫೭೭ ೪೦೦






# ನವಕರ್ನಾಟಕ ಸಾಹಿತ್ಯ ಸಂಪದ

ಸಂಪಾದಕರು

## ಡಾ॥ ಹಾ.ಮಾ.ನಾಯಕ  ಡಾ॥ ಪ್ರಧಾನ್ ಗುರುದತ್ತ
















ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕನ್ನಡ ಲೇಖಕರು

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯಂಥ ಪ್ರತಿಷ್ಠ ಪ್ರಶಸ್ತಿ ವಿಜೇತರಾದ ಕನ್ನಡ ಸಾಹಿತಿಗಳ ಜೀವನ, ಸಾಧನೆಗಳನ್ನು ಸಾಹಿತ್ಯಾಭಿಮಾನಿ ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದು ಈ ಮಾಲಿಕೆಯ ಉದ್ದೇಶ. ಮುಂದಿನ ನಾಲ್ಕು ವರ್ಷಗಳ ಪ್ರತಿ ಜನವರಿ 26 ಮತ್ತು ಆಗಸ್ಟ್ 15 ಈ ಸಂದರ್ಭಗಳಲ್ಲಿ ತಲಾ ಆರು ಕೃತಿಗಳನ್ನು ಬಿಡುಗಡೆಗೊಳಿಸುವ ಗುರಿ ಇರಿಸಿಕೊಳ್ಳಲಾಗಿದೆ. ಜನವರಿ 26, 2001ರಂದು ಮೊದಲ ಕಂತಿನ ಹನ್ನೆರಡು ಕೃತಿಗಳು ಬಿಡುಗಡೆಯಾಗಲಿವೆ. ಮೊದಲ ಕಂತಿನಲ್ಲಿ, ಸರ್ವಶ್ರೀ ಕುವೆಂಪು, ರಂ. ಶ್ರೀ. ಮುಗಳಿ, ದ. ರಾ. ಬೇಂದ್ರೆ, ಶಿವರಾಮ ಕಾರಂತ, ವಿ. ಕೃ. ಗೋಕಾಕ, ದೇವುಡು, ಬಿ. ಪುಟ್ಟಸ್ವಾಮಯ್ಯ, ಡಿ. ವಿ. ಗುಂಡಪ್ಪ, ಎ. ಎನ್. ಮೂರ್ತಿರಾವ್, ಚದುರಂಗ, ವ್ಯಾಸರಾಯ ಬಲ್ಲಾಳ, ಚಂದ್ರಶೇಖರ ಕಂಬಾರ - ಈ ಮಹನೀಯರ ಕುರಿತು ನಾಡಿನ ಖ್ಯಾತ ಲೇಖಕರು ಬರೆದಿರುವ ಕೃತಿಗಳು ಬಿಡುಗಡೆಯಾಗಲಿವೆ.













**ಸಾಹಿತಿಗಳ ಬಹುವರ್ಣಚಿತ್ರವಿರುವ ಮುಖಪುಟ ಸಹಿತ ಉತ್ತಮ ಕಾಗದದಲ್ಲಿ ಮುದ್ರಣಗೊಂಡಿರುವ ಡೆಮಿ ಅಷ್ಟಾಕಾರದ ಪ್ರತಿ ಪುಸ್ತಕದಲ್ಲೂ ಸುಮಾರು 120 ಪುಟಗಳಿರುತ್ತವೆ. ಪ್ರತಿಯೊಂದು ಕೃತಿಯ ಬೆಲೆ ರೂ. 60. ಮೊದಲ ಕಂತಿನ ಹನ್ನೆರಡು ಕೃತಿಗಳನ್ನು ಒಟ್ಟಿಗೆ ತರಿಸಿಕೊಳ್ಳುವವರಿಗೆ ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 500. ಅಂಚೆ ವೆಚ್ಚ ರೂ. 25 ಪ್ರತ್ಯೇಕ. ಜನವರಿ 25, 2001ರ ಒಳಗಾಗಿ ಪೂರ್ತಿ ಹಣ ಮುಂಗಡ ಪಾವತಿಸಿ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಿ.**

**ಹನ್ನೆರಡು ಸಂಪುಟಗಳಿಗೆ ಪ್ರಕಟಣಾಪೂರ್ವ ರಿಯಾಯಿತಿ ಬೆಲೆ ರೂ. 500/- ಮಾತ್ರ**

ಪ್ರತಿಯೊಂದು ಮನೆಯ, ಶಾಲೆಯ ಗ್ರಂಥ ಭಂಡಾರದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿಗಳಿವು

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂ. ಪೆ. 5159, ಬೆಂಗಳೂರು - 560 001

ಶಾಖೆಗಳು

| | | | | |
|---|---|---|---|---|
| ಕೆಂಪೇಗೌಡ ವೃತ್ತ | ಗಾಂಧಿನಗರ | ಕೆ.ಎಸ್.ಆರ್.ರಸ್ತೆ | ರಾಮಸ್ವಾಮಿ ವೃತ್ತ | ಸ್ಟೇಷನ್ ರಸ್ತೆ |
| ಬೆಂಗಳೂರು-9 | ಬೆಂಗಳೂರು-9 | ಮಂಗಳೂರು-1 | ಮೈಸೂರು-24 | ಗುಲ್ಬರ್ಗಾ-2 |
| ☎ : 2872385 | ☎ : 2251382 | ☎ : 441016 | ☎ : 424094 | ☎ : 24302 |

RNI Regn. No. KARKAN/1999/614 REGD. CPMG / KA / BG – 7 / 2000 Licenced to post without prepayment. Licence No. WPP(CO)-14

# ಶುಭ ಘಳಿಗೆಯ ಶುಭಾಗಮನ

ಎಚ್‌ಎಮ್‌ಟಿ ಕ್ವಾರ್ಟ್ಸ್ ಇವರಿಂದ
ಶ್ರೇಯಸ್. 23.5 ಕ್ಯಾರೆಟ್ ಚಿನ್ನದ
ಲೇಪನವುಳ್ಳ ಪ್ರತಿ ಗಡಿಯಾರವೂ
ಶುಭಾರಂಭದ ಪ್ರತೀಕ. ನಿಮಗೆ
ಹಾಗೂ ನಿಮ್ಮ ಮೆಚ್ಚಿನವರಿಗೆ
ಅತ್ಯಾಕರ್ಷಕ ಮಾಡೆಲ್‌ಗಳಲ್ಲಿ.
ಕೇವಲ ರೂ. 495 ಕ್ಕೆ.

*Shreyas*
QUARTZ
*from*
hmt

*ಪರಿಶುದ್ಧ 23.5 ಕ್ಯಾರೆಟ್ ಚಿನ್ನದ ಲೇಪನ*

ಅಸಲಿ ಎಚ್‌ಎಮ್‌ಟಿ ಗಡಿಯಾರಗಳನ್ನು ಅಧಿಕೃತ ಮಾರಾಟ ಮಳಿಗೆಯಿಂದ ಕೊಳ್ಳಿರಿ.
ಬಿಲ್ ಹಾಗೂ ಗ್ಯಾರಂಟಿ ಕಾರ್ಡ್ ಕೇಳಿ ಪಡೆಯಿರಿ.




Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna